



# ಶ್ರೀಮದ್ಭಾಗವತ ಮಹಾಪುರಾಣ

## [ಶ್ರೀಮದ್ಭಾಗವತ ಮಹಾಪುರಾಣ-ಪ್ರಥಮಸ್ಕಂಧ]

[ಸುಮಾರು ಐದು ಸಾವಿರ ವರ್ಷಗಳ ಹಿಂದೆ, ದ್ವಾಪರದ ಕೊನೆಯಲ್ಲಿ ವೇದಗಳನ್ನು ವಿಂಗಡಿಸಿ ಬಳಕೆಗೆ ತಂದ ಮಹರ್ಷಿ ವೇದವ್ಯಾಸರೇ, ಅವುಗಳ ಅರ್ಥವನ್ನು ತಿಳಿಯಾಗಿ ವಿವರಿಸಲು ಹದಿನೆಂಟು ಪುರಾಣಗಳನ್ನು ರಚಿಸಿದರು. ಈ ಪುರಾಣಗಳಲ್ಲಿ ಹೆಚ್ಚು ಪ್ರಸಿದ್ಧವಾದುದು ಹಾಗೂ ಪುರಾಣಗಳ ರಾಜ ಎನ್ನಬಹುದಾದ ಮಹಾಪುರಾಣ ಭಾಗವತ.

ಸಾವು ಎನ್ನುವ ಹಾವು ಬಾಯಿ ತೆರೆದು ನಿಂತಿದೆ. ಜಗತ್ತಿನ ಎಲ್ಲಾ ಜೀವಜಾತಗಳು ಅಸಾಯಕವಾಗಿ ಅದರ ಬಾಯಿಯೊಳಗೆ ಸಾಗುತ್ತಿವೆ. ಈ ಹಾವಿನಿಂದ ಪಾರಾಗುವ ಉಪಾಯ ಉಂಟೇ? ಉಂಟು, ಶುಕಮುನಿ ನುಡಿದ ಶ್ರೀಮದ್ಭಾಗವತವೇ ಅಂಥಹ ದಿವ್ಯೌಷಧ. ಜ್ಞಾನ-ಭಕ್ತಿ ವಿರಳವಾಗಿರುವ ಕಲಿಯುಗದಲ್ಲಂತೂ ಇದು ತೀರಾ ಅವಶ್ಯವಾದ ದಾರಿದೀಪ.

ಭಾಗವತದಲ್ಲಿ ಅನೇಕ ಕಥೆಗಳಿವೆ. ಆದರೆ ನಮಗೆ ಈ ಕಥೆಗಳಿಗಿಂತ ಅದರ ಹಿಂದಿರುವ ಸಂದೇಶ ಮುಖ್ಯ. ಒಂದು ತತ್ತ್ವದ ಸಂದೇಶಕ್ಕಾಗಿ ಒಂದು ಕಥೆ ಹೊರತು, ಅದನ್ನು ವಾಸ್ತವವಾಗಿ ನಡೆದ ಘಟನೆ ಎಂದು ತಿಳಿಯಬೇಕಾಗಿಲ್ಲ.

ಮನಸ್ಸು ಶುದ್ಧವಾಗಿದ್ದರೆ ಎಲ್ಲವೂ ಶುದ್ಧ. ಮನಸ್ಸು ಮಲೀನವಾದರೆ ಮೈತೊಳೆದು ಏನು ಉಪಯೋಗ? ನಮ್ಮ ಮನಸ್ಸನ್ನು ತೊಳೆದು ಶುದ್ಧ ಮಾಡುವ ಸಾಧನ ಈ ಭಾಗವತ. ಶ್ರದ್ಧೆಯಿಂದ ಭಾಗವತ ಓದಿದರೆ ಮನಸ್ಸು ಪರಿಶುದ್ಧವಾಗಿ ಭಗವಂತನ ಚಿಂತನೆಗೆ ತೊಡಗುತ್ತದೆ. ಬಿಡುಗಡೆಯ ದಾರಿಯನ್ನು ತೆರೆದು ತೋರಿಸುತ್ತದೆ.

ಪೂಜ್ಯ ಬನ್ನಂಜೆ ಗೋವಿಂದಾಚಾರ್ಯರು ತಮ್ಮ ಭಾಗವತ ಪ್ರವಚನದಲ್ಲಿ ಒಬ್ಬ ಸಾಮಾನ್ಯನಿಗೂ ಅರ್ಥವಾಗುವಂತೆ ವಿವರಿಸಿದ ಭಾಗವತದ ಅರ್ಥಸಾರವನ್ನು ಇ-ಪುಸ್ತಕ ರೂಪದಲ್ಲಿ ಸೆರೆ ಹಿಡಿದು ಆಸಕ್ತ ಅಧ್ಯಾತ್ಮ ಬಂಧುಗಳಿಗೆ ತಲುಪಿಸುವ ಒಂದು ಕಿರುಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.]

Visit us @: http://bhagavatainkannada.blogspot.in/ ಚಿತ್ರಕೃಪೆ: ಅಂತರ್ಜಾಲ

# ಪರಿವಿಡಿ

# ಓದುವ ಮೊದಲು

ಪೂಜ್ಯ ಬನ್ನಂಜೆ ಗೋವಿಂದಾಚಾರ್ಯರು ಒಬ್ಬ ಸಾಮಾನ್ಯ ಮನುಷ್ಯನಿಗೆ ಅರ್ಥವಾಗುವಂತೆ ವಿವರಿಸಿದ 'ಭಾಗವತ ಪ್ರವಚನ'ವನ್ನು ಬಳಸಿಕೊಂಡು ಇಲ್ಲಿ ಭಾಗವತದ ವಿವರಣೆಯನ್ನು ಪ್ರಸ್ತುತಪಡಿಸಲಾಗಿದೆ. ಓದುಗರು ಸಾಧ್ಯವಾದರೆ ಆಚಾರ್ಯರ ಪ್ರವಚನದ ಧ್ವನಿಸುರುಳಿಯನ್ನು ಕೇಳಿಸಿಕೊಳ್ಳಬೇಕಾಗಿ ಇಲ್ಲಿ ವಿನಂತಿಸಿಕೊಳ್ಳುತ್ತಿದ್ದೇವೆ. ಧ್ವನಿಸುರುಳಿಯನ್ನು ಕೇಳಲು ಸಾಧ್ಯವಾಗದೇ ಇದ್ದವರಿಗೆ ಅನುಕೂಲವಾಗಲೆಂದು ಈ ಪುಸ್ತಕವನ್ನು ಬರೆಯಲಾಗಿದೆ. ಅಧ್ಯಾತ್ಮ ಬಂಧುಗಳು ಈ ಮಹಾ ಗ್ರಂಥದಲ್ಲಡಗಿರುವ ಅಪೂರ್ವ ಅರ್ಥಸಾರವನ್ನು ಅರಿತು ತಮ್ಮ ಜೀವನವನ್ನು ಪಾವನಗೊಳಿಸಿಕೊಳ್ಳಬೇಕಾಗಿ ಪ್ರಾರ್ಥಿಸುತ್ತೇವೆ.

# ವಿಜ್ಞಾಪನೆ



ಸಂಪರ್ಕ ಕೊಂಡಿ: http://bhagavatainkannada.blogspot.in/

# ಪ್ರಸ್ತಾವನೆ

ಭಗವಾನ್ ವೇದವ್ಯಾಸರು ವೇದವನ್ನು ನಾಲ್ಕು ವಿಭಾಗ ಮಾಡಿ ನಮಗೆ ಕೊಡುಗೆಯಾಗಿ ಕೊಟ್ಟಿದ್ದಾರೆ. ವೇದಗಳು ಭಾರತೀಯ ತತ್ತ್ವಶಾಸ್ತ್ರದ ಅಡಿಗಲ್ಲು. ವೇದದ ಭಾಷೆ ತುಂಬಾ ಕ್ಲಿಷ್ಟ. ಅದನ್ನು ಜನಸಾಮಾನ್ಯರು ನೇರವಾಗಿ ಅರ್ಥಮಾಡಿಕೊಳುವುದು ಕಷ್ಟ. ಹಾಗಾಗಿ ವೇದಗಳಿಗೆ ಪೂರಕವಾಗಿ ವೇದಾರ್ಥ ಚಿಂತನೆ ನಡೆಯಬೇಕು ಎನ್ನುವ ಉದ್ದೇಶದಿಂದ ವೇದವ್ಯಾಸರು ವೇದಗಳಿಗೆ ಅನ್ವಯವಾಗಿ ಇತಿಹಾಸ ಪುರಾಣಗಳನ್ನು ರಚಿಸಿದರು. ರಾಮಾಯಣ ಮತ್ತು ಮಹಾಭಾರತ ವ್ಯಾಸರು ನಿರ್ಮಿಸಿದ ಇತಿಹಾಸಗಳಾದರೆ, ಪಂಚರಾತ್ರ ಭಗವಂತನ ನಾರಾಯಣ ರೂಪದಿಂದ ಆವಿರ್ಭಾವವಾಗಿರುವ ಇತಿಹಾಸ ಗ್ರಂಥ. ವೇದವ್ಯಾಸರು ರಚಿಸಿದ ಮಹಾಪುರಾಣಗಳು ಹದಿನೆಂಟು. ಅವುಗಳೆಂದರೆ:

1. ಬ್ರಾಹ್ಮ ಅಥವಾ ಬ್ರಹ್ಮಪುರಾಣ [೧೦,೦೦೦ ಶ್ಲೋಕಗಳು]
2. ಪಾದ್ಮ ಅಥವಾ ಪದ್ಮಪುರಾಣ [೫೫,೦೦೦ ಶ್ಲೋಕಗಳು]
3. ವೈಷ್ಣವ ಅಥವಾ ವಿಷ್ಣು ಪುರಾಣ [೨೩,೦೦೦ ಶ್ಲೋಕಗಳು]
4. ಶೈವ ಅಥವಾ ಶಿವ ಪುರಾಣ ಅಥವಾ ವಾಯು ಪುರಾಣ[೨೪,೦೦೦ ಶ್ಲೋಕಗಳು]
5. ಭಾಗವತ ಪುರಾಣ [೧೮,೦೦೦ ಶ್ಲೋಕಗಳು]
6. ನಾರದೀಯ ಅಥವಾ ನಾರದ ಪುರಾಣ [೨೫,೦೦೦ ಶ್ಲೋಕಗಳು]
7. ಮಾರ್ಕಂಡೇಯ ಪುರಾಣ [೯,೦೦೦ ಶ್ಲೋಕಗಳು]
8. ಆಗ್ನೇಯ ಅಥವಾ ಅಗ್ನಿ ಪುರಾಣ [೧೫,೪೦೦ ಶ್ಲೋಕಗಳು]
9. ಭವಿಷ್ಯತ್ ಪುರಾಣ [೧೪,೫೦೦ ಶ್ಲೋಕಗಳು]
10. ಬ್ರಹ್ಮವೈವರ್ತ ಪುರಾಣ [೧೮,೦೦೦ ಶ್ಲೋಕಗಳು]
11. ಲೈಂಗ ಅಥವಾ ಲಿಂಗ ಪುರಾಣ [೧೧,೦೦೦ ಶ್ಲೋಕಗಳು]
12. ವಾರಾಹ ಅಥವಾ ವರಾಹ ಪುರಾಣ [೨೪,೦೦೦ ಶ್ಲೋಕಗಳು]
13. ಸ್ಕಾಂದ ಅಥವಾ ಸ್ಕಂದ ಪುರಾಣ [೮೧,೧೦೦ ಶ್ಲೋಕಗಳು]
14. ವಾಮನ ಪುರಾಣ [೧೦,೦೦೦ ಶ್ಲೋಕಗಳು]
15. ಕೌರ್ಮ ಅಥವಾ ಕೂರ್ಮ ಪುರಾಣ [೧೭,೦೦೦ ಶ್ಲೋಕಗಳು]
16. ಮಾತ್ಸ್ಯ ಅಥವಾ ಮತ್ಸ್ಯ ಪುರಾಣ [೧೪,೦೦೦ ಶ್ಲೋಕಗಳು]
17. ಗಾರುಡ ಅಥವಾ ಗರುಡ ಪುರಾಣ[೧೯,೦೦೦ ಶ್ಲೋಕಗಳು]
18. ಬ್ರಹ್ಮಾಂಡ ಪುರಾಣ [೧೨,೦೦೦ ಶ್ಲೋಕಗಳು]

ಈ ಹದಿನೆಂಟು ಪುರಾಣಗಳಲ್ಲಿ ಒಟ್ಟು ನಾಲ್ಕು ಲಕ್ಷ ಶ್ಲೋಕಗಳಿವೆ. ಇದಕ್ಕೆ ಮಹಾಭಾರತದ ಒಂದು ಲಕ್ಷ ಶ್ಲೋಕ ಸೇರಿದರೆ ಈ ವಾಙ್ಮಯದ ವ್ಯಾಪ್ತಿ ಐದು ಲಕ್ಷ ಶ್ಲೋಕಗಳು!

ಮುಖ್ಯವಾಗಿ ಇಂದು ಲಭ್ಯವಿರುವ ಇತಿಹಾಸಗಳು ಮೂರು. ಅವುಗಳೆಂದರೆ: ರಾಮಾಯಣ, ಮಹಾಭಾರತ ಮತ್ತು ಪಂಚರಾತ್ರ. ವ್ಯಾಸರು ರಚಿಸಿರುವ ಮೂಲರಾಮಾಯಣ ಲಭ್ಯವಿಲ್ಲ. ಈಗ ಲಭ್ಯವಿರುವ ರಾಮಾಯಣ ವಾಲ್ಮೀಕಿ ರಚಿತ. ಪಂಚರಾತ್ರ ವ್ಯಾಸರೂಪದಿಂದ ರಚಿತವಾದುದಲ್ಲ. *'ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ'-*

ಅದು ಸ್ವಯಂ ನಾರಾಯಣ ರೂಪದಿಂದ ರಚಿತವಾದುದು. ಸೃಷ್ಟಿಯ ಆದಿಯಲ್ಲಿ ಬ್ರಹ್ಮ-ನಾರಾಯಣ ಸಂವಾದ ರೂಪದಲ್ಲಿ ಪಂಚರಾತ್ರ ಸೃಷ್ಟಿಯಾಯಿತು ಎನ್ನುತ್ತಾರೆ. ವ್ಯಾಸರೂಪದಲ್ಲಿ ರಚಿತವಾಗಿರುವ ಇತಿಹಾಸವೆಂದರೆ ಮಹಾಭಾರತ.

ಸಾಮಾನ್ಯವಾಗಿ ವೇದವ್ಯಾಸರಿಂದ ರಚಿತವಾದ ಪುರಾಣಗಳು ಹದಿನೆಂಟು ಮತ್ತು ಉಪಪುರಾಣಗಳು ಹದಿನೆಂಟು ಎಂದು ಹೇಳುತ್ತಾರೆ. ಇಂದು ಹದಿನೆಂಟು ಮಹಾಪುರಾಣಗಳು ಖಚಿತವಾಗಿ ಇವೆ ಎನ್ನುವುದು ತಿಳಿಯುತ್ತದೆ. ಆದರೆ ಉಪಪುರಾಣಗಳು ಹದಿನೆಂಟಕ್ಕಿಂತ ಹೆಚ್ಚು ಸಿಗುತ್ತಿದ್ದು, ಅವೆಲ್ಲವನ್ನೂ ವೇದವ್ಯಾಸರೇ ರಚಿಸಿದ್ದಾರೆ ಎಂದು ಹೇಳಲು ಖಚಿತವಾದ ಆಧಾರ ದೊರೆಯುತ್ತಿಲ್ಲ.

ಹದಿನೆಂಟು ಮಹಾಪುರಾಣಗಳಲ್ಲಿ ಬಹಳ ಪ್ರಸಿದ್ಧವಾದ, ಹೆಚ್ಚು ಮಹತ್ವವಾದ, ಪುರಾಣಗಳಲ್ಲೇ ಸಾರಭೂತವಾದ ಪುರಾಣ-ಭಾಗವತ. ಭಾಗವತಕ್ಕೆ ಸಾವಿರಾರು ವರ್ಷಗಳ ವ್ಯಾಖ್ಯಾನ ಪರಂಪರೆ ಇರುವುದರಿಂದ, ಬೇರೆ ಪುರಾಣಗಳಂತೆ ಭಾಗವತ ಹೆಚ್ಚು ಪಾಠಾಂತರಗೊಂಡಿಲ್ಲ. ಭಾಗವತದ ವ್ಯಾಖ್ಯಾನಗಳಲ್ಲಿ ಬಹಳ ಪ್ರಾಚೀನ ವ್ಯಾಖ್ಯಾನ ಚಿತ್ಸುಖಿ ವ್ಯಾಖ್ಯಾನ. ಇದು ಶಂಕರಾಚಾರ್ಯರ ಶಿಷ್ಯಕೋಟಿಯಲ್ಲಿ ಒಬ್ಬರಾದ ಚಿತ್ಸುಖಾಚಾರ್ಯರು ಬರೆದ ವ್ಯಾಖಾನ. ಇದರಿಂದ ನಮಗೆ ತಿಳಿಯುವುದೇನೆಂದರೆ: ಭಾಗವತ ಶಂಕರಾಚಾರ್ಯರ ಕಾಲದಲ್ಲೂ ಇದ್ದುದರಿಂದ, ಇದು ಹನ್ನೆರಡನೇ ಶತಮಾನದಲ್ಲಿ ನಿರ್ಮಾಣವಾದ ಅರ್ವಾಚೀನ ಗ್ರಂಥ ಅಲ್ಲ ಎನ್ನುವುದು. ಪ್ರಾಚೀನ ವ್ಯಾಖ್ಯಾನಗಳಲ್ಲಿ ಶ್ರೀಧರಸ್ವಾಮಿ ಬರೆದ ಟೀಕೆ ಅತ್ಯಂತ ಜನಪ್ರಿಯವಾಗಿದೆ.

ಏಳು ಶತಮಾನಗಳ ಹಿಂದೆ **'ಯಾವ ಹೆಸರಿನಿಂದ ಕರೆದರೂ ಓಗೊಡುವ ದೇವರು ಒಬ್ಬನೇ'** ಎಂದು ಸಾರಿದ ಆಚಾರ್ಯ ಮಧ್ವರು ಭಾಗವತದ ಅರ್ಥ ನಿರ್ಣಯಕ್ಕಾಗಿಯೇ "ಭಾಗವತ ತಾತ್ಪರ್ಯ ನಿರ್ಣಯ" ಎನ್ನುವ ಗ್ರಂಥ ರಚನೆ ಮಾಡಿದರು. ಐದು ವರ್ಷ ಬಾಲಕನಿದ್ದಾಗಲೇ ಪುರಾಣಶ್ಲೋಕಗಳನ್ನು ಮತ್ತು ಅದರ ನಿಜ ಅರ್ಥವನ್ನು ನಿರರ್ಗಳವಾಗಿ ಹೇಳಿ ಅಚ್ಚರಿ ಮೂಡಿಸಿದ ಮಧ್ವಾಚಾರ್ಯರು ರಚಿಸಿದ, 'ಭಾಗವತ ತಾತ್ಪರ್ಯ ನಿರ್ಣಯ' ಮೂಲಪ್ರತಿ, 'ಸರ್ವಮೂಲಗ್ರಂಥ' ಇಂದಿಗೂ ಲಭ್ಯವಿದೆ. ಹೀಗೆ ಭಾಗವತಕ್ಕೆ ಪುರಾತನವಾದ ಪಾಠ-ಪ್ರವಚನದ ವ್ಯಾಖ್ಯಾನ ಪರಂಪರೆ ಇರುವುದರಿಂದ, ಇಲ್ಲಿ ಸುಮಾರಾಗಿ ಶುದ್ಧಪಾಠವನ್ನು ಕಾಣಬಹುದು. ಇದೇ ಕಾರಣದಿಂದ ಪೌರಾಣಿಕವಾದ ಪ್ರಮೇಯಗಳಿಗೆ ಸಮರ್ಥನೆ ಮಾಡಬಹುದಾದ ಪುರಾಣವಾಗಿ ಭಾಗವತ ಉಳಿದಿದೆ.

ಹಿಂದೆ ಹೇಳಿದಂತೆ: ವೇದವ್ಯಾಸರು ವೇದದ ಅರ್ಥನಿರ್ಣಯಕ್ಕೋಸ್ಕರ ಹದಿನೆಂಟು ಪುರಾಣಗಳು ಮತ್ತು ಭಾರತವನ್ನು ನಮಗೆ ನೀಡಿದ್ದಾರೆ. ಈ ಹದಿನೆಂಟು ಪುರಾಣಗಳಲ್ಲಿ ಒಂದೊಂದು ಕಡೆ ವೇದದ ಒಂದೊಂದು ಭಾಗಕ್ಕೆ ಒತ್ತುಕೊಟ್ಟಿರುವುದನ್ನು ನಾವು ಕಾಣಬಹುದು. ***"ಇತಿಹಾಸಪುರಾಣಭ್ಯಾಂ ವೇದಂ ಸಮುಪಬೃಂಹಯೇತ್"*** ಇತಿಹಾಸ ಪುರಾಣಗಳಿಂದಲೇ ವೇದ ಮಂತ್ರಗಳಿಗೆ ಅರ್ಥ ಹಚ್ಚಬೇಕು, ಇಲ್ಲವಾದರೆ ಅಪಾರ್ಥವೋ ಅನರ್ಥವೋ ಆಗುವ ಅಪಾಯವುಂಟು ಎಂದು ಮಹಾಭಾರತ ನಮ್ಮನ್ನು ಎಚ್ಚರಿಸುತ್ತದೆ.

ಭಾಗವತ ಎನ್ನುವ ಹೆಸರಲ್ಲೇ ಎರಡು ಪುರಾಣಗಳಿವೆ. ಶ್ರೀಮದ್ಭಾಗವತ ಮತ್ತು ದೇವೀಭಾಗವತ. ಉತ್ತರ ಭಾರತದಲ್ಲಿನ ಶಕ್ತಿ ಆರಾಧಕರು ದೇವೀಭಾಗವತವನ್ನು ಮಹಾಪುರಾಣ ಮತ್ತು ಶ್ರೀಮದ್ಭಾಗವತವನ್ನು ಉಪಪುರಾಣ ಎನ್ನುತ್ತಾರೆ. ಆದರೆ ದಕ್ಷಿಣಭಾರತದವರು ಮತಭೇದವಿಲ್ಲದೆ, ಶ್ರೀಮದ್ಭಾಗವತವೇ ಹದಿನೆಂಟು ಪುರಾಣಗಳಲ್ಲಿ ಸೇರಿದ ಮಹಾಪುರಾಣ, ದೇವೀಭಾಗವತ ಅಲ್ಲಾ ಎನ್ನುತ್ತಾರೆ.

ಭಾಗವತದ ವೈಶಿಷ್ಟ್ಯವೇನು? ಎಲ್ಲಾ ಪುರಾಣಗಳನ್ನು ವ್ಯಾಸರೇ ಸ್ವಯಂ ನಿರ್ಮಿಸಿರುವಾಗ, ಭಾಗವತಕ್ಕೆ ಶ್ರೇಷ್ಠತೆ ಹೇಗೆ ಬಂತು ಎನ್ನುವ ಪ್ರಶ್ನೆ ಕೆಲವರಲ್ಲಿದೆ. ಇದಕ್ಕೆ ಉತ್ತರ ಸುಲಭ. ಪುರಾಣಗಳೆಲ್ಲವೂ ಶ್ರೇಷ್ಠ. ಅದರಲ್ಲಿ ಮೇಲು-

ಕೀಳು ಇಲ್ಲ. ಆದರೆ ಅದನ್ನು ಸ್ವೀಕರಿಸುವ ನಮ್ಮ ಗ್ರಹಣ ಪಾತ್ರೆಯಲ್ಲಿ ವ್ಯತ್ಯಾಸವಿದೆ! ಅನೇಕ ಪುರಾಣಗಳು ನಾವು ಸಾತ್ವಿಕರಲ್ಲದಿದ್ದರೆ ನಮ್ಮನ್ನು ರಾಜಸದತ್ತ ಅಥವಾ ತಾಮಸದತ್ತ ಒಯ್ಯಬಲ್ಲವು! ಅಲ್ಲಿ ಪುರಾಣ ರಾಜಸ ಅಥವಾ ತಾಮಸ ಅಲ್ಲ, ನಾವು ತಾಮಸರಾಗಿ ಅಥವಾ ರಾಜಸರಾಗಿ ಆ ಪುರಾಣ ಓದಿದರೆ, ಅಲ್ಲಿ ನಮಗೆ ತಾಮಸ ಅಥವಾ ರಾಜಸದ ಒತ್ತು ಕಾಣುತ್ತದೆ ಅಷ್ಟೇ.

ಏಕೆ ಸ್ವಯಂ ಭಗವಂತನ ಅವತಾರಿಯಾದ ವೇದವ್ಯಾಸರು ಇಂತಹ ಗ್ರಂಥ ರಚನೆ ಮಾಡಿದರು ಎನ್ನುವುದು ನಿಮ್ಮ ಮುಂದಿನ ಪ್ರಶ್ನೆಯಾಗಿದ್ದರೆ, ಅದಕ್ಕೆ ಉತ್ತರ ಅಷ್ಟಮೂರ್ತಿಯಾದ ಭಗವಂತ! ನಮಗೆ ತಿಳಿದಂತೆ ಭಗವಂತನ ವ್ಯಾಪಾರ ಅಷ್ಟ ವಿಧ. ಅವುಗಳೆಂದರೆ: ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ. ಇಲ್ಲಿ ಜ್ಞಾನ ಮತ್ತು ಅಜ್ಞಾನ ಎರಡನ್ನೂ ಕೊಡುವವನು ಭಗವಂತ! ಆದ್ದರಿಂದ ಎಲ್ಲವನ್ನೂ ನಿಚ್ಚಳವಾಗಿ ಪುರಾಣಗಳಲ್ಲಿ ಹೇಳಿಲ್ಲ. ಅಲ್ಲಿ ಯಾರಿಗೆ ಜ್ಞಾನ ಬರಬೇಕೋ ಅವರಿಗೆ ಜ್ಞಾನ, ಹಾಗೂ ಯಾರಿಗೆ ಅಜ್ಞಾನ ಬರಬೇಕೋ ಅವರಿಗೆ ಅಜ್ಞಾನ ಬರುವಂತೆ ಹೇಳಲಾಗಿದೆ. ಅಲ್ಲಿ ಮೇಲ್ನೋಟಕ್ಕೆ ಕಾಣುವ ಅರ್ಥ ಒಂದಾದರೆ, ಅದನ್ನು ಬಗೆದು ಒಳನೋಟದಲ್ಲಿ ನೋಡಿದರೆ ಇರುವ ಅರ್ಥವೇ ಇನ್ನೊಂದು! ಹಾಗಾಗಿ ಗೊಂದಲ ಮಾಡಿಕೊಂಡವರಿಗೆ ವಿಪರೀತ ಅರ್ಥವಾಗುವ ಸಾಧ್ಯತೆ ಹೆಚ್ಚು. ಈ ಕಾರಣದಿಂದ ನಾವು ವೇದವ್ಯಾಸರು ತಾಮಸ ಪುರಾಣ ಬರೆದರು ಎಂದು ಹೇಳುವುದು ತಪ್ಪು. ಪುರಾಣಗಳು ತಾಮಸ ಅಥವಾ ರಾಜಸ ಅರ್ಥ ಕೊಡುವುದು ಅದನ್ನು ಓದುವವರ ಯೋಗ್ಯತೆಗೆ ಸಂಬಂಧಿಸಿದ ವಿಚಾರ.

ಎಲ್ಲಾ ಪುರಾಣಗಳಿಗೆ ಸಾರಭೂತವಾಗಿ ವೇದವ್ಯಾಸರು ಭಾಗವತ ಪುರಾಣ ರಚನೆ ಮಾಡಿದರು. ಈ ಪುರಾಣದಲ್ಲಿ ೧೮,೦೦೦ ಶ್ಲೋಕಗಳಿವೆ. ಇದು ೧೮,೦೦೦ ಗ್ರಂಥ. ಸಂಸ್ಕೃತದಲ್ಲಿ ಒಂದು ಗ್ರಂಥ ಎಂದರೆ ೩೨ ಅಕ್ಷರ. ಆದ್ದರಿಂದ ಹದಿನೆಂಟು ಸಾವಿರ ಗ್ರಂಥ ಎಂದರೆ ೫,೭೬,೦೦೦ ಅಕ್ಷರಗಳು. ***"ಯಾವಂತಿ ಪಟಿಥಾನಿ ತಾವಂತಿ ಹರಿನಾಮಂತಿ ಪಟಿಥಾನಿ ನಾಸಂಶಯಃ"*** ಒಮ್ಮೆ ವೇದವನ್ನು ಓದಿದರೆ ಅದರಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟು ಹರಿನಾಮವನ್ನು ನಾವು ಪಠಿಸಿದಂತಾಗುತ್ತದೆ. ಅದೇ ರೀತಿ ಭಾಗವತ ಕೂಡಾ. ಆದ್ದರಿಂದ ಭಾಗವತವನ್ನು ಒಮ್ಮೆ ಪಠಿಸಿದರೆ ಋಗ್ವೇದ ಓದಿದ್ದಕ್ಕಿಂತ ಹೆಚ್ಚು ಭಗವನ್ನಾಮ ಸ್ಮರಣೆ ಮಾಡಿದಂತಾಗುತ್ತದೆ. [ಋಗ್ವೇದದಲ್ಲಿ ೪,೩೨,೦೦೦ ಸಾವಿರ ಅಕ್ಷರಗಳಿವೆ].

ಭಾಗವತ ತಾತ್ಪರ್ಯ ನಿರ್ಣಯದಲ್ಲಿ ಆಚಾರ್ಯರು ಹೇಳುವಂತೆ: ***"ಬ್ರಹ್ಮಸೂತ್ರ ಮಹಾಭಾರತ ಗಾಯತ್ರೀ ವೇದಸಂಬಂಧಶ್ಚಾಯಂ ಗ್ರಂಥಃ"***. ಭಾಗವತ ಬ್ರಹ್ಮಸೂತ್ರದ ವಿವರಣೆ; ಮಹಾಭಾರತದ ವಿವರಣೆ ; ಅದು ಗಾಯತ್ರಿಯ ವಿವರಣೆ. ಬ್ರಹ್ಮಸೂತ್ರಕ್ಕೆ ವೇದವ್ಯಾಸರೇ ಬರೆದಿರುವ ಭಾಷ್ಯ ಭಾಗವತ ಎನ್ನಲಾಗುತ್ತದೆ. ವೇದವ್ಯಾಸರು ಭಾಗವತದ ಕುರಿತು ಹೇಳುತ್ತಾ ಹೀಗೆ ಹೇಳಿದ್ದಾರೆ: ***"ಅರ್ಥೋಽಯಂ ಬ್ರಹ್ಮಸೂತ್ರಾಣಾಂ ಭಾರತಾರ್ಥ ವಿನಿರ್ಣಯಃ । ಗಾಯತ್ರೀಭಾಷ್ಯರೂಪೋಽಸೌ ವೇದಾರ್ಥಪರಿಬೃಂಹಿತಃ"***. ಬ್ರಹ್ಮಸೂತ್ರದ ಅರ್ಥ ವಿವರಣೆ ಭಾಗವತ; ಮಹಾಭಾರತದಲ್ಲಿ ಯಾವ ವಿಷಯ ಸಂಧಿಗ್ಧವಾಗಿದೆಯೋ ಅದನ್ನು ನಿರ್ಣಯ ಮಾಡತಕ್ಕಂತಹ ಪುರಾಣ ಭಾಗವತ; ಗಾಯತ್ರಿ ಭಾಷ್ಯ ಭಾಗವತ; ವೇದಾರ್ಥ ವಿವರಣೆ ಭಾಗವತ. ವೈದಿಕ ಸಾಹಿತ್ಯದಲ್ಲಿ ಗಾಯತ್ರಿಗೂ ಸಮಸ್ತ ವೇದಗಳಿಗೂ ಸಂಬಂಧವಿರುವಂತೆ, ಸಮಸ್ತ ವೈದಿಕ ವಾಙ್ಮಯಕ್ಕೆ ಒಂದಕ್ಕೊಂದು ಪೂರಕವಾಗಿರುವ ಗ್ರಂಥ ಭಾಗವತ.

ಭಾಗವತ ಬ್ರಹ್ಮಸೂತ್ರದ ವಿವರಣೆ ಹೇಗೆ ಎನ್ನುವುದನ್ನು ಇಲ್ಲಿ ಸಂಕ್ಷಿಪ್ತವಾಗಿ ನೋಡೋಣ. ಬ್ರಹ್ಮಸೂತ್ರಕ್ಕೂ ಭಾಗವತಕ್ಕೂ ಇರುವ ಸಂಬಂಧವನ್ನು ಭಾಗವತದ ಮೊದಲ ಶ್ಲೋಕವೇ ಸೂಚಿಸುತ್ತದೆ. ಬ್ರಹ್ಮಸೂತ್ರದ ಎರಡನೇ

ಸೂತ್ರವೇ ಭಾಗವತದ ಆರಂಭ. [*ಓಂ ಜನ್ಮಾದ್ಯಸ್ಯ ಯತಃ ಓಂ*-ಬ್ರಹ್ಮಸೂತ್ರ ೨ನೇ ಸೂತ್ರ] ಹಾಗೇ ಶ್ಲೋಕದ ಮುಂದುವರಿಕೆ ಕೂಡಾ ಸಮನ್ವಯಾತ್ ಎನ್ನುವ ಸೂತ್ರದಿಂದಲೇ ಬಂದಿದೆ. [*ಓಂ ತತ್ತು ಸಮನ್ವಯಾತ್ ಓಂ*-ಬ್ರಹ್ಮಸೂತ್ರ ೪ನೇ ಸೂತ್ರ]. ಹೀಗೆ ಭಾಗವತದ ಮಂಗಲ ಪದ್ಯದಲ್ಲೇ ವೇದವ್ಯಾಸರು ಬ್ರಹ್ಮಸೂತ್ರ ಮತ್ತು ಭಾಗವತದ ಸಂಬಂಧದ ಸೂಚನೆ ಕೊಟ್ಟಿದ್ದಾರೆ. ಭಗವಂತ ಈ ಜಗತ್ತಿನ ಸರ್ವಕಾರಣ ಎನ್ನುವುದು ವೇದಾಂತಸೂತ್ರದ ಒಟ್ಟು ಸಾರ. ಸರ್ವಕಾರಣತ್ವವನ್ನು ಭಗವಂತನಲ್ಲಿ ಸಮಕ್ಷಿಸುವುದು ಮತ್ತು ಸರ್ವಗುಣಪೂರ್ಣತ್ವವನ್ನು ಸರ್ವಶಬ್ದಗಳಿಂದ ಸಮನ್ವಯ ಮಾಡುವುದು ಭಾಗವತದ ಒಟ್ಟು ಪ್ರಮೇಯ. ಒಟ್ಟಿನಲ್ಲಿ ಹೇಳಬೇಕೆಂದರೆ: ಬ್ರಹ್ಮಸೂತ್ರದಲ್ಲಿ ಹೇಳಿರುವ ಸರ್ವಗುಣಪೂರ್ಣತ್ವವನ್ನು, ಸರ್ವಶಬ್ದವಾಚ್ಯತ್ವವನ್ನು ಭಗವಂತನ ಅನೇಕ ಅವತಾರಗಳ ಮೂಲಕ ಬಿತ್ತರಿಸುವ ಗ್ರಂಥವಾದ ಭಾಗವತ ಬ್ರಹ್ಮಸೂತ್ರದ ಅರ್ಥರೂಪದಲ್ಲಿದೆ.

ಮೇಲೆ ಹೇಳಿದಂತೆ ಭಾಗವತ *"ಭಾರತಾರ್ಥ ವಿನಿರ್ಣಯಃ".* ಇದು ಹೇಗೆಂದರೆ: ಮಹಾಭಾರತದಲ್ಲಿ ಅಸ್ಪಷ್ಟವಾಗಿ ಹೇಳಿದ ಮಾತುಗಳನ್ನು ಭಾಗವತದಲ್ಲಿ ಸ್ಪಷ್ಟವಾಗಿ ವಿವರಿಸಿರುವುದನ್ನು ಕಾಣುತ್ತೇವೆ. ಒಂದು ರೀತಿಯಲ್ಲಿ ಭಾಗವತ ಮತ್ತು ಮಹಾಭಾರತ ಪೂರ್ವಾರ್ದ-ಉತ್ತರಾರ್ದವಿದ್ದಂತೆ. ಉದಾಹರಣೆಗೆ ಭಾಗವತ ಕೃಷ್ಣನ ಬಾಲಲೀಲೆಗಳನ್ನು ಹೇಳಿದರೆ, ಮಹಾಭಾರತ ಪ್ರೌಢ ಕೃಷ್ಣನ ಕಥೆಯನ್ನು ವಿವರಿಸುತ್ತದೆ. ಇನ್ನೊಂದು ಮುಖದಲ್ಲಿ ನೋಡಿದರೆ ಮಹಾಭಾರತ ಪೂರ್ವಾರ್ದ ಹಾಗೂ ಭಾಗವತ ಉತ್ತರಾರ್ದ. ಏಕೆಂದರೆ ಭಾಗವತ ಪ್ರಾರಂಭವಾಗುವುದು ಮಹಾಭಾರತ ಮುಗಿದ ಮೇಲೆ. ಪಾಂಡವರ ನಂತರ ಅಭಿಮನ್ಯುವಿನ ಮಗ ಪರೀಕ್ಷಿತ ರಾಜ ಪಟ್ಟಕ್ಕೆ ಬಂದಾಗ ಭಾಗವತ ಪ್ರಾರಂಭವಾಗುತ್ತದೆ.

ಭಾಗವತದಲ್ಲಿ ಸಂಕ್ಷಿಪ್ತವಾಗಿ ಹೇಳಿರುವುದನ್ನು ಮಹಾಭಾರತ ವಿಸ್ತಾರವಾಗಿ ಹೇಳುವುದನ್ನು ನಾವು ಕಾಣಬಹುದು. ಉದಾಹರಣೆಗೆ: ಭೀಷ್ಮಾಚಾರ್ಯರು ಶರಶಯ್ಯೆಯಲ್ಲಿದ್ದಾಗ ಪಾಂಡವರಿಗೆ, ವಿಶೇಷವಾಗಿ ಧರ್ಮರಾಯನಿಗೆ ಮಾಡಿದ ಉಪದೇಶ ಭಾರತದಲ್ಲಿ ವಿಸ್ತಾರವಾಗಿ ವಿವರಿಸಿದ್ದಾರೆ.[ಶಾಂತಿಪರ್ವ ಮತ್ತು ಅನುಶಾಸನ ಪರ್ವ] ಆದರೆ ಈ ವಿವರಣೆಯನ್ನು ಭಾಗವತದಲ್ಲಿ ಕೇವಲ ಮೂರು ಶ್ಲೋಕಗಳಲ್ಲಿ ಚುಟುಕಾಗಿ ವಿವರಿಸಲಾಗಿದೆ. ಆದರೆ ಭೀಷ್ಮಾಚಾರ್ಯರು ಶರಶಯ್ಯೆಯಲ್ಲಿ ಎರಡು ಬಾರಿ ಕೃಷ್ಣನನ್ನು ನೆನೆದು ಧ್ಯಾನ ಮಾಡುವ ಎರಡು ಭೀಷ್ಮಸ್ತವಗಳಿವೆ. ಇದರ ವಿವರಣೆ ಭಾರತದಲ್ಲಿ ವಿವರವಾಗಿ ಕೊಟ್ಟಿಲ್ಲ. ಇದನ್ನು ವಿಸ್ತಾರವಾಗಿ ಭಾಗವತದಲ್ಲಿ ವಿವರಿಸಿದ್ದಾರೆ. ಹೀಗೆ ಭಾಗವತ ಭಾರತದ ಅರ್ಥ ನಿರ್ಣಯಾತ್ಮಕ ಗ್ರಂಥ.

ಇನ್ನು ವೈದಿಕ ವಾಙ್ಮಯದಲ್ಲಿ ನೋಡಿದರೆ ಇಡೀ ವೇದಕ್ಕೆ ಮೂಲಭೂತವಾಗಿರುವ ಮಂತ್ರ ಗಾಯತ್ರಿ. ಓಂಕಾರದ ಮೂರು ಅಕ್ಷರಗಳು ಒಡೆದು ಮೂರು ವ್ಯಾಹೃತಿಗಳಾದವು, ಮೂರು ವ್ಯಾಹೃತಿಗಳು ಚಿಗುರಿ ಮೂರು ಪಾದದ ಗಾಯತ್ರಿಯಾಯಿತು, ಮೂರು ಪಾದದ ಗಾಯತ್ರಿ ಬೆಳೆದು ಮೂರು ವರ್ಗದ ಪುರುಷಸೂಕ್ತವಾಯಿತು, ಈ ಪುರುಷ ಸೂಕ್ತ ಬೆಳೆದು ಮೂರು ವೇದಗಳಾಯಿತು. ಹಾಗಾಗಿ ಗಾಯತ್ರಿಯಿಂದ ವೇದದ ತನಕ ಒಂದು ಸಂಬಂಧವಿದೆ. ಯಾವುದು ಗಾಯತ್ರಿ ಪ್ರತಿಪಾದ್ಯವೋ ಅದೇ ವೇದ ಪ್ರತಿಪಾದ್ಯ. ಆದ್ದರಿಂದ ಗಾಯತ್ರಿ ಪ್ರತಿಪಾದ್ಯನಾದ ಭಗವಂತನನ್ನೇ ಭಾಗವತ ಪ್ರತಿಪಾದಿಸುತ್ತದೆ. ಭಾಗವತದ ಮೊದಲ ಪದ್ಯದ ಉಪಸಂಹಾರ ಮಾಡುವಾಗ ಸತ್ಯಮ್ ಪರಮ್ ಧೀಮಹಿ ಎಂದು ಗಾಯತ್ರಿಯ ಪದದೊಂದಿಗೆ(ಧೀಮಹಿ) ಉಪಸಂಹಾರ ಮಾಡಿರುವುದನ್ನು ಕಾಣುತ್ತೇವೆ. ಇದು ಭಾಗವತ ಗಾಯತ್ರಿಯ ಭಾಷ್ಯರೂಪ ಎನ್ನುವುದನ್ನು ಸೂಚಿಸುತ್ತದೆ. ಯಾವ ರೀತಿ ಭಾಗವತ ಗಾಯತ್ರಿಗೆ ಭಾಷ್ಯರೂಪದಲ್ಲಿದೆ ಎನ್ನುವುದನ್ನು ಇಲ್ಲಿ ಸಂಕ್ಷಿಪ್ತವಾಗಿ ನೋಡೋಣ.

*“ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್”.* ಇಲ್ಲಿ ಹತ್ತು ಶಬ್ದಗಳಿವೆ. ಈ ಹತ್ತು ಶಬ್ದಗಳು ಭಗವಂತನ ಹತ್ತು ಅವತಾರವನ್ನು ಹೇಳುವ ಪದಗಳು. ಭಾಗವತ ಭಗವಂತನ ಈ ಹತ್ತು ಅವತಾರಗಳನ್ನು ವಿಸ್ತಾರವಾಗಿ ವಿವರಿಸುತ್ತದೆ.

1. ತತ್: ತತ ಅಂದರೆ ವಿಸ್ತಾರ. ಸಣ್ಣದಾಗಿದ್ದದ್ದು ದೊಡ್ಡದಾಗಿ ಬೆಳೆದದ್ದು-ಮತ್ಸ್ಯಾವತಾರ. ಇದು ಪ್ರಳಯ ಕಾಲದಲ್ಲಿ ಋಷಿಗಳನ್ನು ದಡ ಹಾಯಿಸಿದ ರೂಪ.
2. ಸವಿತ: ಅಂದರೆ ಸವನ ಅಥವಾ ಮಥನ. ಮಥನದಿಂದ ಅಮೃತ ತೆಗೆಯುವಾಗ ತಳೆದ ಅವತಾರ-ಕೂರ್ಮಾವತಾರ
3. ವರೇಣ್ಯಂ: ಇದು ವರಾಹ ಪದದ ಪರ್ಯಾಯ ಶಬ್ದ. ಎತ್ತರದಲ್ಲಿರುವವ-ಭೂಮಿಯನ್ನು ಎತ್ತರದಲ್ಲಿ ನಿಲ್ಲಿಸಿದ ಅವತಾರ-ವರಾಹಾವತಾರ.
4. ಭರ್ಗಃ: ಶತ್ರುಗಳನ್ನು ಭರ್ಜನೆ ಮಾಡಿದ ಉಗ್ರ ರೂಪ-ನರಸಿಂಹಾವತಾರ
5. ದೇವ: ದೇವ ಎನ್ನುವ ಪದ ದಿವು ಧಾತುವಿನಿಂದ ಬಂದಿದೆ. ದಿವು ಅಂದರೆ ವ್ಯವಹಾರ -ಮೂರು ಹೆಜ್ಜೆ ವ್ಯವಹಾರ ಮಾಡಿದ ಅವತಾರ –ವಾಮನಾವತಾರ.
6. ಧೀಮಹಿ: ಧೀಮಹಿ ಅಂದರೆ ಖುಷಿ ಕೊಡುವುದು. ೨೧ ಬಾರಿ ಅಸುರರ ಸಂಹಾರ ಮಾಡಿ ಭೂಮಿಗೆ ಖುಷಿ ಕೊಟ್ಟ ಭಗವಂತನ ಅವತಾರ-ಪರಶುರಾಮಾವತಾರ
7. ಧಿಯಃ: ಯಂ ಅಂದರೆ ವಾಯುಬೀಜ. ವಾಯುದೇವರ ಅವತಾರವಾದ ಹನುಮಂತನಿಗೆ ಸಂತೋಷ ಕೊಟ್ಟ ಅವತಾರ-ರಾಮಾವತಾರ.
8. ಯಃ : ಅಂದರೆ ಜ್ಞಾನ. ಜ್ಞಾನರೂಪದಲ್ಲಿ ಭಗವದ್ಗೀತೆಯನ್ನು ಉಪದೇಶ ಮಾಡಿದ ಅವತಾರ-ಕೃಷ್ಣಾವತಾರ
9. ನಃ : ಎಲ್ಲವನ್ನೂ ನಯತಿ-ನಿಷೇಧ ಮಾಡಿದವ-ಶೂನ್ಯವಾದಿ ಅವತಾರ–ಬುದ್ಧಾವತಾರ.
10. ಪ್ರಚೋದಯಾತ್-ಧರ್ಮವನ್ನು ಪ್ರಚೋದನೆ ಮಾಡಿ ಕುದುರೆ ಮೇಲೆ ಬರುವ- ಹತ್ತನೇ ಅವತಾರ-ಕಲ್ಕಿ

ಹೀಗೆ ಭಗವಂತನ ಹತ್ತು ಅವತಾರಗಳ ಬಿತ್ತರವಾದ ಭಾಗವತ ಗಾಯತ್ರೀ ಭಾಷ್ಯ ಕೂಡಾ ಹೌದು.

ಭಾಗವತವನ್ನು *“ವೇದಾರ್ಥಪರಿಬೃಂಹಿತಃ”* ಎಂದಿದ್ದಾರೆ. ಇದು ಅರ್ಥವಾಗಬೇಕಾದರೆ ನಾವು ಭಾಗವತ ಶ್ಲೋಕಗಳನ್ನು ಗಮನಿಸಬೇಕು. ಅಲ್ಲಿ ವ್ಯಾಸರು ಪ್ರತಿಯೊಂದು ಪದ್ಯದಲ್ಲೂ ವೇದಾರ್ಥವನ್ನು ತುಂಬಿ, ಹೇಗೆ ವೇದದ ಚಿಂತನೆಗೆ ನಮ್ಮನ್ನು ಅಣಿಗೊಳಿಸುತ್ತಾರೆ ಎನ್ನುವುದು ತಿಳಿಯುತ್ತದೆ. ಇದಕ್ಕೆ ಒಂದು ಪ್ರಸಿದ್ಧ ದೃಷ್ಟಾಂತ ಈ ಕೆಳಗಿನ ವೇದಮಂತ್ರ:

*“ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮಃ ಆಶಿನೇಭ್ಯಃ”*

ಇಲ್ಲಿ ‘ಆಶಿನೇಭ್ಯಃ’ ಎಂದರೆ ಏನು ಎನ್ನುವುದು ವೇದಾಧ್ಯಯನ ಮಾಡುವಾಗ ನಮಗೆ ಸ್ಪಷ್ಟವಾಗುವುದಿಲ್ಲ. ಆದ್ದರಿಂದ ಇದನ್ನು ಸ್ಪಷ್ಟಪಡಿಸುವುದಕ್ಕೋಸ್ಕರ ವೇದವ್ಯಾಸರು ಭಾಗವತದಲ್ಲಿ ಹೀಗೆ ಹೇಳಿದ್ದಾರೆ:

*ನಮೋ ಮಹದ್ಭ್ಯೋಽಸ್ತು ನಮಃ ಶಿಶುಭ್ಯೋ ನಮೋ ಯುವಭ್ಯೋ ನಮಃ ಆವಟುಭ್ಯಃ [೧೫-೧೩-೨೩].*

ಇಲ್ಲಿ ಎಲ್ಲಾ ಪದಗಳನ್ನು ವೇದಮಂತ್ರದಿಂದ ಆಯ್ಕೆ ಮಾಡಿದ ವೇದವ್ಯಾಸರು, ‘ಆಶಿನೇಭ್ಯಃ’ ಎನ್ನುವಲ್ಲಿ “ವಟುಭ್ಯಃ” ಎನ್ನುವ ಪದ ಬಳಸಿ ಆಶಿನೇಭ್ಯಃ ಎನ್ನುವ ಪದದ ಅರ್ಥ ವಿವರಣೆ ನೀಡಿದರು. ಹೀಗೆ ವೇದದಲ್ಲಿ ಅಸ್ಪಷ್ಟವಾಗಿರುವ ಅನೇಕ ವಿಚಾರಗಳನ್ನು ಭಾಗವತ ಬಿಡಿಸಿ ಹೇಳುತ್ತದೆ. ಈ ರೀತಿಯ ವಿವರಣೆ ಬೇರೆ ಪುರಾಣಗಳಿಗಿಂತ ಹೆಚ್ಚಾಗಿ

ಭಾಗವತದಲ್ಲಿ ಬಳಕೆಯಾಗಿದೆ. ಹೀಗಾಗಿ ವೇದದ ಅರ್ಥ ನಮಗಾಗಬೇಕಾದರೆ ನಾವು ಭಾಗವತವನ್ನು ಓದಬೇಕು. ವ್ಯಾಸರೇ ಹೇಳುವಂತೆ:

*ಪುರಾಣಾನಾಂ ಸಾರರೂಪಃ ಸಾಕ್ಷಾದ್ ಭಗವತೋದಿತಃ ।*
*ದ್ವಾದಶಸ್ಕಂದ ಸಂಯುಕ್ತಃ ಶತವಿಚ್ಛೇದ ಸಂಯುತಃ ।*
*ಗ್ರಂಥೋಽಷ್ಟಾದಶ ಸಾಹಸ್ರಃ ಶ್ರೀಮದ್ಭಾಗವತಾಭಿಧಃ ।*

ಹದಿನೆಂಟು ಪುರಾಣಗಳಲ್ಲಿ ಭಾಗವತ ಸಾರಭೂತವಾದ ಪುರಾಣ ಎಂದು ತೀರ್ಮಾನ ಮಾಡಿ ವ್ಯಾಸರು ಈ ಗ್ರಂಥವನ್ನು ರಚನೆ ಮಾಡಿದರು. ಇದು ಭಗವಂತನ ಕುರಿತಾದ ಗ್ರಂಥ ಮತ್ತು ಭಗವಂತನೇ ರಚಿಸಿದ ಗ್ರಂಥ. ಇದರಲ್ಲಿ ಹನ್ನೆರಡು ಸ್ಕಂದಗಳಿವೆ ಮತ್ತು ೧೮,೦೦೦ ಶ್ಲೋಕಗಳಿವೆ. ಇಲ್ಲಿ ಹೇಳುವಂತೆ ಭಾಗವತದಲ್ಲಿ ನೂರು ಪರಿಚ್ಛೇದಗಳಿವೆ. ಆ ನೂರು ಪರಿಚ್ಛೇದ ಯಾವುದು ಎನ್ನುವುದು ನಮಗೆ ಅಸ್ಪಷ್ಟವಾದರೂ ಕೂಡಾ, "ಶತವಿಚ್ಛೇದ" ಎಂದರೆ  ನೂರಾರು ಅಧ್ಯಾಯಗಳು ಎಂದು ನಾವು ತಿಳಿಯಬಹುದು. ಭಾಗವತದಲ್ಲಿ ಭಗವಂತನ ಕಥೆ ಪ್ರಾರಂಭವಾಗುವುದು ಎರಡನೇ ಸ್ಕಂಧದಿಂದ. ಮೊದಲ ಸ್ಕಂಧ ಭಾಗವತದ ಪ್ರಸ್ತಾವನೆ ರೂಪದಲ್ಲಿದೆ.

ಪ್ರೀತಿಯ ಅಧ್ಯಾತ್ಮ ಬಂಧುಗಳೇ, ಭಗವಂತ ನಮಗೆ ದಯಪಾಲಿಸಿರುವ ಈ ಅಪೂರ್ವ ಗ್ರಂಥವನ್ನು ಓದುವ ಹಾಗೂ ಓದಿ ತಿಳಿದು ಧನ್ಯರಾಗುವ ಅಪೂರ್ವ ಅವಕಾಶವನ್ನು ಇಂದು ಆ ಭಗವಂತ ನಮಗೆ ಕರುಣಿಸಿದ್ದಾನೆ. ಇಂತಹ ಅದ್ಭುತ ಜ್ಞಾನಶಕ್ತಿಯನ್ನು ಅರಿಯುವ ಸಾಮರ್ಥ್ಯ ನಮಗಿದೆಯೋ ಇಲ್ಲವೋ ನಮಗೇ ತಿಳಿಯದು. ಆದರೆ ನಮಗೆ ಒಂದು ವಿಚಾರ ಮಾತ್ರ ಸ್ಪಷ್ಟವಾಗಿ ತಿಳಿದಿದೆ. ಅದೇನೆಂದರೆ: ಭಗವಂತ ಭಕ್ತ ಪರಾಧೀನ. ಆತ ತನ್ನ ಭಕ್ತ ಕೇಳಿದ್ದನ್ನು ಇಲ್ಲಾ ಎನ್ನಲಾರ. ಹಾಗಾಗಿ ಆ ಭಗವಂತನಲ್ಲಿ "ಈ ಅತ್ಯದ್ಭುತವಾದ ಜ್ಞಾನವನ್ನು ಅರಿಯುವ ಶಕ್ತಿ ಕೊಡು" ಎಂದು ಬೇಡಿ, ಭಾಗವತವನ್ನು ಪ್ರವೇಶಿಸೋಣ.

*******

**Visit Us at :** http://bhagavatainkannada.blogspot.in/

॥ಶ್ರೀಮದ್ಭಾಗವತ ಪುರಾಣಮ್॥

# ಪ್ರಥಮ ಸ್ಕಂಧ

## ಪ್ರಥಮೋऽಧ್ಯಾಯಃ

**॥ಓಂ ನಮೋ ಭಗವತೇ ವಾಸುದೇವಾಯ ಓಂ॥**

॥ ಶ್ರೀ ಗುರುಭ್ಯೋ ನಮಃ ಹರಿಃ ಓಂ ॥

## ಶ್ರೀಮದ್ಭಾಗವತ ಮಹಾಪುರಾಣದ ಮಂಗಲಪದ್ಯ

**ಜನ್ಮಾದ್ಯಸ್ಯ ಯತೋऽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್**
**ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ।**
**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ**
**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ** ॥೧॥

ಭಾಗವತದ ಮೊದಲ ಮಂಗಲಾಚರಣೆಯ ಈ ಪದ್ಯ ಬಹಳ ವಿಶಿಷ್ಟವಾದ ಪದ್ಯ. ಇದು ಸಮಗ್ರ ವೇದಾಂತದ ತಿರುಳನ್ನು ತನ್ನ ಗರ್ಭದಲ್ಲಿ ಧರಿಸಿದೆ. ಈ ಮಂತ್ರದಲ್ಲಿ ಒಟ್ಟು ನಾಲ್ಕು ಪಾದಗಳಿವೆ. ಪ್ರತಿಯೊಂದು ಪಾದದಲ್ಲೂ ಹತ್ತೊಂಬತ್ತು ಅಕ್ಷರಗಳಿವೆ. ಈ ಪದ್ಯದಲ್ಲಿ ಎಪ್ಪತ್ತಾರು ಅಕ್ಷರಗಳಿದ್ದು ಒಟ್ಟು ಮೂವತ್ತು ಪದಗಳಿವೆ. ಈ ಎಪ್ಪತ್ತಾರು ಅಕ್ಷರಗಳು ಭಗವಂತನ ಎಪ್ಪತ್ತಾರು ರೂಪಗಳನ್ನು ಹೇಳುತ್ತವೆ. ಭಗವಂತನ ಎಪ್ಪತ್ತಾರು ರೂಪಗಳು ಎಂದರೆ ಅದು ಸಮಗ್ರ ವಿಶ್ವದ ಅಖಂಡ ಚಿತ್ರಣ.

ವಿಶ್ವವೆಂದರೆ ಅದು ನಾಮಾತ್ಮಕ ಮತ್ತು ರೂಪಾತ್ಮಕ ಪ್ರಪಂಚ. ರೂಪಾತ್ಮಕ ಪ್ರಪಂಚದಲ್ಲಿ ಒಟ್ಟು ಇಪ್ಪತ್ತೈದು ತತ್ತ್ವಗಳಿವೆ. ಅವುಗಳೆಂದರೆ: ಪುರುಷ, ಪ್ರಕೃತಿ, ಮಹತ್ತತ್ತ್ವ, ಅಹಂಕಾರತತ್ತ್ವ, ಮನಸ್ತತ್ತ್ವ, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ತನ್ಮಾತ್ರೆಗಳು ಮತ್ತು ಪಂಚಭೂತಗಳು. ಈ ಇಪ್ಪತ್ತೈದು ತತ್ತ್ವಗಳಲ್ಲಿ ಭಗವಂತನ ಇಪ್ಪತ್ತೈದು ರೂಪಗಳಿವೆ. ಇನ್ನು ನಾಮಾತ್ಮಕ ಪ್ರಪಂಚ ಎಂದರೆ ಅದು ಅಕ್ಷರ ಪ್ರಪಂಚ. ಅ-ದಿಂದ ಕ್ಷ-ದ ತನಕ ಇರುವುದು ಒಟ್ಟಿಗೆ ಐವತ್ತೊಂದು ಅಕ್ಷರಗಳು. ಎಲ್ಲಾ ಭಾಷೆಯ ಎಲ್ಲಾ ನಾಮಗಳು, ಎಲ್ಲಾ ಶಬ್ದಗಳೂ ಈ ಐವತ್ತೊಂದು ಅಕ್ಷರಗಳಲ್ಲಿವೆ. ಐವತ್ತೊಂದು ಅಕ್ಷರಗಳಿಂದ(ಮಾತೃಕೆಗಳಿಂದ) ವಾಚ್ಯನಾದ ಭಗವಂತನ ರೂಪಗಳೂ ಐವತ್ತೊಂದು. ಅವುಗಳೆಂದರೆ:

೧. ಅಜ, ೨. ಆನಂದ, ೩. ಇಂದ್ರ, ೪. ಈಶ, ೫. ಉಗ್ರ, ೬. ಊರ್ಜ, ೭. ಋತಂಭರ, ೮. ೠಘ, ೯. ಌಶ, ೧೦. ೡಜಿ, ೧೧. ಏಕಾತ್ಮ, ೧೨. ಐರ, ೧೩. ಓಜೋಭೃತ್, ೧೪. ಔರಸ, ೧೫. ಅಂತ, ೧೬. ಅರ್ಧಗರ್ಭ, ೧೭. ಕಪಿಲ, ೧೮. ಖಪತಿ, ೧೯. ಗರುಡಾಸನ, ೨೦. ಘರ್ಮ, ೨೧. ಙಸಾರ ೨೨. ಚಾರ್ವಾಂಗ, ೨೩. ಛಂದೋಗಮ್ಯ, ೨೪.

ಜನಾರ್ದನ, ೨೫. ಘೂಟಿತಾರಿ, ೨೬. ಇಮ, ೨೭. ಟಂಕಿ, ೨೮. ಠಕಲ, ೨೯. ಡರಕ, ೩೦. ಢರಿ, ೩೧. ಣಾತ್ಮ, ೩೨. ತಾರ, ೩೩. ಥಭ, ೩೪. ದಂಡಿ, ೩೫. ಧನ್ವಿ, ೩೬. ನಮ್ಯ, ೩೭. ಪರ, ೩೮. ಫಲಿ, ೩೯. ಬಲಿ, ೪೦. ಭಗ, ೪೧. ಮನು, ೪೨. ಯಜ್ಞ, ೪೩. ರಾಮ, ೪೪. ಲಕ್ಷ್ಮೀಪತಿ, ೪೫. ವರ, ೪೬. ಶಾಂತಸಂವಿತ್, ೪೭. ಷಡ್ಗುಣ, ೪೮. ಸಾರಾತ್ಮ, ೪೯. ಹಂಸ, ೫೦. ಳಾಳುಕ, ೫೧. ನೃಹರ್ಯಕ್ಷ[ನೃಸಿಂಹ].

ನಾಮಾತ್ಮಕ ಮತ್ತು ರೂಪಾತ್ಮಕ ಪ್ರಪಂಚದಲ್ಲಿರುವ ಎಪ್ಪತ್ತಾರು ರೂಪಗಳನ್ನು ನೆನೆಯುತ್ತಾ, ಭಾಗವತದ ಈ ಮೊದಲ ಶ್ಲೋಕ ಒಂದು ವಿಶಿಷ್ಠವಾದ ಎಚ್ಚರವನ್ನು ನಮ್ಮ ಮುಂದಿಡುತ್ತದೆ ಮತ್ತು ಅದು ಅನೇಕ ಆಯಾಮಗಳಲ್ಲಿ ತೆರೆದುಕೊಳ್ಳುತ್ತದೆ. ಭಗವಂತನ ಬಗ್ಗೆ ಹೇಗೆ ತಿಳಿದುಕೊಳ್ಳಬೇಕು? ಭಗವಂತ ಇದ್ದಾನೆ ಎಂದು ನಮಗೆ ಭರವಸೆ ಬರುವುದು ಹೇಗೆ? ಭಗವಂತನ ಬಗೆಗೆ ಖಚಿತವಾದ ಮನವರಿಕೆ(Conviction)ಬರಬೇಕು ಅಂದರೆ ಏನು ಮಾಡಬೇಕು? ಇದು ನಮ್ಮೆಲ್ಲರಲ್ಲಿರುವ ಸರ್ವೇಸಾಮಾನ್ಯ ಪ್ರಶ್ನೆ. ಅದಕ್ಕಾಗಿ ಇಲ್ಲಿ ಹೇಳುತ್ತಾರೆ: "ಜನ್ಮಾದ್ಯಸ್ಯ ಯತಃ" ಎಂದು. ಬ್ರಹ್ಮಸೂತ್ರದಲ್ಲಿ ಹೇಳುವಂತೆ: **"ಅಥಾತೋ ಬ್ರಹ್ಮ ಜಿಜ್ಞಾಸಾ"** [ಬ್ರಹ್ಮ ಸೂತ್ರ ೧.೧.]. ನಾವು ಮೊದಲು ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ: ಈ ಪ್ರಪಂಚದಲ್ಲಿ ಯಾವುದೇ ಕಾರ್ಯ ನೆಡೆಯಬೇಕಾದರೂ ಅದರ ಹಿಂದೆ ಒಂದು ಕಾರಣವಿರುತ್ತದೆ ಎನ್ನುವುದನ್ನು. ಅಕಾರಣವಾಗಿ ಪ್ರಪಂಚದಲ್ಲಿ ಯಾವ ಕಾರ್ಯವೂ ನಡೆಯುವುದಿಲ್ಲ. ಹಾಗಾಗಿ ಒಂದು ವಸ್ತು ನಿರ್ಮಾಣವಾಗಲು ಕಾರಣ ಇರಲೇಬೇಕು. ಕಾರಣದಲ್ಲಿ ಮುಖ್ಯವಾಗಿ ಎರಡು ವಿಧ. ಒಂದು ನಿಮಿತ್ತ ಕಾರಣ ಹಾಗೂ ಇನ್ನೊಂದು ಉಪಾದಾನ ಕಾರಣ. ಉದಾಹರಣೆಗೆ: ಮಣ್ಣಿನಿಂದ ಮಾಡಿಕೆಯಾಯಿತು ಎಂದರೆ ಅಲ್ಲಿ ಜಡವಾದ ಮಣ್ಣು ಉಪಾದಾನ ಕಾರಣ ಮತ್ತು ಬುದ್ಧಿಪೂರ್ವಕವಾಗಿ ಮಡಿಕೆ ಮಾಡುವ ಚೇತನ ನಿಮಿತ್ತಕಾರಣ. ಈ ಶ್ಲೋಕದಲ್ಲಿ ಬಳಕೆಯಾದ 'ಇತರತಃ' ಎನ್ನುವ ಪದ "ಯಾವುದೇ ಒಂದು ಕಾರ್ಯವಾಗಬೇಕಾದರೆ, ಯಾವುದೇ ಒಂದು ವಸ್ತು ನಿರ್ಮಾಣವಾಗಬೇಕಾದರೆ, ಅದರ ಹಿಂದೆ ಒಂದು ಚೇತನ ಶಕ್ತಿ ಇರಲೇಬೇಕು" ಎನ್ನುವುದನ್ನು ಪ್ರತಿಪಾದಿಸುತ್ತದೆ. ಈ ವಿಶ್ವಸೃಷ್ಟಿಯ ಹಿಂದಿರುವ ಚೇತನ ಆ ಭಗವಂತ. ಆತ ನಮ್ಮ ಅರಿವಿಗೆ ಮೀರಿ ನಿಂತವನು. ಚೇತನಾಚೇತನ ಪ್ರಪಂಚ ಸೃಷ್ಟಿಗೆ ಕಾರಣ ಆ ಜಗಜ್ಜನ್ಮಾದಿಕರ್ತ ಭಗವಂತ.

ಭಗವಂತನ ಅರಿವು ಬರಬೇಕಾದರೆ ಮೊದಲು ನಾವು ವೇದಗಳಿಗೆ ಶರಣಾಗಬೇಕು. 'ವೇದ' ಮೂಲಭೂತವಾಗಿ ಶಬ್ದಗಳ ಮೂಲಕ ನಮಗೆ ಭಗವಂತನ ಅರಿವು ಬರುವಂತೆ ಮಾಡುವ ಗ್ರಂಥ. ಋಗ್ವೇದದಲ್ಲಿ ಹೇಳುವಂತೆ:

ನ ತಂ ವಿದಾಥ ಯ ಇಮಾ ಜಜಾನಾನ್ಯದ್ಯುಷ್ಮಾಕಮಂತರಂ ಬಭೂವ ।
ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ ॥೧೦.೦೮೨.೦೭॥

ಇಲ್ಲಿ ಹೇಳುತ್ತಾರೆ: ನಾವು ಭಗವಂತನ ಬಗ್ಗೆ ತಿಳಿದಿಲ್ಲ. ಏಕೆಂದರೆ ಅದು 'ಬೇರೆ ಸಂಗತಿ' ಎಂದು. ಭಗವಂತ ನಾವು ಕಲ್ಪಿಸಬಹುದಾದ, ಯೋಚಿಸಬಹುದಾದ, ಅರ್ಥಮಾಡಿಕೊಳ್ಳಬಹುದಾದ ಎಲ್ಲಾ ಸಂಗತಿಗಳಿಗಿಂತ ಭಿನ್ನ. ಆದರೆ ಇಂತಹ ಭಗವಂತ ನಮ್ಮೊಳಗೇ ಇದ್ದಾನೆ, ನಮ್ಮ ಬಿಂಬರೂಪನಾಗಿ ನಮ್ಮ ಹೃದಯಕಮಲದಲ್ಲಿ ಆನಂದಮಯನಾಗಿ ಆತ ರಮಿಸುತ್ತಿದ್ದಾನೆ. ಹಾಗಾಗಿ ಭಗವಂತನನ್ನು ನಾವು ಎಲ್ಲೆಲ್ಲೂ ಹುಡುಕುವುದು ಬೇಡ. ಆತನನ್ನು ನಮ್ಮ ಹೃದಯದಲ್ಲಿ ನೋಡಲು ನಾವು ಪ್ರಯತ್ನಿಸಬೇಕು. ಮಂಜು ಕವಿದ ನಮ್ಮ ಕಣ್ಣಿಗೆ ಆತ ಕಾಣಲಾರ. ಭಗವಂತನನ್ನು ತಿಳಿಯಬೇಕಾದರೆ ನಾವು ವೇದಾಂತಸಾಹಿತ್ಯವನ್ನು, ವೇದವನ್ನು ತಿಳಿಯಬೇಕಾಗುತ್ತದೆ. ಅದು ಅರ್ಥವಾಗದಿದ್ದಾಗ ವೇದಕ್ಕೆ ಸಂಬಂಧಿಸಿದ ಇತಿಹಾಸ-ಪುರಾಣಗಳನ್ನು ಒಂದಕ್ಕೊಂದು ಅನ್ವಯ ಮಾಡಿ ಅದರಲ್ಲಿ ಭಗವಂತನನ್ನು ಕಾಣಬೇಕಾಗುತ್ತದೆ.

ವೇದವನ್ನು ಓದುವಾಗ ಒಂದೊಂದು ಕಡೆ ಒಂದೊಂದು ರೀತಿ ವಿವರಣೆ ಕಂಡು ಬರುತ್ತದೆ. ಉದಾಹರಣೆಗೆ ಅಗ್ನಿಸೂಕ್ತ ಓದಿದಾಗ ಅಗ್ನಿಯೇ ದೇವರು ಎನಿಸುತ್ತದೆ; ವಾಯುಸೂಕ್ತ ಓದಿದಾಗ ವಾಯುವೇ ದೇವರು ಎನಿಸುತ್ತದೆ. ಇನ್ನೊಂದು ಕಡೆ ಜಗತ್ತಿನಲ್ಲಿ ರುದ್ರನೇ ಶ್ರೇಷ್ಠ ಎನ್ನುವ ವಿವರಣೆ ವೇದದಲ್ಲಿ ಕಾಣಿಸುತ್ತದೆ. ಈ ರೀತಿ ವೇದದಲ್ಲಿನ ವಿವರಣೆಗಳಿಂದ ಗೊಂದಲವಾದಾಗ, ಅಲ್ಲಿ ಬರುವ ಒಂದೊಂದು ನಾಮವನ್ನೂ ಭಗವಂತನಲ್ಲಿ ಸಮನ್ವಯ ಮಾಡಬೇಕು. ಈ ರೀತಿ ಸಮನ್ವಯಮಾಡಿ ನೋಡಿದಾಗ, ಎಲ್ಲಾ ನಾಮಗಳೂ ಒಬ್ಬನೇ ಒಬ್ಬ ಭಗವಂತನನ್ನು ಹೇಳುತ್ತದೆ ಎನ್ನುವುದು ತಿಳಿಯುತ್ತದೆ. ವಾಯು, ರುದ್ರ, ಅಗ್ನಿ, ಇಂದ್ರ, ಇತ್ಯಾದಿ ಯಾವುದೇ ನಾಮದಿಂದ ಕರೆದರೂ ಓಗೊಡುವ ಭಗವಂತ ಒಬ್ಬನೇ ಒಬ್ಬ ಹೊರತು, ಅನೇಕ ದೇವರನ್ನು ವೇದ ಹೇಳುವುದಿಲ್ಲ. ಇದನ್ನು ಸ್ಪಷ್ಟವಾಗಿ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿದ್ದಾರೆ. ಅಲ್ಲಿ ಹೇಳುವಂತೆ:

ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ
ಸರ್ವಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥೬-೧೧॥

ಸರ್ವಗತನಾದ ಭಗವಂತ ಒಬ್ಬನೇ ಒಬ್ಬ. ಅಂತಹ ಭಗವಂತನನ್ನು ನಾವು ಸಮನ್ವಯ ಮಾಡಿ ತಿಳಿದುಕೊಳ್ಳಬೇಕು. ವೇದದ ಹಿನ್ನೆಲೆಯಲ್ಲಿ ಸಮಸ್ತ ವೇದ-ಪುರಾಣಗಳನ್ನು ಸಮನ್ವಯ ಮಾಡಿ, ಶ್ರುತಿ, ಉಪಸಂಹಾರಗಳಿಂದ, ಯಾವುದು ನಿಜವಾದ ಅರ್ಥ ಎಂದು ತೀರ್ಮಾನ ಮಾಡುವುದೇ ಸಮನ್ವಯ. ತರ್ಕಬದ್ಧವಾಗಿ ಸಮಸ್ತವೇದವೂ ಒಬ್ಬನೇ ಒಬ್ಬ ಭಗವಂತನನ್ನು ಹೇಳುತ್ತದೆ ಎಂದು ನಮಗೆ ತಿಳಿದಾಗ, ಎಲ್ಲಾ ತರ್ಕಗಳೂ ಭಗವಂತನನ್ನು ಉಪಪಾದಿಸುವ**(To Prove)** ತರ್ಕಗಳಾಗುತ್ತವೆ. ಆಗ ಭಗವಂತನಿಲ್ಲ ಎನ್ನುವ ಯಾವ ಯುಕ್ತಿಯೂ**(Logic)** ನಮಗೆ ಕಾಣಸಿಗುವುದಿಲ್ಲ. ಕಠೋಪನಿಷತ್ತಿನಲ್ಲಿ ಯಮ ಹೇಳುವಂತೆ:

ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ । ೧-೧೫.೧ ।

ಎಲ್ಲಾ ಯುಕ್ತಿಗಳೂ ಭಗವಂತನ ಅಸ್ತಿತ್ವವನ್ನೇ ಹೇಳುತ್ತವೆ ಹೊರತು, ನಿರಾಕರಣೆ ಮಾಡುವುದಿಲ್ಲ. ಆದರೆ ಒಂದು ವಿಸ್ಮಯವೇನೆಂದರೆ: ಭಗವಂತನ ಅರಿವು ಬರುವ ತನಕ ನಮಗೆ ಯಾವುದೇ ಯುಕ್ತಿಯಿಂದ ಭಗವಂತನನ್ನು ಉಪಪಾದಿಸಲು ಬರುವುದಿಲ್ಲ; ಅರಿವು ಬಂದ ಮೇಲೆ ಭಗವಂತನನ್ನು ಹೇಳದ ಯುಕ್ತಿ ಕಾಣಸಿಗುವುದಿಲ್ಲ! ಸಮನ್ವಯದಿಂದ ಭಗವಂತನ ಅರಿವು ಬಂದಮೇಲೆ, ಯಾವುದೇ ತರ್ಕ ಮಾಡಿದರೂ ಅದು ಭಗವಂತನ ಪರವಾಗಿಯೇ ನಿಲ್ಲುತ್ತದೆ. ಇಡಿಯ ಜಗತ್ತಿಗೆ ಕಾರಣವಾಗಿರುವ ತತ್ತ್ವವನ್ನು, ಭಗವಂತನನ್ನು ಸಾಕ್ಷಾತ್ಕರಿಸಿಕೊಂಡವರ ಮಾತುಗಳಿಂದ ಸಮನ್ವಯಮಾಡಿ, ನಮಗೆ ತಿಳಿದ ತರ್ಕಗಳ ಮೂಲಕ ತಿಳಿದು, ಉಪಾಸನೆ ಮಾಡಿ, ಪ್ರತ್ಯಕ್ಷವಾಗಿ ಅರಿಯಬೇಕು.

ಹಿಂದೆ 'ಎಲ್ಲಾ ಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡಿದಾಗ ಇಡಿಯ ವೇದ ಒಬ್ಬನೇ ಒಬ್ಬ ಭಗವಂತನನ್ನು ಹೇಳುತ್ತದೆ' ಎನ್ನುವ ವಿಷಯವನ್ನು ನೋಡಿದ್ದೇವೆ. ಇದು ವೇದಾಧ್ಯಯನದಲ್ಲಿ ಗಮನವಿಟ್ಟು ಪಾಲಿಸಬೇಕಾದ ಅತಿಮುಖ್ಯ ಅಂಶ. ಎಲ್ಲಾ ಶಬ್ದಗಳನ್ನೂ ಒಂದು ಪರತತ್ತ್ವದಲ್ಲಿ ಸಮನ್ವಯ ಮಾಡಿ ಅರ್ಥಮಾಡತಕ್ಕಂತಹ ಪರಂಪರೆ ಬಹಳ ಹಿಂದೆ ಪ್ರಚಲಿತದಲ್ಲಿದ್ದು, ಇಂದು ಈ ಪರಂಪರೆ ಮರೆತು ಹೋಗುತ್ತಿದೆ. ಯಾವ ಶಬ್ದವೂ ಕೇವಲ ಲೋಕ ರೂಢಿಯ ಅರ್ಥವನ್ನು ಹೇಳುವುದಿಲ್ಲ. ಅದಕ್ಕಿಂತ ಅತೀತವಾದ ಅದರ ನಿರ್ವಚನ ಅರ್ಥವೊಂದಿದೆ ಎಂದು ತಿಳಿದು, ಆ ನಿರ್ವಚನದಿಂದ ಆ ಶಬ್ದಕ್ಕೆ ಹೊಸ ಆಯಾಮ ಏನು ಬರುತ್ತದೆ ಎಂದು ಬಿಡಿಸಿ ನೋಡುವುದು- 'ಸಮನ್ವಯ ಮಾಡಿ ಅರ್ಥ ತಿಳಿದುಕೊಳ್ಳುವ' ಪದ್ಧತಿಯ ಮೂಲಭೂತ ನಿಯಮ. ನಿರ್ವಚನ ಏನೇ ಇರಲಿ, ಅದನ್ನು ವಿಶ್ಲೇಷಿಸದೇ, ಲೋಕ ರೂಢಿಯ ಅರ್ಥವನ್ನು ಒಪ್ಪಿಕೊಳ್ಳುವುದು ಲೋಕದ ಕ್ರಮವಾದರೆ, ನಿರ್ವಚನದಿಂದ ಏನು ಅರ್ಥವಿಶೇಷಗಳು

ಹೊರಡುತ್ತವೆ ಎಂದು ತಿಳಿದು, ಅದರ ಅನುಸಂಧಾನ ಮಾಡುವುದು ವೇದದ ಕ್ರಮ. ಶಬ್ದವನ್ನು ಸಮಷ್ಟಿಯಾಗಿ ನೋಡುವುದು ಲೋಕದ ಕ್ರಮವಾದರೆ, ಶಬ್ದವನ್ನು ಒಡೆದು ನೋಡುವುದು ವೇದದ ಕ್ರಮ. ಶಬ್ದ ಅನ್ನುವುದು ಚಿಪ್ಪಿನಂತೆ. ಅದರ ನಿರ್ವಚನ ಮುತ್ತಿನಂತೆ. ಚಿಪ್ಪನ್ನು ಬಳಸುವುದು ಲೋಕದ ಕ್ರಮವಾದರೆ, ಆ ಚಿಪ್ಪನ್ನು ಒಡೆದು ಅದರೊಳಗಿನ ಬಗೆಬಗೆಯ ಅಮೂಲ್ಯ ಮುತ್ತು ರತ್ನಗಳನ್ನು ಹೆಕ್ಕಿ ತೆಗೆಯುವುದು ವೇದದ ಕ್ರಮ.

ವೇದಾಧ್ಯಯನ ಮಾಡುವಾಗ ಪ್ರತಿಯೊಂದು ಶಬ್ದವನ್ನು ಯೋಗ ಬಲದಿಂದ ಒಡೆದು, ಅದರಲ್ಲಿ ಏನು ಅರ್ಥವಿಶೇಷ ಹೊರಡುತ್ತದೆ ಅನ್ನುವುದನ್ನು ನೋಡಬೇಕು. ಪ್ರತಿಯೊಂದು ಶಬ್ದವನ್ನೂ ಭಗವಂತನಲ್ಲಿ ಅನ್ವಯ ಮಾಡಿ, ವೇದಾರ್ಥ ಚಿಂತನೆ ಮಾಡಬೇಕು. ಉದಾಹರಣೆಗೆ ಋಗ್ವೇದದ ಮೊದಲ ಸೂಕ್ತ: " ಅಗ್ನಿಮೀ"ಳೇ ಪುರೋಹಿತಂ ಯಜ್ಞಸ್ಯ ದೇವಂ-ಋತ್ವಿಜಂ". ಇಲ್ಲಿ ಅಗ್ನಿಸೂಕ್ತವಿದೆ. ಅದು ಭಗವಂತನಲ್ಲಿ ಅನ್ವಯವಾಗಿ ಭಗವಂತನ ಸ್ತುತಿಯಾಗಬೇಕು. ಇದು 'ಸಮನ್ವಯ' ಪದ್ಧತಿ. ಬೆಂಕಿಗೆ ದಾಹಕ ಮತ್ತು ಪಾಚಕ ಶಕ್ತಿ ಕೊಡುವ ದೇವತೆ ಅಗ್ನಿ. ಈ ಅಗ್ನಿದೇವತೆಯ ಒಳಗಿದ್ದು, ಅವನಿಗೆ ಶಕ್ತಿ ಕೊಡುವವನು ಮುಖ್ಯಪ್ರಾಣ. ಈ ಮುಖ್ಯಪ್ರಾಣನಿಗೂ ಪ್ರಾಣನಾಗಿ ಶಕ್ತಿಪಾತ ಮಾಡುವವನು ಭಗವಂತ. ಆದ್ದರಿಂದ ಇಲ್ಲಿ ನಿಜವಾದ ಅಗ್ನಿ ಭಗವಂತ. ಇನ್ನು 'ಅಗ್ನಿ' ಪದವನ್ನು ಒಡೆದು ನೋಡಿದರೆ: ಅಗ+ನಿ=ಅಗ್ನಿ. ಚಲನೆ ಇಲ್ಲದ ವಸ್ತುವಿಗೆ(ಅಗ) ಚಲನೆ ಕೊಡುವವನು(ನಿ)-ಅಗ್ನಿ. ಭಗವಂತ ಇಡೀ ವಿಶ್ವಕ್ಕೆ ಚಲನೆ ಕೊಡುವವನು. ಆದ್ದರಿಂದ ಆತ ಅಗ್ನಿ. ಹೀಗೆ ವೇದದಲ್ಲಿನ ಶಬ್ದಗಳನ್ನು ಒಡೆದಾಗ, ಆ ಶಬ್ದದೊಳಗೆ ಸರ್ವಾಂತರ್ಯಾಮಿ ಭಗವಂತ ಹುದುಗಿರುವುದು ಕಾಣಸಿಗುತ್ತದೆ. ಈ ಅನುಸಂಧಾನವಿಲ್ಲದೆ ವೇದಾರ್ಥಚಿಂತನೆ ಮಾಡಿದರೆ ಎಲ್ಲವೂ ಗೊಂದಲಮಯವಾಗಿ ಕಾಣುವ ಅಪಾಯ ಹೆಚ್ಚು.

ಆಯಾ ಪ್ರಾರ್ಥನೆಗನುಗುಣವಾಗಿ ಭಗವಂತನನ್ನು ಆಯಾ ವಿಶೇಷ ನಾಮದಿಂದ ಸ್ತುತಿಸುತ್ತಾರೆ. ಚಲನೆ ಇಲ್ಲದ ಪ್ರಪಂಚಕ್ಕೆ ಚಾಲಕಶಕ್ತಿ ಭಗವಂತ ಎನ್ನುವ ಅನುಸಂಧಾನದಿಂದ ಭಗವಂತನನ್ನು 'ಅಗ್ನಿ' ಎಂದು ಸಂಬೋಧಿಸುತ್ತಾರೆ. "ನೀನಿಲ್ಲದೆ ಈ ಪ್ರಪಂಚ ನಡೆಯುವುದಿಲ್ಲ, ಈ ಪ್ರಪಂಚಕ್ಕೆ ಸ್ವತಃ ಚಲನೆ ಇಲ್ಲ. ಅದು ಏನು ಮಾಡಬೇಕೋ ಅದನ್ನು ಸ್ವಯಂ ಮಾಡಲಾರದು. ಇಂತಹ ವಿಶ್ವಕ್ಕೆ ಹಾಗೂ ಆ ವಿಶ್ವದಲ್ಲಿ ಒಬ್ಬನಾದ ನನಗೆ ಚಾಲನಾಶಕ್ತಿ ಕೊಟ್ಟು ನಡೆಸು" ಎನ್ನುವ ಪ್ರಾರ್ಥನೆ ಭಗವಂತನ 'ಅಗ್ನಿ' ನಾಮದ ಹಿಂದಿನ ಅನುಸಂಧಾನ. ಇದೇ ರೀತಿ ಮಿತ್ರ. ಒಂದು ವಸ್ತುವಿನ ಅರಿವನ್ನು ಕೊಡುವವನು; ಮುಂದೆ ಏನಾಗುತ್ತದೆ ಎನ್ನುವುದನ್ನು ಪೂರ್ಣವಾಗಿ ತಿಳಿದು, ಖಚಿತವಾಗಿ ರಕ್ಷಿಸುವ ನಿಜವಾದ 'ಮಿತ್ರ' ಆ ಭಗವಂತ. ಹೀಗೆ ಇಂದ್ರ, ರುದ್ರ, ವಾಯು, ಇತ್ಯಾದಿ ನಾಮಗಳಿಗೆ ಅದರದ್ದೇ ಆದ ವಿಶೇಷ ಅನುಸಂಧಾನವಿದೆ.

ಇಲ್ಲಿ ಭಗವಂತನನ್ನು "ಅರ್ಥೇಷು ಅಭಿಜ್ಞಃ" ಎಂದು ಕರೆದಿದ್ದಾರೆ. ಸಮಸ್ತ ವೇದವಾಙ್ಮಯ, ಪುರಾಣ, ಇತಿಹಾಸಗಳು, ನಮಗೆ ತಿಳಿದಿರುವ ತರ್ಕಗಳು, ಎಲ್ಲವೂ ಜಗತ್ಕಾರಣ ಭಗವಂತನನ್ನು ಹೇಳುತ್ತವೆ. ಒಂದು ವಸ್ತುವನ್ನು ಸೃಷ್ಟಿ ಮಾಡಬೇಕಾದರೆ ನಮಗೆ ಇಚ್ಛಾಶಕ್ತಿ, ಕ್ರಿಯಾಶಕ್ತಿ ಮತ್ತು ಜ್ಞಾನಶಕ್ತಿ ಬೇಕು. ವಸ್ತುವಿನ ಅರಿವಿಲ್ಲದವನಿಗೆ ಒಂದು ವಸ್ತುವನ್ನು ಸೃಷ್ಟಿಮಾಡಲು ಸಾಧ್ಯವಿಲ್ಲ. ಆದ್ದರಿಂದ ಯಾರು ಸರ್ವಜ್ಞನಲ್ಲವೋ ಅವನು ಸರ್ವಕರ್ತನಾಗಲು ಸಾಧ್ಯವಿಲ್ಲ. ಇಡೀ ಜಗತ್ತನ್ನು ಸೃಷ್ಟಿಮಾಡಿದ ಭಗವಂತನಿಗೆ ಇಡೀ ಜಗತ್ತಿನಲ್ಲಿರುವ ಸಮಸ್ತ ಕಾರ್ಯ ಕಾರಣಗಳ ಅರಿವಿರಲೇಬೇಕು. ಆದ್ದರಿಂದ ಭಗವಂತ ಕೇವಲ ಅರ್ಥಜ್ಞನಲ್ಲ, ಅವನು 'ಅರ್ಥೇಷು ಅಭಿಜ್ಞಃ'. ಆತನಲ್ಲಿ ಅನಂತಾನಂತ ವಸ್ತುಗಳ ಅನಂತಾನಂತ ಅರಿವು ತುಂಬಿದೆ.

ಇಲ್ಲಿ ನಿಮಗೊಂದು ಪ್ರಶ್ನೆ ಬರಬಹುದು. ಚತುರ್ಮುಖ ಬ್ರಹ್ಮನನ್ನು ವಿಧಿ, ವಿಧಾತ, ಸೃಷ್ಟಿಕರ್ತಾ, ಇತ್ಯಾದಿಯಾಗಿ ಕರೆಯುತ್ತಾರೆ. ಸೃಷ್ಟಿ ಕಾರಣಳು ಪ್ರಕೃತಿ. ಆದರೆ ಕೇವಲ ಭಗವಂತ ಮಾತ್ರ ಏಕೆ 'ಅರ್ಥೇಷು ಅಭಿಜ್ಞಃ' ಎಂದು. ಇದು ಉತ್ತಮವಾದ ಪ್ರಶ್ನೆ. ಈ ಪ್ರಶ್ನೆಗೆ ಪೂರಕ ಎನ್ನುವಂತೆ ಈ ಕೆಳಗಿನ ವೇದಮಂತ್ರವಿದೆ.

ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ ।
ಯಂ ಕಾಮಯೇ ತಂತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ॥ಋಗ್ವೇದ೧೦-೧೨೫-೦೫॥

ಇಲ್ಲಿ "ಜಗತ್ತನ್ನು ಸೃಷ್ಟಿಮಾಡಬಲ್ಲ ಚತುರ್ಮುಖನನ್ನು ನಾನು ಸೃಷ್ಟಿಸಬಲ್ಲೆ" ಎಂದಿದ್ದಾಳೆ ಶ್ರೀಲಕ್ಷ್ಮಿ. ಆದರೂ ಕೂಡಾ ಭಗವಂತನೇ ಏಕೆ 'ಅರ್ಥೇಷು ಅಭಿಜ್ಞಃ' ಎನ್ನುವುದು ನಮ್ಮ ಪ್ರಶ್ನೆಯಾದರೆ ಅದಕ್ಕೆ ತಾಯಿ ಶ್ರೀಲಕ್ಷ್ಮಿಯೇ ಉತ್ತರಿಸುತ್ತಾ ಹೇಳುತ್ತಾಳೆ:

ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವಂತಃ ಸಮುದ್ರೇ ।
ತತೋ ವಿ ತಿಷ್ಠೇ ಭುವನಾನು ವಿಶ್ವೋತಾಮೂಂ ದ್ಯಾಂ ವರ್ಷ್ಮಣೋಪ ಸ್ಪೃಶಾಮಿ ॥ಋಗ್ವೇದ ೧೦-೧೨೫-೦೭ ॥

ಇಲ್ಲಿ ಶ್ರೀಲಕ್ಷ್ಮಿ ಹೇಳುತ್ತಾಳೆ: "ಚತುರ್ಮುಖನಿಗೆ ಕಾರಣಳು ನಾನು. ಆದರೆ ನನಗೊಬ್ಬ ಕಾರಣಪುರುಷನಿದ್ದಾನೆ; ಅವನು ಸಮುದ್ರದಲ್ಲಿ ಮಲಗಿದ್ದಾನೆ" ಎಂದು. ಅಂದರೆ ಪ್ರಕೃತಿ ಕೂಡಾ ಭಗವಂತನ ಅಧೀನ. ಪ್ರಕೃತಿಗೆ ಸರ್ವ ಕರ್ತೃತ್ವ ಇದ್ದರೂ ಕೂಡಾ, ಆಕೆ ಭಗವಂತನ ಅಧೀನ. ಹೇಗೆ ಪ್ರಕೃತಿ ಭಗವಂತನ ಅಧೀನವೋ ಹಾಗೇ ಚತುರ್ಮುಖ ಬ್ರಹ್ಮ ಕೂಡಾ ಭಗವಂತನ ಅಧೀನ. ಇದಕ್ಕೆ ಪೂರಕವಾದ ಮಂತ್ರ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಬರುತ್ತದೆ. ಅಲ್ಲಿ ಹೇಳುವಂತೆ:

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಶ್ಚ ಪ್ರಹಿಣೋತಿ ತಸ್ಮೈ ।
ತಂ ಹ ದೇವಮಾತ್ಮಬುದ್ಧಿ ಪ್ರಕಾಶಂ ಮುಮುಕ್ಷು ರ್ವೈ ಶರಣಮಹಂ ಪ್ರಪದ್ಯೇ ॥ ೬-೧೮ ॥

ಇಲ್ಲಿ ಚತುರ್ಮುಖನಿಗೆ ಬುದ್ಧಿಯ ಬೆಳಕನ್ನು ಹಾಗೂ ಸೃಷ್ಟಿಯ ಅರಿವನ್ನು ಕೊಟ್ಟ ಭಗವಂತನನ್ನು 'ಅರಿವಿನ ಮಡು' ಎಂದಿದ್ದಾರೆ. ಇಂತಹ ಭಗವಂತನನ್ನು ಭಾಗವತದಲ್ಲಿ 'ಸ್ವರಾಟ್' ಎಂದು ಕರೆದಿದ್ದಾರೆ. ಅಂದರೆ ಸ್ವಯಂ ಅರಿವಿನ ಮಡುವಾದ ಭಗವಂತ ಇನ್ನೊಬ್ಬರಿಂದ ಅರಿವನ್ನು ಪಡೆಯುವುದಿಲ್ಲ. ಚತುರ್ಮುಖ ಬ್ರಹ್ಮ ಸ್ವಯಂ ಸ್ವರಾಟ್ ಅಲ್ಲ ಎನ್ನುವುದನ್ನು ಭಾಗವತವೇ ಸ್ಪಷ್ಟಪಡಿಸುತ್ತದೆ. ಇಲ್ಲಿ ಹೇಳುತ್ತಾರೆ: "ತೇನೇ ಬ್ರಹ್ಮ ಹೃದಾ ಯ ಆದಿಕವಯೇ" ಎಂದು. 'ತೇನೇ' ಅಂದರೆ ಬಿತ್ತರಿಸುವುದು. ಶಬ್ದಗಳ ಬೃಹತ್ ಸಮುದಾಯವಾದ ವೇದವನ್ನು ಇಲ್ಲಿ 'ಬ್ರಹ್ಮ' ಎಂದಿದ್ದಾರೆ. ವೇದವನ್ನು ಆದಿಕವಿ ಚತುರ್ಮುಖಬ್ರಹ್ಮನಿಗೆ ಬಿತ್ತರಿಸಿದ ಭಗವಂತ ನಿಜವಾದ 'ಅರ್ಥೇಷು ಅಭಿಜ್ಞಃ'. ಇಲ್ಲಿ ಆದಿಕವಿ ಎಂದು ಚತುರ್ಮುಖನನ್ನು ಸಂಬೋಧಿಸಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ವಾಲ್ಮೀಕಿಯನ್ನು ಆದಿಕವಿ ಎಂದು ಕರೆಯುತ್ತಾರೆ. ಆದರೆ ವಾಲ್ಮೀಕಿಗೂ ಸ್ಫೂರ್ತಿಕೊಟ್ಟ ಚತುರ್ಮುಖ ನಿಜವಾದ ಆದಿಕವಿ. ಕವಿ ಎಂದರೆ ಎಲ್ಲಾ ಶಬ್ದಗಳಿಂದಲೂ ಭಗವಂತನ ಗುಣವಿಶೇಷ ಕಾಣುವವ. ಈ ಸೃಷ್ಟಿಯ ಮೊದಲ ಜೀವನಾಗಿರುವ, ಸರ್ವಶಬ್ದಗಳಲ್ಲೂ

ಭಗವಂತನನ್ನು ಕಾಣಬಲ್ಲ ಚತುರ್ಮುಖ 'ಆದಿಕವಿ'. ಈ ಆದಿಕವಿಗೆ ಸೃಷ್ಟಿಯ ಪೂರ್ವದಲ್ಲಿ ವೇದವನ್ನು ಬಿತ್ತರಿಸಿದ ಭಗವಂತ '**ಅರ್ಥೇಷು ಅಭಿಜ್ಞಃ**'.

ಸೃಷ್ಟಿಯ ಆದಿಯಲ್ಲಿ ಭಗವಂತ ಜೀವರಲ್ಲಿ ಎಲ್ಲರಿಗಿಂತ ಶ್ರೇಷ್ಠ ಜೀವ ಚತುರ್ಮುಖಬ್ರಹ್ಮನಿಗೆ ವೇದವನ್ನು ಉಪದೇಶಿಸಿದ. ತನ್ನ ಪ್ರಥಮಪುತ್ರ ಚತುರ್ಮುಖನಿಗೆ ಹೃದಯಪೂರ್ವಕವಾಗಿ, ಪೂರ್ಣ ಅರ್ಥವಾಗುವಂತೆ ಭಗವಂತ ವೇದವನ್ನು ಉಪದೇಶಿಸಿದ ಎನ್ನುವುದನ್ನು ಇಲ್ಲಿ 'ಹೃದಾ' ಎನ್ನುವ ವಿಶೇಷಣ ಒತ್ತಿ ಹೇಳುತ್ತದೆ. ವೇದವನ್ನು ಪೂರ್ಣವಾಗಿ ತಿಳಿದಿದ್ದರೆ ಅದು ಕೇವಲ ಬ್ರಹ್ಮ-ವಾಯುವಿಗೆ ಮಾತ್ರ. "**ಕಶ್ಛಂದಸಾಂ ಯೋಗಮಾ ವೇದ ಧೀರಃ**"॥ ೧೦.೧೧೪.೦೯ ॥ ಎನ್ನುತ್ತದೆ ಋಗ್ವೇದ.: ಅಂದರೆ "ವೇದಗಳ ಅರ್ಥವನ್ನು ಪೂರ್ಣ ಬಲ್ಲೆ ಎಂದು ಹೇಳುವ ಧೀರ ಯಾರಿದ್ದಾರೆ" ಎಂದು ವೇದವೇ ಪ್ರಶ್ನಿಸುತ್ತಿದೆ ಮತ್ತು ಉತ್ತರವಾಗಿ ಹೇಳುತ್ತದೆ: "ವೇದಾರ್ಥವನ್ನು ತಿಳಿದಿದ್ದರೆ ಬ್ರಹ್ಮ ಮತ್ತು ಮುಖ್ಯಪ್ರಾಣ(ಕಃ) ತಿಳಿದಿದ್ದಾರೆ " ಎಂದು.

ಸರ್ವ ಶ್ರುತಿಗಳು, ತರ್ಕಗಳು, ಎಲ್ಲವೂ ಭಗವಂತನನ್ನೇ ಹೇಳುತ್ತವೆ. ಆದರೆ ಅಂತಹ ಭಗವಂತನನ್ನು ತಿಳಿಯುವುದು ಮಾತ್ರ ಅಷ್ಟು ಸುಲಭವಲ್ಲ. ಇಲ್ಲಿ ಹೇಳುತ್ತಾರೆ: "**ಮುಹ್ಯಂತಿ ಯಂ ಸೂರಯಃ**" ಎಂದು. ಒಮ್ಮೊಮ್ಮೆ ಭಗವಂತನ ಬಗ್ಗೆ ಜ್ಞಾನಿ(ಸೂರಿ)ಗಳೂ ಕೂಡಾ ಗೊಂದಲಕ್ಕೊಳಗಾಗುತ್ತಾರೆ. ಅಷ್ಟೇ ಅಲ್ಲ, ಜ್ಞಾನಿಗಳೊಂದಿಗೆ ದೇವತೆಗಳೂ ಕೂಡಾ ಒಮ್ಮೊಮ್ಮೆ ವಿಸ್ಮರಣಕ್ಕೊಳಗಾಗಿ, ಭಗವಂತನನ್ನು ಮರೆತುಬಿಡುತ್ತಾರೆ! ಹೀಗಾಗಿ ಭಗವಂತನನ್ನು ತಿಳಿಯಲು ಹಾಗೂ ಎಂದೂ ಆತನನ್ನು ಮರೆಯದೇ ಇರಲು ನಾವು ಆತನಲ್ಲೇ ಶರಣಾಗಬೇಕು. ಶಾಸ್ತ್ರವೇದ್ಯ ಭಗವಂತನ ಕರುಣೆ ಇಲ್ಲದೇ ಆತನನ್ನು ಅರಿಯಲು ಸಾಧ್ಯವಿಲ್ಲ.

ಒಟ್ಟಿನಲ್ಲಿ ಹೇಳಬೇಕೆಂದರೆ: ಭಗವಂತ ಆದಿಜೀವನಾದ ಚತುರ್ಮುಖನಿಗೆ ಸಮಸ್ತ ವೇದವಾಙ್ಮಯವನ್ನು ಕೊಟ್ಟ. ನಾವು ಈ ರೀತಿ ಭಗವಂತನಿಂದ ಇಳಿದುಬಂದ ವೇದದಿಂದ, ವೇದವೇದ್ಯನಾದ ಭಗವಂತನನ್ನು, ವೇದದ ಒಂದೊಂದು ಪದದಿಂದಲೂ ಸಮನ್ವಯಮಾಡಿ ಅರಿತುಕೊಳ್ಳಬೇಕು. ತರ್ಕದಿಂದಲೂ ಆತನ ಅಸ್ತಿತ್ವವನ್ನು ತಿಳಿದುಕೊಳ್ಳಬೇಕು. ಭಗವಂತ ಈ ಜಗತ್ತಿನ ಸರ್ವಕಾರಣ, ಸರ್ವಜ್ಞ, ಸರ್ವಶಕ್ತ, ಸರ್ವತಂತ್ರ-ಸ್ವತಂತ್ರ ಆತ. ಇಂತಹ ಭಗವಂತನನ್ನು ಆತನ ಕರುಣೆಯಿಂದ ಅರಿಯಬೇಕು. ಇದು ಭಾಗವತದ ಪ್ರಥಮ ಶ್ಲೋಕದ ಮೊದಲ ಎರಡು ಪಾದದ ಸಾರ.

ಭಗವಂತ ಈ ಸೃಷ್ಟಿಯನ್ನು ಏಕೆ ನಿರ್ಮಾಣ ಮಾಡಿದ? ಅನಾದಿನಿತ್ಯನಾದ ಜೀವನಿಗೆ ಭಗವಂತ ಏಕೆ ದೇಹವನ್ನು ಕೊಟ್ಟ? ಭಗವಂತನ ಪ್ರಪಂಚ ಸೃಷ್ಟಿಯ ಮೂಲ ಉದ್ದೇಶ ಏನು? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ರೂಪದಲ್ಲಿ ಶ್ಲೋಕದ ಮುಂದಿನ ಪಾದವಿದೆ. ಇಲ್ಲಿ ಹೇಳುತ್ತಾರೆ: "**ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋ ಮೃಷಾ**" ಎಂದು. ನಮಗೆ ಭಗವಂತನ ಸೃಷ್ಟಿ ಅರ್ಥವಾಗಬೇಕಾದರೆ ಆತ ಮೊದಲು ಏನು ಮಾಡಿದ ಎನ್ನುವುದನ್ನು ನಾವು ತಿಳಿದುಕೊಳ್ಳಬೇಕು. ಭಗವಂತ ತನ್ನ ಸೃಷ್ಟಿಯಲ್ಲಿ ಮೊದಲು ತನ್ನನ್ನು ತಾನು ಅನೇಕ ರೂಪಗಳಿಂದ ಸೃಷ್ಟಿಸಿಕೊಂಡ. ನಂತರ ಜೀವರನ್ನು ಮತ್ತು ಜಡವನ್ನೂ ಸೃಷ್ಟಿ ಮಾಡಿದ. ಇದೇ ತ್ರಿ-ಸರ್ಗ. ಇಲ್ಲಿ ಬೆಳಕಿನಂತೆ ಭಗವಂತನ ಅನೇಕ ರೂಪಗಳ ಸೃಷ್ಟಿಯಾಯಿತು ಎಂದಿದ್ದಾರೆ. ಇದು ಹೇಗೆಂದರೆ: ನಾವು ಒಂದು ಹಣತೆಯಿಂದ ಇನ್ನೊಂದು ಹಣತೆಯನ್ನು ಹಚ್ಚಿದಂತೆ. ಎಷ್ಟೇ ಹಣತೆಯನ್ನು ಹಚ್ಚಿದರೂ, ಹೇಗೆ ಮೂಲ ಹಣತೆಯ ಪ್ರಕಾಶ ಕುಂದುವುದಿಲ್ಲವೋ, ಹಾಗೇ ಭಗವಂತ. ಆತ ಸಾವಿರಾರು ರೂಪ ಧರಿಸಿದರೂ ಕೂಡಾ, ಆತನ ಮೂಲರೂಪದ ಶಕ್ತಿ ಎಂದೂ ಕುಂದುವುದಿಲ್ಲ. ಆತನ ಮೂಲರೂಪ, ಅನಂತ ಅವತಾರ ರೂಪ, ಎಲ್ಲಾ ರೂಪಗಳಲ್ಲೂ ಸಮಾನ ಶಕ್ತಿ ಅಡಗಿದೆ. ಇದು ಬೆಳಕಿನಿಂದ

ಬೆಳಕಿನ ಸೃಷ್ಟಿ. ಭಗವಂತನ ಮೂಲರೂಪವೂ ಪೂರ್ಣ ಹಾಗೂ ಆತನ ಅವತಾರ ರೂಪವೂ ಪೂರ್ಣ. ಭಗವಂತ ಅನೇಕ ರೂಪ ತಾಳುವುದು ಎಂದರೆ ಅದು ಆತನ ತೇಜಸ್ಸಿನ ವಿನಿಮಯ.

ಎರಡನೇ ಸರ್ಗ 'ಜೀವರು'. ಇವರು ಭಗವಂತನಂತಲ್ಲ. ಜೀವರು ಅನೇಕ. ಅವರ ರೂಪಗಳು ಅನೇಕ. ಜೀವರ ಸ್ವಭಾವ ಭಿನ್ನ. ಅವರವರ ಸಿದ್ಧಿ ಬೇರೆ, ಜ್ಞಾನ ಬೇರೆ, ಕರ್ಮ ಬೇರೆ, ಆನಂದ ಬೇರೆ. ನನ್ನ ಜ್ಞಾನ ನಿಮ್ಮ ಜ್ಞಾನವಲ್ಲ; ನನ್ನ ಆನಂದ ನಿಮ್ಮ ಆನಂದವಲ್ಲ; ನನ್ನ ಸಾಧನೆ ನಿಮ್ಮ ಸಾಧನೆ ಅಲ್ಲ; ನನ್ನ ಸಿದ್ಧಿ ನಿಮ್ಮ ಸಿದ್ಧಿಯಲ್ಲ. ಹೀಗೆ ಎಷ್ಟು ಮಂದಿ ಜೀವರೋ ಅಷ್ಟು ವೈವಿಧ್ಯ. ಅನಾದಿನಿತ್ಯನಾದ ಅನಂತಜೀವ-ಅನಂತ ರೂಪವಾಗಿರುವುದರಿಂದ, ಮೊದಲು ಭಗವಂತ ಅನಂತ ರೂಪನಾಗಿ, ಜೀವರ ಬಿಂಬರೂಪನಾಗಿ ನಿಂತ. ಇದು ಹೇಗೆಂದರೆ: ನಾವು ಸಾವಿರಾರು ತಟ್ಟೆಯಲ್ಲಿ ನೀರನ್ನು ತುಂಬಿಸಿಟ್ಟು, ಅದರಲ್ಲಿ ಏಕನಾಗಿರುವ ಸೂರ್ಯನ ಸಾವಿರಾರು ಪ್ರತಿಬಿಂಬ ಕಂಡಂತೆ. ಈ ರೀತಿ ಭಗವಂತ ಪ್ರತಿಯೊಬ್ಬರೊಳಗೂ ಬಿಂಬರೂಪನಾಗಿ ನಿಂತ. ಮೂರನೇ ಸರ್ಗ 'ಜೀವ'ದ ಅಸ್ತಿತ್ವಕ್ಕೆ ಬೇಕಾದ ಜಡ. ಜಡಸೃಷ್ಟಿಯ ಮುಖೇನ ಭಗವಂತ 'ಜೀವ'ನಿಗೆ ಬೇಕಾದ ರೂಪವನ್ನು ಕಲ್ಪಿಸಿಕೊಟ್ಟ. ಇಡೀ ವಿಶ್ವದಲ್ಲಿನ ಜಡಪ್ರಪಂಚ ಮುಖ್ಯವಾಗಿ ಮಣ್ಣಿನ ವಿಕಾರ. ವಿಶ್ವದಲ್ಲಿನ ಜೀವರು ನೀರಿನಲ್ಲಿನ ಪ್ರತಿಬಿಂಬದಂತೆ ಭಗವಂತನ ಪ್ರತಿಬಿಂಬ. ಈ ಎಲ್ಲಾ ಪ್ರತಿಬಿಂಬಗಳಿಗೆ ಬಿಂಬನಾಗಿ ನಿಂತು ನಡೆಸುವವನು ಬೆಳಕಿನಂತೆ ಅನಂತ ರೂಪನಾಗಿರುವ ಭಗವಂತ.

ನಮ್ಮ ಮುಂದಿನ ಪ್ರಶ್ನೆ: ಭಗವಂತ ಈ ಸೃಷ್ಟಿಯನ್ನು ಏಕೆ ನಿರ್ಮಾಣ ಮಾಡಿದ ಎನ್ನುವುದು. ಇದನ್ನು ಸ್ಪಷ್ಟಪಡಿಸಲಿಕ್ಕಾಗಿ ಇಲ್ಲಿ 'ಮೃಷಾ' ಎಂದಿದ್ದಾರೆ. ಅಂದರೆ ಭಗವಂತ ಯಾವುದೇ ಲಾಭಕ್ಕಾಗಿ ಈ ಸೃಷ್ಟಿಯನ್ನು ನಿರ್ಮಿಸಿಲ್ಲ. ಆತನಿಗೆ ಈ ಸೃಷ್ಟಿ ವ್ಯರ್ಥ. ಆದರೆ ಇದನ್ನು ಆತ ನಮಗಾಗಿ ಸೃಷ್ಟಿಸಿದ. ಒಂದು ವೇಳೆ ಆತ ಈ ಪ್ರಪಂಚವನ್ನು ಸೃಷ್ಟಿಸದೇ ಇರುತ್ತಿದ್ದರೆ, ಇರವಿನ ಅರಿವೂ ಇಲ್ಲದೇ ಇದ್ದ ಸಮಸ್ತ ಜೀವಗಳೂ, ಉದ್ಧಾರದ ಮಾರ್ಗದಿಂದ ವಂಚಿತರಾಗಿ ವ್ಯರ್ಥವಾಗಿ ಹೋಗಬೇಕಾಗುತ್ತಿತ್ತು. ಭಗವಂತನ ಈ ಸೃಷ್ಟಿ ನಾವು ಸಾಧನೆ ಮಾಡುವ ಪಾಠಶಾಲೆ. "ಈ ಶಾಲೆಯಲ್ಲಿ ಕಲಿತು ಪಾಸಾಗಿ ಮೇಲಕ್ಕೆ ಹೋಗು" ಎಂದು ಭಗವಂತ ಸೃಷ್ಟಿಯನ್ನು ನಿರ್ಮಿಸಿದ. ಜೀವ ಅನ್ನುವುದು ಒಂದು ಬೀಜದಂತೆ. ಆ ಬೀಜವನ್ನು ಬಿತ್ತಿದರೆ ಅದು ಗಿಡವಾಗಿ, ಹೆಮ್ಮರವಾಗಿ ಬೆಳೆದೀತು. ಆದರೆ ಆ ಬೀಜವನ್ನು ಬಿತ್ತದೆ, ಹಾಗೇ ಬಿಟ್ಟರೆ ಅದು ವ್ಯರ್ಥ. ಅಸೃಜ್ಯಾವಸ್ಥೆಯಲ್ಲಿ ಜೀವರ ಪಾಡು ಬಿತ್ತದ ಬೀಜದಂತೆ. ಅದನ್ನು ಸೃಜ್ಯಾವಸ್ಥೆಗೆ ತಾರದಿದ್ದರೆ ಆ ಜೀವದ ಅಸ್ತಿತ್ವವೇ ವ್ಯರ್ಥವಾಗಿ ಹೋಗುತ್ತದೆ. ಹೀಗೆ ಇರವಿನ ಅರಿವಿಲ್ಲದ ಜೀವನಿಗೆ ದೇಹವನ್ನು ಕೊಟ್ಟು, ಇರವಿನ ಅರಿವನ್ನು ಕೊಟ್ಟು, ಸೃಷ್ಟಿ ಎನ್ನುವ ತೋಟದಲ್ಲಿ ಜೀವ ಎನ್ನುವ ಬೀಜವನ್ನು ಬಿತ್ತಿ, ಜೀವನಿಗೆ ಉದ್ಧಾರದ ದಾರಿ ತೋರಿದ ಕಾರುಣ್ಯಮೂರ್ತಿ ಆ ಭಗವಂತ.

ಸಂಸಾರದಲ್ಲಿ ನಾವು ಪಡುವ ಎಲ್ಲಾ ಕಷ್ಟಗಳೂ ಕೂಡಾ ನಮ್ಮ ಉದ್ಧಾರದ ದಿಸೆಯಲ್ಲಿ ನಾವು ಅನುಭವಿಸತಕ್ಕಂತಹ ಅನುಭೂತಿಗಳು. ಇವು ನಮ್ಮನ್ನು ಎತ್ತರಕ್ಕೇರಿಸುವ ಮೆಟ್ಟಿಲುಗಳು. ಸಂಸ್ಕೃತದಲ್ಲಿ ಶಿಕ್ಷಾ ಎಂದರೆ ಶಿಕ್ಷಣ ಎಂದರ್ಥ. ಹಾಗಾಗಿ ನಮ್ಮ ಜೀವನದಲ್ಲಿ ಶಿಕ್ಷೆಯಂತೆ ಕಾಣುವ ಪ್ರತಿಯೊಂದು ಘಟನೆ ಕೂಡಾ ಒಂದೊಂದು ಕಲಿಕೆ. ಇದು ದಂಡನೆಯಲ್ಲ. ನಾವು ಅದನ್ನು ಕಲಿತು ಮೇಲಕ್ಕೆ ಬರುತ್ತೇವೆ. ಹೀಗೆ ಭಗವಂತ ತನಗೆ ವ್ಯರ್ಥವಾದರೂ ಕೂಡಾ, ಜೀವಗಳ ಉದ್ಧಾರಕ್ಕಾಗಿ, ಕಾರುಣ್ಯದಿಂದ ಈ ಸೃಷ್ಟಿಯನ್ನು ನಮಗಾಗಿ ನಿರ್ಮಾಣಮಾಡಿದ. ನಾವು ಭಗವಂತ ಒದಗಿಸಿಕೊಟ್ಟ ಈ ಸಾಧನಾ ಶರೀರ ಬಳಸಿಕೊಂಡು, ಭಗವಂತನತ್ತ ಹೆಜ್ಜೆ ಹಾಕಬೇಕು. ಸಾಧನಾ ಶರೀರದಿಂದಲೇ ಜೀವನಿಗೆ ಸಾಧನೆ. ಸಾಧನೆಯಿಲ್ಲದೆ ಮೋಕ್ಷವಿಲ್ಲ. ಹೀಗಾಗಿ ಸಾಧನೆ ಪೂರ್ತಿಯಾಗಿ ಭಗವಂತ ಕರೆಸಿಕೊಳ್ಳುವ ತನಕ ಜೀವ ಕಾಯಬೇಕಾಗುತ್ತದೆ.

ಭಗವಂತ ನಮಗಾಗಿ ನಿರ್ಮಿಸಿದ ಈ ಪ್ರಪಂಚ ನಮಗೆ ಎಂದೂ ವ್ಯರ್ಥವಲ್ಲ. ಈ ಪ್ರಪಂಚ ಮಿಥ್ಯವಲ್ಲ. ಭಗವಂತ ಎಂದೂ ಮಿಥ್ಯವಾದುದ್ದನ್ನು ಮಾಡುವುದಿಲ್ಲ ಎನ್ನುವುದನ್ನು ವಿವರಿಸುತ್ತಾ ಹೇಳುತ್ತಾರೆ: **"ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ"** ಎಂದು. ಕುಹಕ ಎಂದರೆ ವಂಚನೆ, ಮೋಸ, ಕಪಟ, ಸುಳ್ಳು, ಇತ್ಯಾದಿ. ಭಗವಂತ ನಿರಸ್ತಕುಹಕ. ಆತ ನಿಷ್ಕಪಟವಾದ ಪರಿಶುದ್ಧ ತತ್ತ್ವ. ಭಗವಂತನ ಮತ್ತು ಜೀವನ ನಡುವೆ ನೇರ ಸಂಬಂಧವಾಗಿ ನಡೆಯುವ ಯಾವ ಕ್ರಿಯೆಯಲ್ಲೂ ಕೂಡಾ ಕಪಟವಿಲ್ಲ. ಇದು ಶಾಸ್ತ್ರದ ಮೂಲ ಪ್ರಮೇಯ. ಸೃಷ್ಟಿಯಲ್ಲಿ ಕಪಟ, ಮೋಸ, ವಂಚನೆ ಬೆಳೆದಿರುವುದು ಮಾಧ್ಯಮಗಳಿಂದ. ಉದಾಹರಣೆಗೆ: ಸೂರ್ಯನನ್ನು ನೀರು ಪ್ರತಿಫಲಿಸುತ್ತದೆ. ಆಗ ಅಲ್ಲಿ ಸೂರ್ಯ ವಿಕೃತನಾಗಿ ಕಾಣಬಹುದು. ಇದಕ್ಕೆ ಕಾರಣ ಮಾಧ್ಯಮವಾದ ನೀರೇ ಹೊರತು, ಸೂರ್ಯನಲ್ಲ. ಪ್ರತಿಯೊಂದು ಜೀವದ ಯೋಗ್ಯತೆಗನುಗುಣವಾಗಿ ಅದು ಪ್ರತಿಫಲಿಸುತ್ತದೆ. ಆದ್ದರಿಂದ ಪ್ರಪಂಚದಲ್ಲಿ ಮೂಲಸತ್ಯ ವಿಕೃತವಾಗಿ, ಅಜ್ಞಾನ-ದುಃಖ ಸೇರಿಕೊಂಡಿವೆ.

**'ಸತ್ಯಂ ಪರಂ ಧೀಮಹಿ'** ಎನ್ನುವಲ್ಲಿ ಭಗವಂತನನ್ನು 'ಸತ್ಯಃ' ಎಂದು ಕರೆದಿದ್ದಾರೆ. 'ಸತ್ಯ' ಶಬ್ದವನ್ನು ಒಡೆದು ನೋಡಿದರೆ: ಸತ್+ತಿ+ಯ. ಸತ್ ಎಂದರೆ ನಿರ್ದುಷ್ಟವಾದುದ್ದು; 'ತಿ' ಅಂದರೆ ಆನಂದ; 'ಯ' ಅಂದರೆ ಜ್ಞಾನ. ಆದ್ದರಿಂದ ಸತ್ಯಃ ಎಂದರೆ 'ಸಚ್ಚಿದಾನಂದ ಸ್ವರೂಪ' ಎಂದರ್ಥ. ಸತ್ ಎನ್ನುವ ಪದಕ್ಕೆ ಇನ್ನೂ ಅನೇಕ ಅರ್ಥಗಳಿವೆ. ಸರ್ವಸೃಷ್ಟ, ಸರ್ವನಿಯಾಮಕ, ಸರ್ವಸ್ಥಿತಿ ಕಾರಣ, ಸರ್ವಸಂಹಾರಕ ಇತ್ಯಾದಿ. ಅದೇ ರೀತಿ ಸತ್ ಎಂದರೆ ಜ್ಞಾನ-ಅಜ್ಞಾನ-ಬಂಧ-ಮೋಕ್ಷ. ಆದ್ದರಿಂದ ಸತ್ಯಃ ಎಂದರೆ ಸೃಷ್ಟಿಪ್ರದ, ಸ್ಥಿತಿಪ್ರದ, ಸಂಹಾರಪ್ರದ, ನಿಯಾಮಕ, ಜ್ಞಾನಪ್ರದ, ಅಜ್ಞಾನಪ್ರದ, ಬಂಧಪ್ರದ ಮತ್ತು ಮೋಕ್ಷಪ್ರದನಾದ ಭಗವಂತ. ಸೃಷ್ಟಿ-ಸ್ಥಿತಿ-ಸಂಹಾರ-ನಿಯಾಮಕನಾಗಿ, ಜ್ಞಾನಾಜ್ಞಾನ-ಬಂಧ-ಮೋಕ್ಷಗಳಿಗೆ ಕಾರಣನಾಗಿರುವ, ಸದ್ಗುಣಸ್ವರೂಪ ಜ್ಞಾನಾನಂದಮಯನಾದ ಭಗವಂತ 'ಸತ್ಯಃ'. ಇಂತಹ ಭಗವಂತನನ್ನು ಇಲ್ಲಿ 'ಪರಮ್' ಎಂದು ಸಂಬೋಧಿಸಿದ್ದಾರೆ. ಪರಮ್ ಎಂದರೆ: ಸರ್ವೋತ್ತಮ, ಸರ್ವವಿಲಕ್ಷಣ, ಸರ್ವಗುಣಪೂರ್ಣ, ಸರ್ವಪಾಲಕ ಎಂದರ್ಥ. ಇಂತಹ ಭಗವಂತನನ್ನು ನಾವೆಲ್ಲರೂ ಧ್ಯಾನ ಮಾಡೋಣ(ಧೀಮಹಿ) ಎನ್ನುವಲ್ಲಿಗೆ ಭಾಗವತದ ಮಂಗಲ ಶ್ಲೋಕ ಮುಕ್ತಾಯವಾಗುತ್ತದೆ.

ಹಿಂದೆ ಹೇಳಿದಂತೆ ಎಪ್ಪತ್ತಾರು ಅಕ್ಷರಗಳ ಈ ಶ್ಲೋಕ ಇಡೀ ತತ್ತ್ವ ಮತ್ತು ಮಾತೃಕೆಗಳ ಸಾರಸರ್ವಸ್ವವನ್ನು ತನ್ನ ಗರ್ಭದಲ್ಲಿ ಧರಿಸಿದೆ. ಮೇಲೆ ವಿವರಿಸಿದ ವಿವರಣೆ ಕೇವಲ ಒಂದು ಆಯಾಮದಲ್ಲಿ ನಾವು ಕಾಣಬಹುದಾದ ಅರ್ಥಸಾರ. ಆದರೆ ಈ ಶ್ಲೋಕಕ್ಕೆ ಅನೇಕ ನೆಲೆಗಳಿವೆ. ಇನ್ನೊಂದು ನೆಲೆಯಲ್ಲಿ ನೋಡಿದರೆ ಈ ಶ್ಲೋಕ ಕೃಷ್ಣನ ಕಥೆಯನ್ನು ಹೇಳುತ್ತದೆ. ಭಾಗವತ ಎನ್ನುವುದು ಕೃಷ್ಣನ ಕಥೆ. ಕೃಷ್ಣ ಭೂಮಿಯಲ್ಲಿ ಅವತಾರ ಸಮಾಪ್ತಿ ಮಾಡಿ ಹೊರಟುಹೋದ ಮೇಲೆ, 'ಧರ್ಮ' ಭಾಗವತವನ್ನು ಬಂದು ಸೇರಿತು ಎನ್ನುತ್ತಾರೆ. ಕೃಷ್ಣನ ಇನ್ನೊಂದು ರೂಪ ಭಾಗವತ ಎಂದು ಭಾಗವತವೇ ಹೇಳುತ್ತದೆ. ಕೃಷ್ಣ ದೇವಕಿಯ ಗರ್ಭದಲ್ಲಿದ್ದಾಗ ದೇವತೆಗಳು ಮಾಡಿದ ಸ್ತೋತ್ರವನ್ನು ಭಾಗವತದಲ್ಲೇ ಹೀಗೆ ಹೇಳಿದ್ದಾರೆ:

> ಸತ್ಯವ್ರತಂ ಸತ್ಯಪರಂ ತ್ರಿಸತ್ಯಂ ಸತ್ಯಸ್ಯ ಯೋನಿಂ ನಿಹಿತಂ ಚ ಸತ್ಯೇ ।
> ಸತ್ಯಸ್ಯ ಸತ್ಯಮುತ ಸತ್ಯನೇತ್ರಂ ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ ॥೧೦-೩-೨೬॥

ಇಲ್ಲಿ ಭಗವಂತನನ್ನು ದೇವತೆಗಳು 'ಸತ್ಯಃ' ಎಂದು ಸ್ತೋತ್ರ ಮಾಡಿರುವುದನ್ನು ಕಾಣುತ್ತೇವೆ. 'ಸತ್ಯಃ' ಎನ್ನುವುದು ಕೃಷ್ಣಾವತಾರದ ವಿಶಿಷ್ಠ ನಾಮಧೇಯ. ಅದನ್ನೇ ಇಲ್ಲಿ 'ಸತ್ಯಂ ಪರಂ ಧೀಮಹಿ' ಎನ್ನುವಲ್ಲಿ ಕಾಣುತ್ತೇವೆ. ಬನ್ನಿ,

ಭಾಗವತದ ಮಂಗಲಪದ್ಯಕ್ಕೆ ಕೃಷ್ಣಾವತಾರ ಪರವಾದ ಇನ್ನೊಂದು ಅರ್ಥವನ್ನು ಭಗವಂತನ ಕೃಪೆ ಬೇಡಿ ಸಂಕ್ಷಿಪ್ತವಾಗಿ ತೆರೆದು ನೋಡುವ ಪ್ರಯತ್ನ ಮಾಡೋಣ.

**"ಜನ್ಮ ಆದ್ಯಸ್ಯ ಯತಃ"**-ಜಗತ್ತಿನ ಆದಿಪುರುಷನ ಜನ್ಮ ಎಲ್ಲಿ ಆಯಿತೋ ಅಲ್ಲಿಂದ-**"ಇತರತ್ರ ಅನ್ವಯಾತ್"** - ಬೇರೆ ಕಡೆಗೆ ಹೋದವ. ಅಂದರೆ ಕೃಷ್ಣನ ಜನ್ಮ ಸೆರೆಮನೆಯಲ್ಲಿ ಆಯಿತು. ಆತ ಅಲ್ಲಿಂದ ನಂದಗೋಪ-ಯಶೋದೆಯನ್ನು ಸೇರಿದ. ಅಷ್ಟೇ ಅಲ್ಲ, **"ಪುನಶ್ಚ ಇತರತಃ"**- ಅಂದರೆ ಮರಳಿ ಎಲ್ಲಿ ಹುಟ್ಟಿದನೋ ಅಲ್ಲಿಗೆ ಕಂಸನನ್ನು ಕೊಲ್ಲಲು ಬಂದವ ಕೃಷ್ಣ. ಹೀಗೆ **"ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚ"** ಎನ್ನುವ ಈ ಶ್ಲೋಕದ ಸಾಲು ಕೃಷ್ಣಾವತಾರದಲ್ಲಿನ ಕೃಷ್ಣನ ಸಮಸ್ತ ಓಡಾಟವನ್ನು ಹೇಳುತ್ತದೆ.

**"ಅರ್ಥೇಷ್ವಭಿಜ್ಞಃ ಸ್ವರಾಟ್"**- ಪೂತನಿ, ಕಂಸ, ಶಕಟಾಸುರ, ಗೋಪಿಕಾಸ್ತ್ರೀಯರು, ಯಶೋಧೆ-ನಂದಗೋಪ, ವಸುದೇವ-ದೇವಕಿ, ಇಂದ್ರ, ಹೀಗೆ ಯಾರೇ ಇರಲಿ, ಅವರ ಬಳಿ ಯಾವ ರೀತಿ ನೆಡೆದುಕೊಳ್ಳಬೇಕೋ ಹಾಗೆ ನಡೆದುಕೊಂಡು[ಅರ್ಥೇಷು] ತನ್ನ ಸಾರ್ವಜ್ಞವನ್ನು ಕೃಷ್ಣ ಪ್ರಕಟಪಡಿಸಿದ. ಎಲ್ಲಾ ಕಡೆಯಿಂದಲೂ ಎಲ್ಲರಿಗಿಂತ ಹೆಚ್ಚು ಪ್ರಕಾಶಮಾನನಾಗಿ ತನ್ನ ಪೂರ್ಣ ಅವತಾರದ ಮಹಿಮೆಯನ್ನು ತೋರಿದ ಕೃಷ್ಣ 'ಸ್ವರಾಟ್' ಎನಿಸಿದ.

**"ತೇನೇ ಬ್ರಹ್ಮ ಹೃದಾ ಯ ಆದಿ ಕವಯೇ"**- ಯುದ್ಧ ಪ್ರಾರಂಭವಾದ ಆದಿಯಿಂದ, ಯುದ್ಧದ ನಂತರವೂ ಕೂಡಾ, ಕೃಷ್ಣ ಆ ಕಾಲದ ಅಪರೋಕ್ಷಜ್ಞಾನಿ(ಕವಿ)-ಇಂದ್ರ ಅವತಾರನಾದ ಅರ್ಜುನನ ಮೂಲಕ, ನಮಗೆ ಉಪನಿಷತ್ತಿನ ಸಾರಭೂತವಾದ ಬ್ರಹ್ಮವಿದ್ಯೆ, ಅಧ್ಯಾತ್ಮ ವಿದ್ಯೆಯನ್ನು ಬಿತ್ತರಿಸಿದ. ತನ್ನ ವಿಶ್ವರೂಪವನ್ನು ಬಿತ್ತರಿಸಿ ತೋರಿದ. ಆದರೂ ಕೂಡಾ-**"ಮುಹ್ಯಂತಿ ಯಂ ಸೂರಯಃ"**. ಆ ಕಾಲದ ಮಹಾನ್ ಜ್ಞಾನಿಗಳೇ ಕೃಷ್ಣನನ್ನು ಅರಿಯದೆ ಮೋಹಕ್ಕೊಳಗಾದರು! ಪಾಂಡವರು ಕೃಷ್ಣನನ್ನು ತಮ್ಮ ಸಂಬಂಧಿ ಎಂದು ಮೋಹಪಟ್ಟರು. ಗರ್ಗಾಚಾರ್ಯ, ಅಶ್ವತ್ಥಾಮ(ರುದ್ರಾವತಾರ), ಬಲರಾಮ(ಶೇಷಾವತಾರ), ಮುಂತಾದವರೂ ಕೂಡಾ ಭಗವಂತನ ಲೀಲೆಯನ್ನು ಕಂಡು ಮೋಹಕ್ಕೊಳಪಟ್ಟರು ಅಥವಾ ಭಗವಂತನನ್ನೇ ಮರೆತರು!

**"ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸಗಃ"**. ಅಂದಿನ ಕಾಲದ ಎಲ್ಲಾ ಜ್ಞಾನಿಗಳೂ ಕೂಡಾ ಕೃಷ್ಣನನ್ನು ಪಾಂಚಭೌತಿಕ ಶರೀರೀ ಎಂದೇ ತಿಳಿದರು. ಆದರೆ ಅವರ ತಿಳುವಳಿಕೆ ನಿಜವಲ್ಲ[ಮೃಷಾ]. ಭಗವಂತ ತ್ರಿಗುಣಾತೀತ. ಆತನ ದೇಹ ಜ್ಞಾನಾನಂದ ಸ್ವರೂಪವಾದುದು. ಆದರೆ ಇದು ಜನರಿಗೆ ತಿಳಿಯಲಿಲ್ಲ ಅಷ್ಟೇ. **"ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ"**: ಇನ್ನೊಂದು ತಪ್ಪು ತಿಳುವಳಿಕೆ ಎಂದರೆ ಕೃಷ್ಣ ಒಬ್ಬ ಸುಳ್ಳುಗಾರ, ಆತ ಕಪಟ ನಾಟಕ ಸೂತ್ರಧಾರಿ ಎಂಬಿತ್ಯಾದಿ ತಪ್ಪು ತಿಳುವಳಿಕೆ. ಆದರೆ ನಿರಸ್ತಕುಹಕನಾಗಿ ಸಾತ್ವಿಕರಿಗೆ, ಸಜ್ಜನರಿಗೆ ಯಾವುದು ಹಿತವೋ ಅದು 'ಸತ್ಯ' ಎಂದು ತೋರಿಸಿಕೊಟ್ಟವ ಶ್ರೀಕೃಷ್ಣ. ಇಂತಹ **ಸತ್ಯಃ** ನಾಮಕ ಭಗವಂತನ ಸರ್ವವಿಲಕ್ಷಣವಾದ**(ಪರಮ್)** ಹಾಗೂ ನಮಗೆ ಅತ್ಯಂತ ಸಮೀಪದ ಅವತಾರ ಕೃಷ್ಣಾವತಾರ.

ನಮ್ಮಲ್ಲಿ ಇಂದೂ ಕೂಡಾ ಹೆಚ್ಚಿನವರು ಕೃಷ್ಣ ಒಬ್ಬ ಸುಳ್ಳುಗಾರ, ಆತ ಮೋಸದಿಂದ ದ್ರೋಣ-ಕರ್ಣರನ್ನು ಕೊಲ್ಲಿಸಿದ, ಧರ್ಮರಾಯನಿಂದ ಸುಳ್ಳು ಹೇಳಿಸಿದ, ಬೆಣ್ಣೆ ಕದ್ದ, ಗೋಪಿಯರ ಸೀರೆ ಕದ್ದ, ಇತ್ಯಾದಿಯಾಗಿ ತಿಳಿದು ಗೊಂದಲಕ್ಕೊಳಗಾಗುವವರಿದ್ದಾರೆ. ಇದು ಯಾವುದು ಧರ್ಮ ಹಾಗೂ ಯಾವುದು ಅಧರ್ಮ; ಯಾವುದು ಸತ್ಯ ಹಾಗೂ ಯಾವುದು ಅಸತ್ಯ ಎನ್ನುವ ಪರಿಜ್ಞಾನವಿಲ್ಲದಾಗ ಆಗುವ ಗೊಂದಲ. ಸಂಕ್ಷಿಪ್ತವಾಗಿ ಕೆಲವು ಘಟನೆಗಳನ್ನು ಹೇಳಬೇಕೆಂದರೆ: ಮೊದಲನೆಯದಾಗಿ ದ್ರೋಣಾಚಾರ್ಯರನ್ನು ಧರ್ಮರಾಯನಿಂದ ಸುಳ್ಳು ಹೇಳಿಸಿ ಕೊಲ್ಲಿಸಿರುವುದು. ದ್ರೋಣಾಚಾರ್ಯ ಒಬ್ಬ ಬ್ರಹ್ಮರ್ಷಿ. ಅದೊಂದು ಮಹಾನ್ ಚೇತನ. ಆದರೆ ಅದ್ಯಾವುದೋ ಪ್ರಾರಾಬ್ಧಕ್ಕೊಳಗಾಗಿ ಅವರು ಅಧರ್ಮದ ಪರ ಯುದ್ಧಕ್ಕೆ ನಿಂತಿದ್ದರು. ದಿನಕ್ಕೆ ಕನಿಷ್ಠ ಹತ್ತುಸಾವಿರ ಸೈನಿಕರನ್ನು ಕೊಲ್ಲುವುದಾಗಿ

ಶಪತತೊಟ್ಟು, ಅದಕ್ಕಾಗಿ ಹಗಲೂ ರಾತ್ರಿ ಹೋರಾಟದಲ್ಲಿ ತೊಡಗಿದ್ದರು. ಇದು ಅವರಿಗೆ ಇನ್ನೆಂದೂ ಮೇಲಕ್ಕೇಳಲು ಅಸಾಧ್ಯವಾದ ತಮಸ್ಸಿನ ಮಾರ್ಗವಾಗಿತ್ತು. ಹೀಗಿರುವಾಗ ದ್ರೋಣಾಚಾರ್ಯರ ಉದ್ಧಾರ ಇದ್ದಿದ್ದು ಅವರ ಬದುಕಿನಲ್ಲಲ್ಲ, ಬದಲಿಗೆ ಅವರ ಸಾವಿನಲ್ಲಿ. ಅವರೊಬ್ಬರ ಸಾವಿನಿಂದ ದಿನಕ್ಕೆ ಹತ್ತುಸಾವಿರ ಸೈನಿಕರ ಪ್ರಾಣಹಾನಿ ತಪ್ಪುತ್ತದೆ ಮತ್ತು ಅವರು ಕೊಲೆಪಾತಕದಿಂದ ಪಾರಾಗುತ್ತಾರೆ. ಇಂತಹ ಮಹಾನ್ ಚೇತನವನ್ನು ಉದ್ಧಾರಮಾಡಬೇಕು ಎಂದು ಬಯಸಿದ ಕೃಷ್ಣ, ಧರ್ಮರಾಯನಿಂದ ಸುಳ್ಳು ಹೇಳಿಸಿದ. ಇದು ಸಜ್ಜನರ ಉದ್ಧಾರಕ್ಕೋಸ್ಕರ ಭಗವಂತ ನುಡಿಸಿದ ದೊಡ್ಡ ಸತ್ಯ. ತಿರುಳನ್ನು ನೋಡದೇ ಮೇಲ್ನೋಟದಲ್ಲಿ ನಿಂತರೆ ಈ ಸತ್ಯ ನಮಗೆ ಅರ್ಥವಾಗುವುದಿಲ್ಲ ಅಷ್ಟೇ. ಇನ್ನೊಂದು ಘಟನೆ ದುರ್ಯೋಧನನ ತೊಡೆಯನ್ನು ಭೀಮನಿಂದ ಕೃಷ್ಣ ಮುರಿಸಿರುವುದು. ಇದನ್ನು ಬಲರಾಮ ಕೂಡಾ ಅಧರ್ಮ ಎಂದು ವಿರೋಧಿಸುತ್ತಾನೆ. ಆಗ ಕೃಷ್ಣ ಕೊಟ್ಟ ಉತ್ತರ ಬಹಳ ರೋಚಕವಾದುದು. ಕೃಷ್ಣ ಹೇಳುತ್ತಾನೆ: "ಧರ್ಮ ಆಚರಣೆ ಶ್ರೇಯಸ್ಸನ್ನು ತರುತ್ತದೆ ನಿಜ. ಆದರೆ ಯಾವುದು ಧರ್ಮ, ಯಾವುದು ಅಧರ್ಮ ಎಂದು ತೀರ್ಮಾನ ಮಾಡುವುದು ಕಷ್ಟ" ಎಂದು. ಕೃಷ್ಣ ದುರ್ಯೋಧನನನ್ನು ಉದ್ದೇಶಿಸಿ ಹೇಳುತ್ತಾನೆ: "ನಿನ್ನ ತೊಡೆ ಮುರಿದದ್ದು ಅಧರ್ಮ ಎಂದಿಯಲ್ಲ, ಆ ತೊಡೆ ಎಂತಹ ತೊಡೆ? ತುಂಬಿದ ಸಭೆಗೆ ಒಬ್ಬ ಸ್ತ್ರೀಯನ್ನು ಅರೆನಗ್ನಾವಸ್ಥೆಯಲ್ಲಿ ಎಳೆದು ತಂದು, ತೊಡೆತಟ್ಟಿ, 'ನನ್ನ ತೊಡೆಯಮೇಲೆ ಬಂದು ಕೂಡು' ಎಂದು ಹೇಳಿದೆಯಲ್ಲ; ಪರಸ್ತ್ರೀಗೆ ತಟ್ಟಿದ ತೊಡೆಗೆ ಇದು ಕನಿಷ್ಠ ಶಿಕ್ಷೆ. ಇಷ್ಟು ಮಾಡದೇ ಹೋದರೆ ಈ ದೇಶದಲ್ಲಿ ಧರ್ಮದ ಸ್ಥಿತಿ ಏನಾದೀತು" ಎಂದು ಕೇಳುತ್ತಾನೆ ಕೃಷ್ಣ. ಈ ರೀತಿ ಮೇಲ್ನೋಟಕ್ಕೆ ಎಲ್ಲವೂ ವ್ಯತಿರಿಕ್ತವಾಗಿ ಕಂಡರೂ ಕೂಡಾ, ಅದಕ್ಕಿಂತ ಬೇರೆ ಆಯಾಮದಲ್ಲಿ, ಸತ್ಯ-ಧರ್ಮವನ್ನು ನಮ್ಮ ಮುಂದೆ ತೆರೆದು ತೋರಿಸಿದ ಭಗವಂತನ ಅಪೂರ್ವ ಅವತಾರ ಕೃಷ್ಣಾವತಾರ. ಈ ಸತ್ಯ ತಿಳಿದಾಗ ಮಾತ್ರ ನಮಗೆ ಕೃಷ್ಣಾವತಾರ ಅರ್ಥವಾಗುತ್ತದೆ. ಬನ್ನಿ, ಇಂತಹ ಸತ್ಯ ಸ್ವರೂಪನಾದ ಕೃಷ್ಣನನ್ನು ಧ್ಯಾನ ಮಾಡುತ್ತಾ ಭಾಗವತವನ್ನು ಪ್ರವೇಶಿಸೋಣ.

## ಶ್ರೀಮದ್ಭಾಗವತ ಮಹಾಪುರಾಣದ ಕರ್ತೃ, ಅಧಿಕಾರಿ, ವಿಷಯ ಮತ್ತು ಫಲ

ಮಂಗಲಾಚರಣೆ ಮುಗಿದಮೇಲೆ ಗ್ರಂಥ ಮಾಹಿತಿ ಕೊಡುವ ಶ್ಲೋಕ ಎರಡನೇ ಶ್ಲೋಕ. ಇಲ್ಲಿ ಇಪ್ಪತ್ನಾಲ್ಕು ಪದಗಳಿದ್ದು ಒಟ್ಟು ಎಪ್ಪತ್ತಾರು ಅಕ್ಷರಗಳಿವೆ. ಇದು ಗಾಯತ್ರಿ ಸಮಾನವಾಗಿರುವ ಪದ್ಯ. ಇಲ್ಲಿರುವ ಇಪ್ಪತ್ನಾಲ್ಕು ಪದಗಳು ಗಾಯತ್ರಿ ಪ್ರ+ತಿಪಾದ್ಯನಾದ ಭಗವಂತನ ಚತುರ್ವಿಂಶತಿ [ಇಪ್ಪತ್ನಾಲ್ಕು] ರೂಪಗಳನ್ನು ಹೇಳತಕ್ಕಂತಹ ಶಬ್ದಗಳು. [ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂಧನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ, ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ ಮತ್ತು ಕೃಷ್ಣ ಇವು ಭಗವಂತನ ಚತುರ್ವಿಂಶತಿ ರೂಪಗಳು] ಯಾವುದೇ ಒಂದು ಗ್ರಂಥವನ್ನು ಓದುವ ಮೊದಲು ನಮಗೆ ನಾಲ್ಕು ವಿಷಯಗಳು ತಿಳಿದಿರಬೇಕು. ೧. ಗ್ರಂಥದ ವಿಷಯ. ೨. ಗ್ರಂಥ ಓದುವುದರ ಪ್ರಯೋಜನ/ಫಲ. ೩. ಯಾರು ಓದಲು ಅರ್ಹರು(ಅಧಿಕಾರಿ) ೪. ಬರೆದ ವ್ಯಕ್ತಿ. ಶಾಸ್ತ್ರಕಾರರು ಹೇಳುವಂತೆ:

> ಅಧಿಕಾರಂ ಫಲಂ ಚೈವ ಪ್ರತಿಪಾದ್ಯಂ ಚ ವಸ್ತು ಯತ್ ।
> ಸ್ಮೃತ್ವಾ ಪ್ರಾರಭತೋ ಗ್ರಂಥಂ ಕರೋತೀಶೋ ಮಹತ್ಫಲಮ್ ॥

ಅಂದರೆ: ಅಧಿಕಾರಿ, ವಿಷಯ ಮತ್ತು ಪ್ರಯೋಜನ ತಿಳಿದು ಒಂದು ಗ್ರಂಥ ಅಧ್ಯಯನ ಮಾಡಿದರೆ ಅದರಿಂದ ವಿಶೇಷ ಫಲ ಪ್ರಾಪ್ತಿಯಾಗುತ್ತದೆ. ಹಿನ್ನಲೆ ತಿಳಿದುಕೊಂಡು ಅಧ್ಯಯನ ಮಾಡುವುದರಿಂದ ಭಗವಂತನ ವಿಶೇಷ

ಅನುಗ್ರಹವಾಗುತ್ತದೆ. ಇಲ್ಲಿ ಗ್ರಂಥದ ಅಧಿಕಾರಿಯಾದ ವೇದವ್ಯಾಸರು, ಗ್ರಂಥದಲ್ಲಿ ಬರುವ ವಿಷಯ ಮತ್ತು ಶ್ರೀಮದ್ಭಾಗವತ ಓದುವುದರ ಮಹತ್ವವೇನು ಎನ್ನುವುದನ್ನು ವಿವರಿಸಿದ್ದಾರೆ.

ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ ನಿರ್ಮತ್ಸರಾಣಾಂ ಸತಾಮ್
ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಮ್ ।
ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾಽಪರೈರೀಶ್ವರಃ
ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ ಶುಶ್ರೂಷುಭಿಸ್ತತ್ ಕ್ಷಣಾತ್ ॥೨॥

ಗ್ರಂಥದಲ್ಲಿನ ವಿಷಯದ ಕುರಿತು ವಿವರಿಸುತ್ತಾ ವ್ಯಾಸರು ಹೇಳುತ್ತಾರೆ: **"ಅತ್ರ ಧರ್ಮಃ ಪ್ರೋಜ್ಝಿತಕೈತವಃ ಪರಮಃ"** ಎಂದು. ಇಲ್ಲಿ 'ನಿಜವಾದ ಧರ್ಮ ಯಾವುದು ಎನ್ನುವ ತಿಳುವಳಿಕೆ ಕೊಡುವ ಗ್ರಂಥ ಭಾಗವತ' ಎಂದಿದ್ದಾರೆ ವ್ಯಾಸರು. ಈ ರೀತಿ ಧರ್ಮದ ಕುರಿತು ಹೇಳುವಾಗ 'ಪ್ರೋಜ್ಝಿತಕೈತವಃ ಮತ್ತು ಪರಮಃ' ಎನ್ನುವ ಎರಡು ವಿಶೇಷಣಗಳನ್ನು ಬಳಸಿ ಹೇಳಿರುವುದನ್ನು ನಾವು ಗಮನಿಸಬೇಕು. ಇದು ಧರ್ಮದ ಎರಡು ಆಯಾಮವನ್ನು ಹೇಳುತ್ತದೆ. ಕಪಟವೇ ಇಲ್ಲದ ಪರಿಶುದ್ಧತತ್ತ್ವ ಭಗವಂತನೇ ಧರ್ಮ ಮತ್ತು ಆತನೆಡೆಗೆ ಹೋಗಲು ನಾವು ಪಾಲಿಸಬೇಕಾದ ನಡೆಯೂ ಧರ್ಮ. ಸಾಮಾನ್ಯವಾಗಿ ಪ್ರಪಂಚದಲ್ಲಿ ಜನರು ಎರಡು ಕಾರಣಗಳಿಗಾಗಿ ಧರ್ಮಾಚರಣೆ ಮಾಡುತ್ತಾರೆ. ಒಂದು ಭಯದಿಂದ ಹಾಗೂ ಇನ್ನೊಂದು ಫಲಾಪೇಕ್ಷೆಯಿಂದ. ಆದರೆ ಈ ಎರಡು ಕಾರಣಕ್ಕಾಗಿ ಪಾಲಿಸುವ ಧರ್ಮ ಎಂದೂ ಸ್ವಚ್ಛವಾದ ಧರ್ಮವಾಗುವುದಿಲ್ಲ. ಆದ್ದರಿಂದ ಭಾಗವತ ಹೇಳುವುದು ಯಾವುದೇ ಫಲಾಪೇಕ್ಷೆ-ಭಯ ಇಲ್ಲದ ಧರ್ಮದ ನಡೆಯನ್ನು(ಪ್ರೋಜ್ಝಿತಕೈತವಃ). ಇನ್ನು ಏಕೆ ಇಂತಹ ಧರ್ಮಾಚರಣೆ ಮಾಡಬೇಕು ಎನ್ನುವ ಪ್ರಶ್ನೆ. ಏಕೆಂದರೆ: **ಈಶ್ವರಾರ್ಪಣೇನ ಪರಮಃ** – ಫಲಾಪೇಕ್ಷೆ ಇಲ್ಲದೇ ಮಾಡುವ ಧರ್ಮ ಪರಮಮಾಂಗಲಿಕ. ಅದು ಭಗವಂತ ಪ್ರೀತನಾಗಲಿ ಎಂದು ಅರ್ಪಣಾಭಾವದಿಂದ ಮಾಡುವ ಕರ್ಮ. ಅಂತಹ ಶ್ರೇಷ್ಠವಾದ ನಿಷ್ಕಪಟ ಧರ್ಮವನ್ನೇ ಭಾಗವತ ಹೇಳುತ್ತದೆ. ಒಟ್ಟಿನಲ್ಲಿ ಹೇಳಬೇಕೆಂದರೆ ಭಾಗವತ ಕಪಟವಿಲ್ಲದ, ಫಲದ ಆಸೆ ಇಲ್ಲದ, ಕೇವಲ ಭಗವಂತನ ಪ್ರೀತಿಗಾಗಿ ಬದುಕನ್ನು ಮೀಸಲಿಡಲು ಮಾಡಬೇಕಾದ ಧರ್ಮವನ್ನು ಹೇಳುವ ಗ್ರಂಥ. ಇದು ಧರ್ಮದಿಂದ ವೇದ್ಯನಾದ, ಧರ್ಮದ ಮೂಲಕ ಪಡೆಯಬೇಕಾದ ಭಗವಂತನನ್ನು ಹೇಳುವ ಗ್ರಂಥ. ಈ ಗ್ರಂಥದಲ್ಲಿ ಮನಸ್ಸನ್ನಿಟ್ಟರೆ ಪಡೆಯಲಾಗದ್ದು ಯಾವುದೂ ಇಲ್ಲ.

ಭಾಗವತ ಓದಲು ಅಧಿಕಾರಿಗಳು ಯಾರು ಎನ್ನುವುದನ್ನು ವಿವರಿಸುತ್ತಾ ವ್ಯಾಸರು ಹೇಳುತ್ತಾರೆ: **"ನಿರ್ಮತ್ಸರಾಣಾಂ ಸತಾಮ್"** ಎಂದು. "ಮತ್ಸರವಿಲ್ಲದ ಸಜ್ಜನರಿಗಾಗಿ ಈ ಭಾಗವತ ನಿರ್ಮಾಣ ಮಾಡಿದೆ" ಎಂದಿದ್ದಾರೆ ವೇದವ್ಯಾಸರು. ಈ ಮಾತು ಅರ್ಥವಾಗಬೇಕಾದರೆ ನಮಗೆ 'ಸಜ್ಜನ' ಅನ್ನುವ ಪದದ ಅರ್ಥ ತಿಳಿದಿರಬೇಕು. ಇದನ್ನು ವ್ಯಾಸರೇ ಹಿಂದೆ ತಮ್ಮ ಕಪಿಲಾವತಾರದಲ್ಲಿ ತನ್ನ ತಾಯಿ ದೇವಹೂತಿಗೆ ವಿವರಿಸಿರುವುದನ್ನು ಕಾಣುತ್ತೇವೆ. ಇದನ್ನು ಭಾಗವತದಲ್ಲೇ ಮುಂದೆ ಮೂರನೇ ಸ್ಕಂಧದಲ್ಲಿ ವಿವರಿಸಲಾಗಿದೆ. ಅಲ್ಲಿ ಹೇಳುವ 'ಸಜ್ಜನ' ಪದದ ಸಂಕ್ಷಿಪ್ತ ಅರ್ಥವಿವರಣೆ ಹೀಗಿದೆ:

**ತಿತಿಕ್ಷವಃ ಕಾರುಣಿಕಾಃ ಸುಹೃದಾಃ ಸರ್ವದೇಹಿನಾಮ್ ।**
**ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ॥೦೩-೨೮-೨೧॥**

ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವಂತಿ ಯೇ ದೃಢಾಮ್।
ಮತ್ಕೃತೇ ತ್ಯಕ್ತಕರ್ಮಾಣಸ್ತ್ಯಕ್ತಸ್ವಜನಬಾಂಧವಾಃ ॥೦೩-೨೬-೨೨॥

ಮದಾಶ್ರಯಾಃ ಕಥಾ ಹೃಷ್ಟಾಃ ಶೃಣ್ವಂತಿ ಕಥಯಂತಿ ಚ ।
ತಪಂತಿ ವಿವಿಧಾಂಸ್ತಾಪಾ ನೈಕಾತ್ಮ್ಯಗತಚೇತಸಃ ॥೦೩-೨೬-೨೩॥

ತ ಏತೇ ಸಾಧವಃ ಸಾಧ್ವಿ ಸರ್ವಸಂಗವಿವರ್ಜಿತಾಃ ।
ಸಂಗಸ್ತೇಷ್ವಥ ತೇ ಪ್ರಾರ್ಥ್ಯಃ ಸಂಗದೋಷಹರಾ ಹಿ ತೇ ॥೦೩-೨೬-೨೧॥

ಜೀವನದಲ್ಲಿ ಎಂತಹ ಕಷ್ಟ ಕಾರ್ಪಣ್ಯ ಬಂದರೂ ಕೂಡಾ, ಮರುಗದೆ, ಸಹನೆಯಿಂದಿದ್ದು, ಆತ್ಮವಿಶ್ವಾಸದಿಂದ ಬದುಕಿನ ದುರ್ಭರತೆಯನ್ನು ಎದುರಿಸುವ ತಾಕತ್ತಿರುವುದು ಸಜ್ಜನಿಕೆಯ ಒಂದು ಮುಖ. ಯಾರಾದರೂ ಏನಾದರೂ ಅಪಮಾನ-ತಿರಸ್ಕಾರ ಮಾಡಿದರೆ, ರೇಗಾಡದೆ, ತಾಳ್ಮೆಗೆಡದೆ, ಸಹನೆಯಿಂದ ಇರಬಲ್ಲವ ಸಜ್ಜನ. ಕಷ್ಟ-ಕಾರ್ಪಣ್ಯ-ದುಃಖವನ್ನು ಕಂಡು ಕರಗುವ ಕಾರುಣ್ಯಮೂರ್ತಿ, ಕೇವಲ ತನ್ನವರನ್ನಷ್ಟೇ ಅಲ್ಲ, ಪ್ರಾಣಿ-ಪಕ್ಷಿಗಳಿಂದ ಹಿಡಿದು ಎಲ್ಲಾ ಜೀವಮಾತ್ರರನ್ನು ಪ್ರೀತಿಸಬಲ್ಲ ಅಜಾತಶತ್ರು-ಸಜ್ಜನ. [ಅಜಾತಶತ್ರು=ಯಾರೇ ತನ್ನನ್ನು ದ್ವೇಷಿಸಲಿ, ಆದರೆ ತಾನು ಮಾತ್ರ ಯಾರನ್ನೂ ದ್ವೇಷಿಸದೇ ಇರುವುದು. ಉದಾಹರಣೆಗೆ ಧರ್ಮರಾಯ]. ತಟ್ಟನೆ ಉದ್ವೇಗಕ್ಕೊಳಗಾಗದೆ, ಕಾಮ-ಕ್ರೋಧಕ್ಕೊಳಗಾಗದೆ, ಬದುಕಿನಲ್ಲಿ ಸ್ಥಿರವಾಗಿ ನಿಲ್ಲಬಲ್ಲವ-ಸಜ್ಜನ. ಇದು ಸಾಮಾಜಿಕವಾಗಿ ಇರಬೇಕಾದ ಸಜ್ಜನಿಕೆಯ ವಿವರಣೆ. ಆದರೆ ಈ ಎಲ್ಲಾ ಗುಣಧರ್ಮಗಳು ಸಾರ್ಥಕವಾಗುವುದು ಭಗವಂತನ ಮೇಲೆ ನಂಬಿಕೆ ಇದ್ದಾಗ ಮಾತ್ರ. ಭಗವಂತನನ್ನು ನಿರಾಕರಣೆ ಮಾಡುವವರು ಸಜ್ಜನರಲ್ಲ. ಅನನ್ಯಭಾವದಿಂದ, ಗೌರವ ದೃಷ್ಟಿಯಿಂದ ಭಗವಂತನನ್ನು ಪ್ರೀತಿಸುವುದು; ತನ್ನ ಬದುಕನ್ನು ಭಗವಂತನ ಅರಿವಿಗೋಸ್ಕರ, ಭಗವಂತನ ಸಾಕ್ಷಾತ್ಕಾರಕ್ಕೋಸ್ಕರ ಮೀಸಲಿಡುವುದು; ಸಮಸ್ತ ಕ್ರಿಯೆಯನ್ನು ಭಗವದರ್ಪಣಾ ಭಾವದಿಂದ ಮಾಡುವುದು ಸಜ್ಜನಿಕೆಯ ಮೂಲಮಂತ್ರ. ಸದಾ ಭಗವದ್ ವಿಷಯಿಕವಾದ ಕಥೆಗಳನ್ನು ಕೇಳುವುದು ಮತ್ತು ಹೇಳುವುದು, ಯಾವುದೇ ಲೇಪವಿಲ್ಲದೆ ನಿರ್ಲಿಪ್ತ ಬದುಕು ಬಾಳುವುದು ಸಜ್ಜನಿಕೆ. ಇಂತಹ ಸಜ್ಜನರಿಗೆ ಭಗವಂತನನ್ನು ತಿಳಿಸುವ, ಹಾಗೂ ಭಗವಂತನನ್ನು ಸೇರುವ ಮಾರ್ಗವನ್ನು ತಿಳಿಸತಕ್ಕ ಗ್ರಂಥ ಈ ಭಾಗವತ.

ಮೇಲಿನ ಶ್ಲೋಕದಲ್ಲಿ ಮತ್ಸರವಿಲ್ಲದ ಸಜ್ಜನ ಎಂದು ಹೇಳಲಾಗಿದೆ. ಸಂಸ್ಕೃತದಲ್ಲಿ ಮತ್ಸರ ಎಂದರೆ ಹೊಟ್ಟೆಕಿಚ್ಚು ಎಂದರ್ಥವಲ್ಲ. [ಅಸೂಯೆ ಎಂದರೆ ಹೊಟ್ಟೆಕಿಚ್ಚು]. ಇಲ್ಲಿ ಮತ್ಸರ ಎಂದರೆ ಜಿದ್ದು, ಸ್ಪರ್ಧೆ. ಸಮಾನಸ್ಕಂದರೊಂದಿಗೆ ಅಥವಾ ತಮ್ಮಿಂದ ಕೆಳಗಿನವರೊಂದಿಗೆ ಸ್ಪರ್ಧೆ ಇರುತ್ತದೆ. ಅದು ತಪ್ಪಲ್ಲ. ಆದರೆ ತಮ್ಮಿಂದ ಜ್ಞಾನದಲ್ಲಿ ದೊಡ್ಡವರಾಗಿರುವವರ ಜೊತೆಗೆ ಮತ್ಸರ ಸಲ್ಲದು.

**“ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಮ್”**. ಅಂದರೆ: ಎಲ್ಲವುದರ ಒಳಗೂ-ಹೊರಗೂ ತುಂಬಿರುವ, ಎಲ್ಲವುದರ ಒಳಗಿದ್ದು, ಅದನ್ನು ಇತರ ವಸ್ತುವಿಗಿಂತ ಭಿನ್ನರೂಪದಲ್ಲಿ, ಅದರದರ ಯೋಗ್ಯತೆಗನುಗುಣವಾಗಿ ಪ್ರೇರೇಪಿಸುತ್ತಿರುವ, ಮೋಕ್ಷಪ್ರದ ಭಗವಂತ ಭಾಗವತದಲ್ಲಿ ಪ್ರತಿಪಾದ್ಯನಾಗಿದ್ದಾನೆ ಎಂದರ್ಥ. ಇಲ್ಲಿ ‘ವಾಸ್ತವ ವಸ್ತು’ ಎನ್ನುವ ಪದ ಬಳಕೆಯಾಗಿದೆ. ವಸ್ತು ಅನ್ನುವ ಪದಕ್ಕೆ ಸಂಬಂಧಿಸಿದಂತೆ ಸಂಸ್ಕೃತದಲ್ಲಿ ಅನೇಕ ಧಾತುಗಳಿವೆ. ೧. ವಸ-ನಿವಾಸೇ; ೨. ವಸ-ಆಚ್ಛಾದನೆ; ೩. ವಸ-ಭೇದನೆ; ೪. ವಸು-ಸ್ಥಿತೌ; ೫. ವಸ್ತ-ಪ್ರೇರಣೆ; ಇತ್ಯಾದಿ. ಎಲ್ಲರ ಒಳಗೆ ನಿವಾಸ ಮಾಡುವ ಭಗವಂತ ವಸ್ತು; ಎಲ್ಲರ ಹೊರಗೂ ತುಂಬಿರುವ ಸರ್ವಗತ

ಭಗವಂತ ವಸ್ತು; ಪ್ರತಿಯೊಂದರ ಒಳಗೂ ಭಿನ್ನ ರೂಪನಾಗಿ ನೆಲೆಸಿರುವ ಭಗವಂತ ವಸ್ತು; ಪ್ರತಿಯೊಂದರ ಸ್ಥಿತಿಗೆ ಕಾರಣನಾಗಿರುವ ಭಗವಂತ ವಸ್ತು; ಪ್ರತಿಯೊಬ್ಬರ ಒಳಗೂ ಹೊರಗೂ ತುಂಬಿ ಪ್ರೇರೇಪಿಸುವ ಭಗವಂತ ವಸ್ತು. ಆಚಾರ್ಯ ಮಧ್ವರು ತಮ್ಮ ನಿರ್ವಚನದಲ್ಲಿ ಹೀಗೆ ಹೇಳುತ್ತಾರೆ: "**ವಸ್ತು ಅಪ್ರತಿಹತಂ ನಿತ್ಯಂ ಚ । ಸ್ಕಾಂದೇ ಚ ವಸನಾದ್ ವಾಸನಾದ್ ವಸ್ತು ನಿತ್ಯಾಪ್ರತಿಹತಂ ಯತಃ ।**" ಎಂದು. ಇಲ್ಲಿ ವಸ(ನಿವಾಸೇ) ಮತ್ತು ತುದ ಧಾತುವನ್ನು ಹೇಳುತ್ತಾರೆ. ಸಾಮಾನ್ಯವಾಗಿ 'ತುದ' ಎಂದರೆ ದುಃಖೀ ಎನ್ನುವ ಅರ್ಥವಿದೆ. ಆದರೆ ಇಲ್ಲಿ 'ತುದ' ಧಾತು ಭೇದನೆ/ಪ್ರೇರಣೆ ಎನ್ನುವ ಅರ್ಥದಲ್ಲಿ ಬಳಕೆಯಾಗಿದೆ. ತಾನು ಅಂತರ್ಯಾಮಿಯಾಗಿ ಒಳಗಿದ್ದು, ಅದರಿಂದಾಗಿ ಒಂದು ವಸ್ತುವನ್ನು ಬೇರೆ ವಸ್ತುವಿಗಿಂತ ಭಿನ್ನವಾಗಿರಿಸಿ, ಪ್ರೇರೇಪಿಸುವ ಭಗವಂತ 'ವಸ್ತು' ಎನ್ನುವುದು ಇಲ್ಲಿನ ನಿರ್ವಚನ ಅರ್ಥ. ಇದಲ್ಲದೆ ರೂಡಾರ್ಥದಲ್ಲಿ "ಅಪ್ರತಿಹತಂ ನಿತ್ಯಂ ವಸ್ತು" ಎನ್ನುತ್ತಾರೆ. ಅಂದರೆ ಎಲ್ಲೆಡೆ, ಎಲ್ಲಾ ಕಾಲದಲ್ಲಿ ತುಂಬಿರುವ ನಿತ್ಯ ತತ್ತ್ವ ಭಗವಂತ 'ವಸ್ತು'. ಅಂತಹ ಭಗವಂತನ ಗತಿಗೆ ತಡೆ ಇಲ್ಲ.

ವೇದವ್ಯಾಸರು ಇಲ್ಲಿ ಭಗವಂತನನ್ನು ಕೇವಲ 'ವಸ್ತು' ಎಂದು ಹೇಳದೇ, 'ವಾಸ್ತವ ವಸ್ತು' ಎಂದಿದ್ದಾರೆ. ವಾಸ್ತವ ಎಂದರೆ: **ನಿತ್ಯ ನಿರಸ್ತದೋಷ ಪೂರ್ಣಗುಣಂ ವಾಸ್ತವಮ್**- ಯಾವುದು ಸರ್ವಗತವಾಗಿ ಸರ್ವಕಾಲದಲ್ಲಿ ಸರ್ವವನ್ನೂ ನಿಯಂತ್ರಣ ಮಾಡುತ್ತದೋ, ಅದು ದೋಷರಹಿತಗುಣಪೂರ್ಣವಾದ-ವಾಸ್ತವ. ಹೇಗೆ ಬ್ರಹ್ಮಸೂತ್ರದ ಮೊದಲ ನಾಲ್ಕು ಅಧ್ಯಾಯಗಳಲ್ಲಿ "ಭಗವಂತ ಗುಣಪೂರ್ಣ, ದೋಷದೂರ, ಸರ್ವಶಾಸ್ತ್ರಗಳಿಂದ ಜ್ಞೇಯನಾದವ" ಎಂದು ಹೇಳಿದ್ದಾರೋ, ಅದನ್ನೇ ಇಲ್ಲಿ "ವೇದ್ಯಂ ವಾಸ್ತವಮತ್ರ ವಸ್ತು" ಎಂದು ಹೇಳಲಾಗಿದೆ.

"ಶಿವದಂ ತಾಪತ್ರಯೋನ್ಮೂಲನಮ್" ಎನ್ನುವಲ್ಲಿ 'ಶಿವ' ಎಂದರೆ ಪರಮಮಾಂಗಲಿಕ ಸ್ಥಿತಿ. ಅವರವರ ಯೋಗ್ಯತೆಗನುಗುಣವಾದ ಪೂರ್ಣವಾದ ಜ್ಞಾನದ ಅಭಿವ್ಯಕ್ತಿಯೇ 'ಶಿವ'. ಅಂದರೆ ಮೋಕ್ಷಸ್ಥಿತಿ.

'ತಾಪತ್ರಯ' ಎಂದರೆ ಮೂರು ವಿಧದ ತಾಪಗಳು. ೧. ಆಧ್ಯಾತ್ಮಿಕ: ಅಂದರೆ ಮಾನಸಿಕವಾದ ದುಃಖ, ವ್ಯಥೆ, ವೇದನೆ ಇತ್ಯಾದಿ. ೨. ಆದಿದೈವಿಕ: ಪ್ರಕೃತಿಯಿಂದ ಬರುವ ತಾಪಗಳು. ಉದಾಹರಣೆಗೆ: ಅತಿವೃಷ್ಟಿ, ಸಿಡಿಲು ಇತ್ಯಾದಿ. ೩. ಆದಿಭೌತಿಕ: ಅಪಘಾತ, ದರೋಡೆ, ಇತ್ಯಾದಿ ಭೌತಿಕ ತಾಪ. ಇದಲ್ಲದೆ ೧. ಸಂಚಿತ, ೨. ಪ್ರಾರಾಬ್ಧ ಮತ್ತು ೩. ಆಗಾಮಿ ಪಾಪಗಳೂ ಕೂಡಾ ತಾಪತ್ರಯಗಳು. ಅದೇ ರೀತಿ ೧. ಸ್ವಕೃತ, ೨. ಮಿತ್ರಕೃತ ಮತ್ತು ೩. ಶತ್ರುಕೃತ ತಾಪಗಳೂ ತಾಪತ್ರಯಗಳು. ಈ ತಾಪತ್ರಯಗಳನ್ನು ಮೀರಿನಿಲ್ಲುವ ಏಕೈಕ ಸ್ಥಿತಿ ಮೋಕ್ಷಸ್ಥಿತಿ. ಭಾಗವತ ಮೋಕ್ಷಪ್ರದ ಭಗವಂತನನ್ನು ಪ್ರತಿಪಾದಿಸುವ ಅತ್ಯಮೂಲ್ಯ ಗ್ರಂಥ. ಒಟ್ಟಿನಲ್ಲಿ ಹೇಳಬೇಕೆಂದರೆ: ಎಲ್ಲಾ ದುಃಖಗಳನ್ನು ಪರಿಹರಿಸುವ, ಆನಂದ-ಜ್ಞಾನಗಳ ಪೂರ್ಣ ಸ್ಥಿತಿಯನ್ನು ಕೊಡುವ, ಎಲ್ಲಿಯೂ ತಡೆ ಇಲ್ಲದೆ, ಎಲ್ಲೆಡೆ ಸದಾಕಾಲ ತುಂಬಿರುವ, ಎಲ್ಲಾ ದೋಷಗಳಿಂದ ದೂರನಾದ ಭಗವಂತ-ಭಾಗವತದ ಪ್ರತಿಪಾದ್ಯ.

"**ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾऽಪರೈರೀಶ್ವರಃ**" ಇಲ್ಲಿ ಭಾಗವತವನ್ನು "ಶ್ರೀಮದ್ಭಾಗವತ" ಎಂದು ಕರೆದಿದ್ದಾರೆ. ಸಾಮಾನ್ಯವಾಗಿ ಗುರು-ಹಿರಿಯರನ್ನು, ದೇವತಾಸ್ಥಾನಗಳನ್ನು 'ಶ್ರೀ' ಸೇರಿಸಿ ಗೌರವಪೂರ್ವಕವಾಗಿ ಹೇಳಬೇಕು ಎನ್ನುವುದು ಸಂಪ್ರದಾಯ. ಆದರೆ ಇಲ್ಲಿ ಭಾಗವತ ಗ್ರಂಥವನ್ನು 'ಶ್ರೀಮದ್ಭಾಗವತ' ಎಂದು 'ಶ್ರೀ' ಸೇರಿಸಿ ಕರೆದಿದ್ದಾರೆ. ಇದಕ್ಕೆ ವಿಶೇಷ ಕಾರಣವಿದೆ. ವೇದವ್ಯಾಸರು ತಾನು ರಚಿಸಿದ ಮೊದಲ ಹದಿನೇಳು ಪುರಾಣಗಳ ಸಾರಸಂಗ್ರಹದ ಉಪಾಸನೆಯನ್ನು ಜನರಿಗೆ ಕೊಡಬೇಕು ಎನ್ನುವ ಉದ್ದೇಶದಿಂದ ಭಾಗವತವನ್ನು ರಚಿಸಿದರು. ಇದು ಭಗವಂತನ ವಿಶೇಷ ಜ್ಞಾನಕ್ಕೋಸ್ಕರ ತಾತ್ಪರ್ಯಪೂರ್ವಕವಾಗಿ ಅವರು ರಚಿಸಿಕೊಟ್ಟ ಗ್ರಂಥವಾದುದರಿಂದ ಇದನ್ನು "ಶ್ರೀಮದ್ಭಾಗವತ" ಎಂದು ಕರೆದಿದ್ದಾರೆ.

ಈ ಶ್ಲೋಕದಲ್ಲಿ ಭಾಗವತದ ಕರ್ತೃ: 'ಮಹಾಮುನಿ' ಎನ್ನಲಾಗಿದೆ. "ಮೌನಂ ಮನನಂ ಮನನಯುಕ್ತೋ ಮುನಿಃ ಅಪರೋಕ್ಷಜ್ಞಾನಮ್ ಅಮೌನಮ್" [ಇದು 'ಮುನಿ' ಎನ್ನುವ ಪದಕ್ಕೆ ಹೃಷೀಕೇಶತೀರ್ಥರು ಆಚಾರ್ಯರಿಂದ ಕೇಳಿ ಬರೆದಿಟ್ಟಿರುವ ಶಬ್ದಾರ್ಥ]. ಮನನ ಮಾಡುವವನು ಮುನಿ. ಇಡೀ ವಿಶ್ವವನ್ನು, ತನ್ನ ಅಖಂಡ ಸ್ವರೂಪವನ್ನು ಮನನಮಾಡಬಲ್ಲ, ಓಂಕಾರದ ಪೂರ್ಣರಹಸ್ಯ ಬಲ್ಲ, ಭಗವಂತನ ಅವತಾರವಾದ ವೇದವ್ಯಾಸರೇ ಭಾಗವತದ ಕರ್ತೃ. ಈ ರೀತಿ ಭಗವಂತನಿಂದ ನೇರವಾಗಿ ಬಂದಿರುವ ಈ ಮಹಾಪುರಾಣವನ್ನು ಕೇಳುವುದರಿಂದ, ಭಾಗವತ ಅಧ್ಯಯನ ಮಾಡುವುದರಿಂದ, ಸ್ವಯಂ ಭಗವಂತನೇ ನಿಮ್ಮ ಹೃದಯದಲ್ಲಿ ಬಂದು ನೆಲೆಸಿ, ನಿಮ್ಮ ಅರಿವಿಗೆ ಗೋಚರನಾಗುತ್ತಾನೆ. ಈ ಮಹಾಫಲದ ಮುಂದೆ ಇತರ ಫಲವನ್ನು ಹೇಳಿ ಏನು ಪ್ರಯೋಜನ ಎಂದು ಕೇಳುತ್ತಾರೆ ವ್ಯಾಸರು. ಇಲ್ಲಿ 'ಈಶ್ವರ' ಎನ್ನುವ ಪದ ಬಳಕೆಯಾಗಿದೆ. ಬ್ರಹ್ಮಾದಿ ಸಕಲ ದೇವತೆಗಳು-ಈಶರು. ಇಂತಹ ಈಶರಿಗೂ ಬಯಸಿದ ಫಲವನ್ನು(ವರ) ಕೊಡುವ ಭಗವಂತ ಈಶ್ವರ. ಭಾಗವತ ಇಂತಹ ಭಗವಂತನನ್ನು ನಮ್ಮ ಹೃದಯದಲ್ಲಿ ಸೆರೆಹಿಡಿಯತಕ್ಕಂತಹ ಪರಮಪವಿತ್ರ ಮಹಾಗ್ರಂಥ.

ಭಾಗವತ ಅಧ್ಯಯನ ಮಾಡುವವರ ಪ್ರಯತ್ನ ಹೇಗಿರಬೇಕು ಎನ್ನುವುದನ್ನು ವಿವರಿಸುತ್ತಾ ಹೇಳುತ್ತಾರೆ: **"ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ ಶುಶ್ರೂಷುಭಿಸ್ತತ್ ಕ್ಷಣಾತ್"** ಎಂದು. ನಾವು ಶಾಸ್ತ್ರದ ನಿರಂತರ ಶ್ರವಣ-ಮನನ ಮಾಡುವ ಪ್ರಯತ್ನಶೀಲರಾಗಿರಬೇಕು. ಜ್ಞಾನಕ್ಕೋಸ್ಕರ ನಿರಂತರ ಸಾಧನೆ ಮಾಡುತ್ತಾ, 'ಭಾಗವತ ಅಧ್ಯಯನ ಮಾಡಬೇಕು' ಎನ್ನುವ ಅದಮ್ಯ ಬಯಕೆಯನ್ನು ಬೆಳೆಸಿಕೊಂಡು, ಶ್ರದ್ಧಾ-ಭಕ್ತಿಯಿಂದ, ಹೃದಯದ ಬಾಗಲನ್ನು ತೆರೆದು, ಜ್ಞಾನ ಕೊಡುವವರ ಸೇವೆಯನ್ನು ಮಾಡುತ್ತಾ, ಭಾಗವತ ಅಧ್ಯಯನ ಮಾಡುವವರಾಗಿರಬೇಕು. ಅಂತವರಿಗೆ ತತ್-ಕ್ಷಣದಲ್ಲಿ ಮಹಾಫಲ ದೊರೆಯುತ್ತದೆ, ಇಲ್ಲವೇ ಸಾಧನೆಗನುಗುಣವಾಗಿ ಕಾಲಕ್ರಮದಲ್ಲಿ ಫಲಪ್ರಾಪ್ತಿಯಾಗುತ್ತದೆ.

ಹೀಗೆ ಎರಡನೇ ಶ್ಲೋಕ ಭಾಗವತವನ್ನು ವೇದವ್ಯಾಸರು ಏಕೆ ರಚಿಸಿದರು, ಇದರಲ್ಲಿರುವ ವಿಷಯವೇನು, ಇದರ ಅಧಿಕಾರಿ ಯಾರು ಮತ್ತು ಇದನ್ನು ಅಧ್ಯಯನ ಮಾಡುವುದರ ಫಲವೇನು ಎನ್ನುವುದನ್ನು ಸ್ಪಷ್ಟವಾಗಿ ನಮ್ಮ ಮುಂದೆ ತೆರೆದಿಟ್ಟಿದೆ. ಇಷ್ಟು ತಿಳಿಸಿದಮೇಲೆ ಸಂಬಂಧದ ಕುರಿತು ಇಲ್ಲಿ ವಿವರಿಸಿಲ್ಲ. ಅದನ್ನು ನಾವೇ ಅರ್ಥ ಮಾಡಿಕೊಳ್ಳಬೇಕು. ನಮಗೆ ತಿಳಿದಂತೆ: ವಿಷಯ-ಭಗವಂತ, ಅಧಿಕಾರಿ-ಸಾಧಕ. ಆದ್ದರಿಂದ ವಿಷಯ ಜ್ಞೇಯ(ತಿಳಿಯಬೇಕಾದ ವಿಷಯ) ಮತ್ತು ಅಧಿಕಾರಿ ಜ್ಞಾತೃ(ತಿಳಿದುಕೊಳ್ಳುವವನು). ಆದ್ದರಿಂದ ವಿಷಯಕ್ಕೂ ಅಧಿಕಾರಿಗೂ ಜ್ಞಾತೃ-ಜ್ಞೇಯ ಸಂಬಂಧ. ಅದೇ ರೀತಿ ಪ್ರಯೋಜನ-ಧ್ಯೇಯ(ಗುರಿ), ಭಗವಂತ-ದಾತೃ(ಕೊಡುವವನು) ಮತ್ತು ಅಧಿಕಾರಿಗಳು-ಪ್ರತಿಗ್ರಹಿತೃಗಳು(ಸ್ವೀಕರಿಸುವವರು). ಇದು ಇಲ್ಲಿರುವ ಸಂಬಂಧಗಳು. ಹೀಗೆ ಪ್ರತಿಪಾಧ್ಯ, ವಿಷಯ, ಅಧಿಕಾರ, ಫಲವನ್ನು ತಿಳಿದುಕೊಂಡಾಗ ನಮಗೆ **"ಕರೋತೀಶೋ ಮಹತ್ಫಲಮ್"**-ಭಗವಂತನ ವಿಶೇಷ ಅನುಗ್ರಹವಾಗುತ್ತದೆ. ಇದನ್ನು ತಿಳಿದು ಮುಂದೆ ಗ್ರಂಥಾಧ್ಯಯನ ಮಾಡಿದರೆ ವಿಶೇಷ ಅನುಗ್ರಹದಿಂದ ವಿಶೇಷ ಅನುಸಂಧಾನ ಸಾಧ್ಯ.

## ಭಾಗವತದ ಪ್ರಶಂಸೆ ಮತ್ತು ವಿಧಿ

ಮುಂದಿನ ಶ್ಲೋಕ ಗ್ರಂಥದ ಮಹತ್ವವನ್ನು ಹೇಳುವ ಶ್ಲೋಕ. ಇಲ್ಲಿ ಭಾಗವತವನ್ನು ಹಿಂದಿನವರು ಆಚರಿಸಿದ ವಿಧಾನವನ್ನು ಹೇಳಿ, ಅವರು ಪಡೆದ ಮಹಾಫಲವನ್ನು ಹೇಳಿ, ಅದರ ಪ್ರಶಂಸೆಯ ಮೂಲಕ "ನೀವೂ ಕೂಡಾ ಅಂತಹ ಮಹಾಫಲವನ್ನು ಪಡೆಯಿರಿ" ಎಂದು ಒತ್ತುಕೊಟ್ಟು ಹೇಳುವ ಶ್ಲೋಕ.

ನಿಗಮಕಲ್ಪತರೋರ್ಗಳಿತಂ ಫಲಂ ಶುಕಮುಖಾದಮೃತದ್ರವಸಂಯುತಮ್ ।
ಪಿಬತ ಭಾಗವತಂ ರಸಮಾಲಯಂ ಮುಹುರಹೋ ರಸಿಕಾ ಭುವಿ ಭಾವುಕಾಃ ॥೩॥

ಭಾಗವತ ವೇದವೆಂಬ ಕಲ್ಪವೃಕ್ಷದಲ್ಲಿ ಅರಳಿದ ರಸಪೂರಿತವಾದ ಹಣ್ಣು. ಬ್ರಹ್ಮಾಂಡಪುರಾಣದಲ್ಲಿ ಹೇಳಿರುವಂತೆ: **ಧರ್ಮ ಪುಷ್ಪಸ್ತ್ವರ್ಥಪತ್ರಃ ಕಾಮಪಲ್ಲವ ಸಂಯುತಃ । ಮಹಾಮೋಕ್ಷ ಫಲೋ ವೃಕ್ಷೋ ವೇದೋಽಯಂ ಸಮುದೀರಿತಃ.** ವೇದವೆಂಬ ಕಲ್ಪವೃಕ್ಷವು ಧರ್ಮವೆಂಬ ಪುಷ್ಪ, ಅರ್ಥವೆಂಬ ಎಲೆ ಮತ್ತು ಕಾಮ ಎನ್ನುವ ಚಿಗುರೆಲೆಯಿಂದ ಯುಕ್ತವಾಗಿದೆ. ಆ ವೃಕ್ಷದಲ್ಲಿ ಮಹಾಫಲವಾದ ಮೋಕ್ಷವನ್ನು ಕೊಡುವ ಹಣ್ಣುಗಳೂ ತುಂಬಿವೆ. ಇಂತಹ ಅಮೂಲ್ಯವಾದ ಹಣ್ಣುಗಳನ್ನು ಮರಹತ್ತಿ ಪಡೆಯಲು ಯೋಗ್ಯರಾದವರಿಗಾಗಿ ವೇದವ್ಯಾಸರು ವೇದವಿಭಾಗ ಮಾಡಿ ಕೊಟ್ಟರೆ, ಮರ ಹತ್ತಲು ಸಾಧ್ಯವಾಗದೇ ಇದ್ದವರಿಗಾಗಿ ಭಾಗವತ ಮತ್ತು ಮಹಾಭಾರತ ಎನ್ನುವ ಎರಡು ರಸಪೂರಿತ ಹಣ್ಣನ್ನು ಕಳಚಿ ಕೊಟ್ಟಿದ್ದಾರೆ.

ಯಾವಾಗಲೂ ಮರದಲ್ಲಿ ಅತ್ಯಂತ ರಸಪೂರಿತ ಮತ್ತು ಸಿಹಿಯಾಗಿರುವ ಹಣ್ಣನ್ನು ಗಿಣಿ ಮೊದಲು ಕುಕ್ಕಿ ತಿನ್ನುತ್ತದೆ. ಭಾಗವತವೆಂಬ ರಸಪೂರಿತ ಸಿಹಿ ಹಣ್ಣು ಶುಕಮುನಿಯೆಂಬ ಗಿಣಿ ಮುಟ್ಟಿದ, ವೇದವೆಂಬ ಕಲ್ಪವೃಕ್ಷದಲ್ಲಿ ಗಳಿತ, ಅತ್ಯಂತ ರಸಪೂರಿತ ಹಣ್ಣು. ವೇದವ್ಯಾಸರು ತಮ್ಮ ಹದಿನೇಳು ಪುರಾಣಗಳನ್ನು ರೋಮಹರ್ಷಣನಿಗೆ ಉಪದೇಶ ಮಾಡಿದರೆ, ಹದಿನೆಂಟನೇ ಪುರಾಣ ಭಾಗವತವನ್ನು ತನ್ನ ಮಗನಾದ ಶುಕಮುನಿಗೆ ಉಪದೇಶ ಮಾಡಿದರು. ಶುಕಮುನಿಯಂತಹ ಅಪರೋಕ್ಷ ಜ್ಞಾನಿಗಳು ಸವಿದ ಈ ಹಣ್ಣು ಅಮೃತದ್ರವ.

ಭಾಗವತ ಎನ್ನುವ ಗ್ರಂಥದಲ್ಲಿ ಭಗವದ್ಭಕ್ತಿ ಎನ್ನುವ ರಸವನ್ನು ಕುಡಿಯಿರಿ ಎನ್ನುತ್ತಾರೆ ವ್ಯಾಸರು. ನಾವು ಭಾಗವತ ಗ್ರಂಥದಲ್ಲಿ ಪ್ರತಿಪಾದ್ಯನಾದ ಭಗವಂತನ ಗುಣಗಳ ಆಸ್ವಾದರೂಪವಾದ ರಸವನ್ನು ನಿರಂತರ ಕುಡಿಯುತ್ತಿರಬೇಕು. ಕೆಲವರು ಎಷ್ಟು ದಿನ ಭಾಗವತ ಕೇಳಬೇಕು ಎನ್ನುವ ಪ್ರಶ್ನೆಯನ್ನು ಕೇಳುತ್ತಾರೆ. ಪರೀಕ್ಷಿತ ರಾಜ ಏಳು ದಿನ ಕೇಳಿರುವುದರಿಂದ ನಾವೂ ಕೂಡಾ ಏಳು ದಿನ ಕೇಳಬೇಕು ಎನ್ನುವವರಿದ್ದಾರೆ. ಆದರೆ ಭಾಗವತವನ್ನು ನಾವು ನಮ್ಮ ದೇಹದಲ್ಲಿ ಉಸಿರಿರುವಷ್ಟು ಕಾಲ ಕೇಳಬೇಕು.[ಪರೀಕ್ಷಿತ ಕೂಡಾ ತನ್ನ ಸಾವಿನ ತನಕ ಭಾಗವತ ಶ್ರವಣ ಮಾಡಿದ. ಆದರೆ ಆಗ ಅವನಲ್ಲಿದ್ದದ್ದು ಕೇವಲ ಏಳೇ ದಿನವಾದ್ದರಿಂದ ಆತ ಏಳು ದಿನ ಶ್ರವಣ ಮಾಡಿದ ಅಷ್ಟೇ]. ಸಂಸಾರ ಲಯವಾಗಿ ಮೋಕ್ಷಪ್ರಾಪ್ತಿಯಾಗುವ ತನಕವೂ(ಆ-ಲಯಂ) ನಾವು ಭಾಗವತವನ್ನು ನಿರಂತರ ಕೇಳಬೇಕು. ಒಮ್ಮೆ ಕೇಳಿದರೆ ಸಾಲದು, ಮತ್ತೆಮತ್ತೆ (ಮುಹುಃ)ಕೇಳಬೇಕು. ಆನಂದ-ಆಶ್ಚರ್ಯಪಟ್ಟು ಈ ರಸಪಾನಮಾಡಬೇಕು. ಇದು ಅತಿಯಾಗಿ ಅಜೀರ್ಣವಾಗುವ ರಸವಲ್ಲ. ಇದರ ಅರ್ಥವ್ಯಾಪ್ತಿ ಅಪರಂಪಾರ. ಇದರಲ್ಲಿ ಭಗವಂತನನ್ನು ಕಂಡು-ಕೇಳಿ-ತಿಳಿದು ಅಚ್ಚರಿಪಡಿ(ಅಹೋ) ಎಂದಿದ್ದಾರೆ ವ್ಯಾಸರು.

ಭಾಗವತ ಶ್ರವಣ ಮಾಡುವವನು ಭಕ್ತಿರಸಗ್ರಹಣಶಕ್ತಿಯುಳ್ಳ ರಸಿಕನಾಗಿರಬೇಕು. ಭಗವಂತನ ಬಗೆಗೆ ಅನನ್ಯಭಕ್ತಿ ಬೆಳೆಸಿಕೊಂಡು ಪ್ರೀತಿಯಿಂದ ಅಧ್ಯಯನ ಮಾಡಬೇಕು. ನಿರಂತರ ಭಕ್ತಿರಸ ಬೆಳೆಸಿಕೊಳ್ಳಲು ನಮ್ಮಲ್ಲಿ "ನಾನು ಜ್ಞಾನ ಗ್ರಹಣಮಾಡಿ ಎತ್ತರಕ್ಕೇರಬೇಕು" ಎನ್ನುವ ಬಯಕೆ(ಭಾವುಕಾಃ) ಇರಬೇಕು. ಹೀಗೆ "ಈ ಸಂಸಾರದಿಂದ ಲಯಹೊಂದಿ ಮೋಕ್ಷಗಳಿಸುವ ತನಕವೂ ಭಾಗವತದ ರಸಪಾನ ಮಾಡಿ" ಎಂದಿದ್ದಾರೆ ಆಚಾರ್ಯ ಮಧ್ವರು.

## ಆಖ್ಯಾಯಿಕಾ- ಭಾಗವತ ಗ್ರಂಥ ಭೂಮಿಗಿಳಿದು ಬಂದ ಹಿನ್ನೆಲೆ

ಗ್ರಂಥ ರಚನೆಯ ಹಿನ್ನೆಲೆ, ರಚನೆಯಾಗಿ ಅದು ಭೂಮಿಗೆ ಇಳಿದು ಬಂದ ಬಗೆಯನ್ನು ಹೇಳುವ ಕಥೆ ಆಖ್ಯಾಯಿಕಾ. 'ಹಿಂದೆ ಹೀಗೆ ನಡೆದಿತ್ತು' ಎಂದು ದಾಖಲೆಯೊಂದಿಗೆ ಹೇಳುವುದಕ್ಕೆ ಆಖ್ಯಾಯಿಕಾ ಎನ್ನುತ್ತಾರೆ. ಇಂತಹ ಆಖ್ಯಾಯಿಕಗಳನ್ನು ವೇದದಲ್ಲೂ ಕಾಣಬಹುದು. ಉದಾಹರಣೆಗೆ: **"ತಸ್ಯ ಹ ನಚಿಕೇತಾ ನಾಮ ಪುತ್ರ ಆಸ" ॥ಕಠ ಉಪನಿಷತ್- ೧.೧.೧॥.** ವೇದ, ಪುರಾಣ, ಇತಿಹಾಸದಲ್ಲಿ ಆಖ್ಯಾಯಿಕೆಗಳನ್ನು ಏಕೆ ಹೇಳುತ್ತಾರೆ ಎಂದರೆ: "ಹಿಂದೆ

ಹೀಗೆ ನಡೆದಿತ್ತು ಹಾಗೂ ಅಂತಹ ಫಲ ಪ್ರಾಪ್ತಿಗೆ ಇರುವ ಮಾರ್ಗ ಇದೊಂದೇ" ಎಂದು ಹೇಳುವುದಕ್ಕಾಗಿ ಮತ್ತು ದಾಖಲೆ ಸಹಿತ ಹೇಳಿ ನಮ್ಮ ಶ್ರದ್ಧೆಯನ್ನು ವೃದ್ಧಿಗೊಳಿಸುವುದಕ್ಕಾಗಿ.

ಭಾಗವತದಲ್ಲಿ ಭಗವಂತನ ಕಥೆ ಪ್ರಾರಂಭವಾಗುವುದು ಎರಡನೇ ಸ್ಕಂಧದಿಂದ. ಮೊದಲ ಸ್ಕಂಧ ಭಾಗವತದ ಪೀಠಿಕೆ ರೂಪದಲ್ಲಿದ್ದು, ಇಲ್ಲಿ ಒಟ್ಟು ಇಪ್ಪತ್ತು ಅಧ್ಯಾಯಗಳಿವೆ. ಈ ಪೀಠಿಕೆಯಲ್ಲಿನ ಮೊದಲ ಕಥೆ ಇಲ್ಲಿಂದ ಆರಂಭವಾಗುತ್ತದೆ.

**ನೈಮಿಶೇಽನಿಮಿಷಕ್ಷೇತ್ರೇ ಋಷಯಃ ಶೌನಕಾದಯಃ ।**
**ಸತ್ರಂ ಸ್ವರ್ಗಾಯ ಲೋಕಾಯ ಸಹಸ್ರಸಮಮಾಸತ ॥೪॥**

ಸುಮಾರು ಐದುಸಾವಿರ ವರ್ಷಗಳ ಹಿಂದೆ, ಪರೀಕ್ಷಿತರಾಜನ ಹಿರಿಮಗ ಜನಮೇಜಯ ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ, ನೈಮಿಶಾರಣ್ಯದಲ್ಲಿ ಶೌನಕರು ಕಟ್ಟಿದ ಗುರುಕುಲವೊಂದಿತ್ತು. 'ನಿಮಿಶ' ಎನ್ನುವ ಮರಗಳು ಹೇರಳವಾಗಿದ್ದುದರಿಂದ ಈ ಪ್ರದೇಶವನ್ನು 'ನೈಮಿಶಾರಣ್ಯ' ಎಂದು ಕರೆಯುತ್ತಿದ್ದರು. ಹಿಂದೆ ನಿಮಿಶ ಮರದ ಹಣ್ಣನ್ನು ಆಹಾರವಾಗಿ ಮತ್ತು ತೊಗಟೆಯನ್ನು ಉಡುಪಾಗಿ ಬಳಸುತ್ತಿದ್ದರು. ಇಂತಹ ನಿಮಿಶವೃಕ್ಷ ಸಮೃದ್ಧವಾಗಿರುವ ಕಾರಣದಿಂದ ಮತ್ತು ಅದು 'ಅನಿಮಿಷ' ಕ್ಷೇತ್ರವಾದ್ದರಿಂದ, ಶೌನಕರು ಅಲ್ಲಿ ತಮ್ಮ ಗುರುಕುಲವನ್ನು ನಿರ್ಮಿಸಿದ್ದರು. ಅನಿಮಿಷಃ ಎನ್ನುವುದು ಭಗವಂತನ ಅಸಾಧಾರಣ ಹೆಸರುಗಳಲ್ಲಿ ಒಂದು. ಈ ನಾಮ ವಿಷ್ಣುಸಹಸ್ರನಾಮದಲ್ಲಿ ಕೂಡಾ ಬಂದಿದೆ. ಅನಿಮಿಷಃ ಎಂದರೆ: ಎಂದೂ ನಿದ್ರಿಸದ ಭಗವಂತ! ಆತನಿಗೆ ನಿದ್ರೆಯೇ ಇಲ್ಲ. ಆತನ ನಿದ್ರೆ ಕೇವಲ ಎಚ್ಚರದ ಯೋಗನಿದ್ರೆ. ಸಮಸ್ತ ದೇವತಾ ಸನ್ನಿಧಾನವಿರುವ, ಸ್ವತಃ ಅನಿಮಿಷನಾದ ಭಗವಂತನ ಸನ್ನಿಧಾನವಿರತಕ್ಕಂಹ, ಆದ್ದರಿಂದ ಋಷಿಗಳಿಗೆ ಪ್ರಿಯವಾದ ಕ್ಷೇತ್ರ ನಿಮಿಷಕ್ಷೇತ್ರ. "ಕ್ಷಪಯಿತ್ವಾ ತ್ರಾಯತೇ ಇತಿ ಕ್ಷೇತ್ರಃ". ಕ್ಷೇತ್ರ ಎಂದರೆ ನಮ್ಮೆಲ್ಲಾ ಪಾಪಗಳನ್ನು ಪರಿಹಾರ ಮಾಡಿ ನಮ್ಮನ್ನು ರಕ್ಷಿಸುವಂತಹ, ಭಗವಂತನ ಸಾನಿಧ್ಯ ವಿಶೇಷವಾಗಿರುವ ಸ್ಥಳ. ಕ್ಷೇತ್ರದಲ್ಲಿ ನಮ್ಮೆಲ್ಲಾ ಪಾಪಗಳು ತಾನೇ ತಾನಾಗಿ ಕರಗಿ ಹೋಗುತ್ತವೆ. ಇಂತಹ ಪವಿತ್ರ ಕ್ಷೇತ್ರವಾದ ನಿಮಿಷಕ್ಷೇತ್ರದಲ್ಲಿ ಶೌನಕರ ನೇತೃತ್ವದಲ್ಲಿ ಋಷಿಗಳ ಒಂದು ದೊಡ್ಡ ಪಡೆ ಸೇರಿತ್ತು. ಶೌನಕರು ಎಂದರೆ 'ಶುನಕ' ವಂಶದಿಂದ ಬಂದವರು. ಶುನಕ ಅಥವಾ ಶೋನತಿ ಅಂದರೆ- "**ಮುಕ್ತಿಯೋಗ್ಯೋ ಭವತಿ ಇತಿ ಶುನಕಃ**"- ಮೋಕ್ಷ ಯೋಗ್ಯ ಎಂದರ್ಥ. ಇನ್ನೊಂದು ರೀತಿಯಲ್ಲಿ ಶುನ-ಗತೌ ಧಾತು. ಅಂದರೆ ಜ್ಞಾನಿ ಎಂದರ್ಥ. ಆದ್ದರಿಂದ ಶುನಕ ಎಂದರೆ: "ಜ್ಞಾನದ ಮೂಲಕ ಮುಕ್ತಿ ಸಾಧನೆ ಮಾಡುವವರು".

ಶೌನಕರ ನೇತೃತ್ವದಲ್ಲಿ ನಿಮಿಷಕ್ಷೇತ್ರದಲ್ಲಿ ಅನೇಕ ಮಂದಿ ಋಷಿಗಳು ಒಂದಾಗಿ, ಮೋಕ್ಷ ಸಾಧನೆಗಾಗಿ ಒಂದು ಸತ್ರಯಾಗವನ್ನು ಪ್ರಾರಂಭಿಸಿದ್ದರು. [ಅನೇಕ ಮಂದಿ ಕಲೆತು, ಸಾರ್ವಜನಿಕವಾಗಿ ಮಾಡುವ ಯಜ್ಞವನ್ನು ಸತ್ರಯಾಗ ಎನ್ನುತ್ತಾರೆ]. ಈ ಶ್ಲೋಕದಲ್ಲಿ ಸಾವಿರ ವರ್ಷಗಳ ಕಾಲ ನಡೆಯುವ ಯಜ್ಞ ಮಾಡಿದರು ಎಂದಿದೆ. ಆದರೆ ವೇದಗಳಲ್ಲಿ ಎಲ್ಲಿಯೂ ಈ ರೀತಿಯ ಯಜ್ಞದ ಕುರಿತ ವಿವರಣೆ ಕಾಣಸಿಗುವುದಿಲ್ಲ. ಆದ್ದರಿಂದ ಪ್ರಾಯಃ ಇದು ಒಂದು ಸಾವಿರ ದಿನಗಳ ಅಥವಾ ತಿಂಗಳುಗಳ ಸತ್ರಯಾಗ ಇದ್ದರೂ ಇರಬಹುದು. ಅದೇ ರೀತಿ "ಸ್ವರ್ಗಲೋಕ ಪ್ರಾಪ್ತಿಗಾಗಿ ಸತ್ರಯಾಗ ಮಾಡಿದರು" ಎಂದಿದ್ದಾರೆ. ಇಲ್ಲಿ ಹೇಳುವ ಸ್ವರ್ಗಲೋಕ ದೇವತೆಗಳ ಲೋಕವಲ್ಲ. 'ಸ್ವರ್ಗಾಯ ಲೋಕಾಯ' ಎಂದರೆ ದುಃಖ-ಭಯ-ಮುಪ್ಪು-ಸಾವಿಲ್ಲದ ಮೋಕ್ಷಲೋಕ. ಇದನ್ನು ಸ್ವರ್ಗಾಯಲೋಕಾಯ ಎಂದು ಏಕಪದವಾಗಿ ನೋಡಿದರೆ- ಯಾರನ್ನು ನಾವು ಸ್ವಃ ಎಂದು ಗಾಯನ ಮಾಡುತ್ತೇವೋ, ಆ ಭಗವಂತನ ಲೋಕ

ಸ್ವರ್ಗಲೋಕ ಎಂದಾಗುತ್ತದೆ. ಅಂತಹ ಭಗವಂತನ ಲೋಕ (ಮೋಕ್ಷ) ಪ್ರಾಪ್ತಿಗಾಗಿ ಋಷಿಗಳು ಸತ್ರಯಾಗ ಮಾಡಿದರು.

ತ ಏಕದಾ ತು ಮುನಯಃ ಪ್ರಾತರ್ಹುತಹುತಾಶನಾಃ ।
ಸತ್ಕೃತಂ ಸೂತಮಾಸೀನಂ ಪಪ್ರಚ್ಛುರಿದಮಾದೃತಾಃ ॥೫॥

ಯಜ್ಞ ನಡೆಯುವ ಸ್ಥಳದಲ್ಲಿ ಪ್ರತಿದಿನ ಸಂಜೆ ಪುರಾಣ ಇತ್ಯಾದಿ ಪ್ರವಚನ ಕಾರ್ಯಕ್ರಮ ಸಾಮಾನ್ಯ. ಅದಕ್ಕಾಗಿ ವಿದ್ವಾಂಸರಿಗೆ ಆಹ್ವಾನ ಹೋಗುತ್ತಿತ್ತು ಮತ್ತು ಪುರಾಣವನ್ನು ಹೇಳುವ ಪೌರಾಣಿಕರು ಅಲ್ಲಿಗೆ ಬರುತ್ತಿದ್ದರು. ಆಗಿನ ಕಾಲದಲ್ಲಿ ಪುರಾಣ ಪ್ರವಚನ ಮಾಡುತ್ತಿದ್ದವರು ರೋಮಹರ್ಷಣರು. ಅವರ ಕಾಲದ ನಂತರ, ಭಾಗವತ ಮತ್ತು ಮಹಾಭಾರತ ಪ್ರವಚನ ಮಾಡಿದವರು ರೋಮಹರ್ಷಣರ ಮಗನಾದ ಉಗ್ರಶ್ರವಸ್ಸು ಎನ್ನುವ ಸೂತರು. ಒಂದು ದಿನ ಸತ್ರಯಾಗ ನಡೆಯುತ್ತಿದ್ದ ನಿಮಿಷಕ್ಷೇತ್ರಕ್ಕೆ ಯಜ್ಞದ ಪೂರ್ಣಾಹುತಿಯಲ್ಲಿ ಪಾಲ್ಗೊಳ್ಳಲು ಸೂತರು ಆಗಮಿಸುತ್ತಾರೆ. ಆಗ ಎಲ್ಲಾ ಋಷಿಗಳು ಅಗ್ನಿ ಆಹುತಿ ಮುಗಿಸಿ, ಅತಿಥಿಯಾಗಿ ಬಂದ ಉಗ್ರಶ್ರವಸ್ಸರನ್ನು ಸತ್ಕರಿಸುತ್ತಾರೆ. ವೇದವ್ಯಾಸರಿಂದ ಪಾಠ ಕೇಳಿದ, ಸಮಸ್ತ ಪುರಾಣಬಲ್ಲ ಸೂತರಲ್ಲಿ ಋಷಿಗಳು "ನಮ್ಮ ಗುರುಕುಲದಲ್ಲಿ ತಾವು ಪುರಾಣ ಪ್ರವಚನ ಮಾಡಬೇಕು" ಎಂದು ಕೇಳಿಕೊಳ್ಳುತ್ತಾರೆ.

**ಋಷಯ ಊಚುಃ**

ತ್ವಯಾ ಖಲು ಪುರಾಣಾನಿ ಸೇತಿಹಾಸಾನಿ ಚಾನಘ
ಆಖ್ಯಾತಾನ್ಯಪ್ಯಧೀತಾನಿ ಧರ್ಮಶಾಸ್ತ್ರಾಣಿ ತಾನ್ಯುತ ॥೬॥

ಪುರಾಣ, ಇತಿಹಾಸ ಮತ್ತು ಧರ್ಮಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಿ, ಪ್ರವಚನ ಮಾಡಿ ಬಲ್ಲ ಸೂತರಲ್ಲಿ ಋಷಿಗಳು ತಮ್ಮ ಜ್ಞಾನ ಪಿಪಾಸೆಯನ್ನು ತೋಡಿಕೊಳ್ಳುತ್ತಾರೆ. ಭಾಗವತದ ಕಥಾ ಭಾಗದಲ್ಲಿ ಮುಂದುವರಿಯುವ ಮುನ್ನ ಇಲ್ಲಿ ನಾವು ಪುರಾಣ ಮತ್ತು ಇತಿಹಾಸಗಳ ನಡುವಿನ ವ್ಯತ್ಯಾಸ ಏನು ಎನ್ನುವುದನ್ನು ತಿಳಿದಿರಬೇಕು. ಪುರಾಣ ಎಂದರೆ ಪ್ರಾಚೀನ ದಾಖಲೆ; ಇತಿಹಾಸ ಎಂದರೆ 'ಹೀಗಿತ್ತು' ಎನ್ನುವ ದಾಖಲೆ! ಹಾಗಾದರೆ ಇವೆರಡರ ನಡುವಿನ ಅರ್ಥಭೇದವೇನು? ಇತಿಹಾಸ ನಡೆದ ಘಟನೆಗಳನ್ನು ನಿರೂಪಿಸುವ ಗ್ರಂಥವಾದರೆ, ಪುರಾಣ ಹಾಗಲ್ಲ. ಅಲ್ಲಿ ಇತಿಹಾಸವಿದೆ, ಆದರೆ ಪುರಾಣವೇ ಇತಿಹಾಸವಲ್ಲ. ಪುರಾಣದಲ್ಲಿ ಅರ್ಥವಾದವಿದೆ. ಅಲ್ಲಿ ಅನೇಕ ಕಥೆಗಳ ಮೂಲಕ ಸಂದೇಶವನ್ನು ಕೊಡುತ್ತಾರೆ. ಮಹಾಭಾರತದಲ್ಲಿ ಪುರಾಣದ ಲಕ್ಷಣಗಳಿವೆ ಆದರೆ ಅಲ್ಲಿ ಇತಿಹಾಸ ಪ್ರಧಾನವಾಗಿರುವುದರಿಂದ ಅದು ಇತಿಹಾಸ. ಭಾಗವತದಲ್ಲಿ ಇತಿಹಾಸಕ್ಕಿಂತ ಪುರಾಣದ ಅಂಶಕ್ಕೆ ಹೆಚ್ಚು ಒತ್ತು ಕೊಡಲಾಗಿದೆ. ಮನ್ವಂತರಗಳ ಚರಿತ, ರಾಜರ್ಷಿಗಳ ವಂಶಾನುಚರಿತ, ಸೃಷ್ಟಿ-ಸ್ಥಿತಿ-ಸಂಹಾರಗಳ ಬಿತ್ತರವನ್ನು ಹೇಳುವ ಗ್ರಂಥ 'ಪುರಾಣ'. ಹೀಗೆ ಪುರಾಣದಲ್ಲಿ ಇತಿಹಾಸವೂ ಸೇರಿಕೊಂಡಿದ್ದರೂ ಕೂಡಾ, ಅಲ್ಲಿ ಬರುವ ಎಲ್ಲಾ ಕಥೆಗಳೂ ಇತಿಹಾಸವಾಗಿರಬೇಕೆಂದೇನೂ ಇಲ್ಲ. ಪುರಾಣಗಳಲ್ಲಿ ಒಂದು ಕಥೆಯನ್ನು ಹೇಳಿ ಒಂದು ನೀತಿಯನ್ನು ಹೇಳುತ್ತಾರೆ. ಹಾಗೆ ಕಥೆಯನ್ನು ರೂಪಕವಾಗಿ ಹೇಳಿದಾಗ ನಾವು ತಪ್ಪಾಗಿ ತಿಳಿದುಕೊಳ್ಳಬಾರದು. ಅಲ್ಲಿ ಆ ಕಥೆಯ ಹಿಂದಿರುವ ಸಂದೇಶ ಮಾತ್ರ ಗ್ರಾಹ್ಯ. ಈ ವಿಷಯ ತಿಳಿಯದೇ ಪುರಾಣ ಅನುವಾದ ಮಾಡಿದರೆ ನರಕಾದಿ ಅನಾಹುತವಾದೀತು! ಇದಕ್ಕೆ ಒಂದು ಉತ್ತಮ ಉದಾಹರಣೆ ಪದ್ಮಪುರಾಣದಲ್ಲಿ ಬರುವ 'ಕಾರ್ತಿಕಮಾಸ ಮಹಾತ್ಮೆ' ಕಥೆ. ಅಲ್ಲಿ ಕಾರ್ತಿಕ ಮಾಸದಲ್ಲಿ ಆಕಾಶ ದೀಪವಿಡುವುದರ ಮಹಾತ್ಮೆಯನ್ನು ಹೇಳುವುದಕ್ಕಾಗಿ ಒಂದು ಕಥೆಯನ್ನು

ಹೇಳುತ್ತಾರೆ. ಆ ಕಥೆ ಹೀಗಿದೆ: ಒಂದು ಸಂಜೆ ಕಾಗೆಯೊಂದು ಆಕಾಶ ಮಾರ್ಗವಾಗಿ ತನ್ನ ಗೂಡಿನತ್ತ ಸಾಗುತ್ತಿತ್ತು. ಆಗ ಅದಕ್ಕೆ ಒಂದು ಮನೆಯ ಅಂಗಳದಲ್ಲಿನ ತುಳಸೀಕಟ್ಟೆಯಲ್ಲಿ ಹಚ್ಚಿದ ದೀಪ ಕಾಣಿಸುತ್ತದೆ. ಕಾಗೆ ಆ ದೀಪವನ್ನು ಹಣ್ಣು ಎಂದು ಭಾವಿಸಿ, ಕೆಳಕ್ಕೆ ಬಂದು ತನ್ನ ಕೊಕ್ಕಿನಿಂದ ದೀಪದ ಬತ್ತಿಯನ್ನು ಹಿಡಿದುಕೊಂಡು ಮೇಲಕ್ಕೆ ಹಾರುತ್ತದೆ. ಹಾಗೆ ಹಾರುವಾಗ ಅದಕ್ಕೆ ಅದು ಹಣ್ಣಲ್ಲ, ಬೆಂಕಿ ಎನ್ನುವುದು ತಿಳಿದು, ತನ್ನ ಬಾಯಿಯಿಂದ ದೀಪವನ್ನು ಕೆಳಕ್ಕೆ ಬೀಳಿಸುತ್ತದೆ. ಹೀಗೆ ಕಾಗೆಯ ಕೊಕ್ಕಿನಿಂದ ಬಿದ್ದ ದೀಪ ಒಂದು ಹುಲ್ಲುಮನೆಯ ಮೇಲೆ ಬಿದ್ದು, ಆ ಮನೆ ಹೊತ್ತಿಕೊಂಡು ಉರಿದು ದೊಡ್ಡ ಆಕಾಶ ದೀಪವಾಗುತ್ತದೆ. ಈ ರೀತಿ ದೊಡ್ಡ ಆಕಾಶದೀಪ ಹಚ್ಚಿದ ಪುಣ್ಯದಿಂದ ಕಾಗೆ ಸ್ವರ್ಗವನ್ನು ಪಡೆಯುತ್ತದೆ! ಇದು ಕಥೆ. ಈ ಕಥೆಯನ್ನು ಓದಿ, ಅದು ವಾಸ್ತವ ಎಂದು ತಿಳಿದು, ಕಾರ್ತಿಕ ಮಾಸದಲ್ಲಿ ಯಾರದ್ದಾದರೂ ಮನೆಗೆ ಬೆಂಕಿ ಹಚ್ಚಿದರೆ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂದು ನಾವು ತಿಳಿದರೆ ಅದು ಅನಾಹುತ. ಇಲ್ಲಿ ಹೇಳಿರುವುದು 'ಕಾರ್ತಿಕ ಮಾಸದಲ್ಲಿ ಆಕಾಶದೀಪ ಹಚ್ಚಿದರೆ ಮಹಾ ಪುಣ್ಯಫಲ ಪ್ರಾಪ್ತಿಯಾಗುತ್ತದೆ' ಎನ್ನುವ ಸಂದೇಶ ಅಷ್ಟೇ. ಇಲ್ಲಿರುವ ಇತರ ಕಥಾಂಶವನ್ನು ನಾವು ಅಲ್ಲೇ ಬಿಟ್ಟು ಬಿಡಬೇಕು. ಇಂತಹ ಅನೇಕ ಕಥೆಗಳು ಪುರಾಣದಲ್ಲಿ ಬರುತ್ತವೆ. ಪುರಾಣವನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ತಿಳಿಯಲಿಕ್ಕಾಗಿ ಇಂತಹ ಕಥೆಗಳಿವೆ.

ಪುರಾಣದಲ್ಲಿ ಕೆಲವೊಮ್ಮೆ ದರ್ಶನ ಭಾಷೆಯಲ್ಲಿ ಕಥೆಗಳನ್ನು ಹೇಳಲಾಗುತ್ತದೆ. ಉದಾಹರಣೆಗೆ 'ಮಹಾಭಾರತ ಯುದ್ಧದಲ್ಲಿ ಬಾಣಗಳಿಂದ ಕೃಷ್ಣನ ಕವಚ ಒಡೆದುಹೋಗಿ, ಮೈಯಲ್ಲೆಲ್ಲಾ ರಕ್ತ ಸುರಿಯುತ್ತಿತ್ತು' ಎನ್ನುತ್ತಾರೆ. ಇದು ದರ್ಶನ ಭಾಷೆ. ತ್ರಿಗುಣಾತೀತನಾದ, ಸ್ವರೂಪಭೂತನಾದ ಭಗವಂತನ ಮೈಯಲ್ಲಿ ಅದೆಲ್ಲಿಯ ರಕ್ತ? ಇದು ಅಲ್ಲಿರುವ ಕೌರವ ಸೈನಿಕರಿಗೆ ಕಾಣಿಸಿದ ದೃಶ್ಯ ಅಷ್ಟೇ. ಇಲ್ಲಿ ಕಾಣಿಸಿದ್ದೇ ಬೇರೆ-ಇರುವುದೇ ಬೇರೆ. ಈ ರೀತಿ ಪುರಾಣಗಳಲ್ಲಿ ನಾನಾ ವಿಧದ ನಿರೂಪಣಾ ವಿಶೇಷಗಳಿವೆ. ಆಚಾರ್ಯ ಮಧ್ವರು ಪುರಾಣಗಳಿಗೆ ಹೇಗೆ ಅರ್ಥ ಹಚ್ಚಬೇಕು ಎನ್ನುವುದನ್ನು ವಿವರಿಸುತ್ತಾ, ಅಲ್ಲಿರುವ ಮೂರು ಭಾಷೆಗಳು ಮತ್ತು ಸಪ್ತಭೇದಗಳನ್ನು ವಿವರಿಸಿದ್ದಾರೆ. ೧. ದರ್ಶನಭಾಷೆ: ಇದು ಕಂಡದ್ದನ್ನು ಹೇಳುವ ಭಾಷೆ. ೨, ಗುಹ್ಯಭಾಷೆ: ಏನು ಹೇಳಿದ್ದಾರೆ ಎಂದು ನೇರವಾಗಿ ತಿಳಿಯದಂತೆ ಒಗಟಿನರೂಪದಲ್ಲಿ ಹೇಳುವ ಭಾಷೆ. ೩. ಸಮಾಧಿಭಾಷೆ: ಇದ್ದದ್ದನ್ನು ಇದ್ದಂತೆ ಹೇಳುವ ಭಾಷೆ. ಈ ಮೂರು ಬಗೆಯ ಭಾಷಾ ಪ್ರಯೋಗ ವೇದಗಳಲ್ಲಿಯೂ ಬಳಕೆಯಲ್ಲಿದೆ. ಇದನ್ನು ತಿಳಿಯದೆ ವೇದ ಓದಿದರೆ ಎಲ್ಲವೂ ನಿಗೂಢ. ಪುರಾಣ ನಿರೂಪಣೆಯಲ್ಲಿ ಏಳು ವಿಧ. ಅವುಗಳೆಂದರೆ: ೧. ವ್ಯತ್ಯಾಸ: ಕಾಲ-ದೇಶ-ವ್ಯಕ್ತಿಗಳನ್ನು ವ್ಯತ್ಯಾಸ ಮಾಡಿ ಹೇಳುವುದು. ೨.ಪ್ರಾತಿಲೋಮ್ಯ: ಮುಂದೆ ಹಿಂದೆ ಮಾಡಿ ಹೇಳುವುದು. ೩.ಗೋಮೂತ್ರಿ : ಗಾಡಿಗೆ ಕಟ್ಟಿದ ಎತ್ತು ಮೂತ್ರ ಮಾಡಿದಂತೆ ಸುತ್ತುಬಳಸಿ ಹೇಳುವುದು. ೪.ಪ್ರಘಸ: ಹುಲ್ಲುಗಾವಲಿನಲ್ಲಿ ಹಸುಗಳು ಹುಲ್ಲು ತಿಂದಂತೆ ಅಲ್ಲಲ್ಲಿ ವಿಷಯಗಳನ್ನು ತುರುಕಿ ಹೇಳುವುದು. ೫. ಉಕ್ಷಣಾ: ವಿಷಯಗಳನ್ನು ಪ್ರೋಕ್ಷಣೆ ಮಾಡಿದಂತೆ ಸ್ವಲ್ಪಸ್ವಲ್ಪ ಹೇಳುವುದು. ೬.ಸುಧುರ: ಇದ್ದದ್ದನ್ನು ಸಮರ್ಪಕವಾಗಿ ಹೇಳುವುದು ೭. ಸಾಧು: ಸಮಾಧಿಭಾಷೆಯಲ್ಲಿ ಸ್ಪಷ್ಟವಾಗಿ ಹೇಳುವುದು. ಹೀಗೆ ಪುರಾಣಗಳನ್ನು ಈ ಮೂರು ಭಾಷೆಗಳು ಮತ್ತು ಏಳು ವಿಧಾನವನ್ನು ತಿಳಿದು ಅರ್ಥಚಿಂತನೆ ಮಾಡಬೇಕು.

ಆ ಕಾಲದಲ್ಲಿ ಪುರಾಣಗಳ ಹಿನ್ನೆಲೆಯನ್ನು ತಿಳಿದು ಅರ್ಥಮಾಡಿ ಪ್ರವಚನ ಮಾಡಬಲ್ಲ ಶಕ್ತಿ ಪಡೆದವರು ಉಗ್ರಶ್ರವಸ್. ಅದಕ್ಕಾಗಿ ಋಷಿಗಳು ಇಲ್ಲಿ ಅವರನ್ನು 'ಅನಘ' ಎಂದು ಸಂಬೋಧಿಸಿದ್ದಾರೆ. ಅನಘ ಎನ್ನುವ ವಿಶೇಷಣದ ಹಿಂದೆ ಒಂದು ಅಪೂರ್ವ ವಿಷಯ ಅಡಗಿದೆ. ಅನಘ ಎಂದರೆ ಪಾಪವಿಲ್ಲದವನು ಎಂದರ್ಥ. ಪುರಾಣದ ರಹಸ್ಯಾರ್ಥವನ್ನು ತಿಳಿದುಕೊಳ್ಳದೆ, ಮೇಲ್ನೋಟದ ಅರ್ಥವನ್ನು ಹೇಳುವುದು ಘೋರ ನರಕ ಸಾಧನ ಎನ್ನುತ್ತಾರೆ. ಆದರೆ ಉಗ್ರಶ್ರವಸ್ ಯಥಾರ್ಥವಾದ ಪುರಾಣದ ರಹಸ್ಯ ತಿಳಿದ ಮತ್ತು ಅದನ್ನು ಜನರಿಗೆ ಹೇಳಿ, ಅವರನ್ನು ಸ್ವರ್ಗಕ್ಕೆ ಒಯ್ಯಬಲ್ಲ ಸಾಮರ್ಥ್ಯವುಳ್ಳ ಪುಣ್ಯಾತ್ಮರಾಗಿದ್ದುದರಿಂದ ಅವರನ್ನು ಇಲ್ಲಿ 'ಅನಘ' ಎಂದು ಸಂಬೋಧಿಸಿದ್ದಾರೆ.

ಇಲ್ಲಿ ಹೇಳಿರುವಂತೆ ಉಗ್ರಶ್ರವಸ್ ಮಹಾಭಾರತ, ಅಷ್ಟಾದಶಪುರಾಣಗಳ ಜೊತೆಗೆ, ಧರ್ಮಶಾಸ್ತ್ರಗಳನ್ನೂ ಬಲ್ಲ ಜ್ಞಾನಿಗಳಾಗಿದ್ದರು. ನಮಗೆ ತಿಳಿದಂತೆ ಪುರಾಣ ಮತ್ತು ಮಹಾಭಾರತ ವೇದಾರ್ಥ ನಿರ್ಣಯಕ್ಕೋಸ್ಕರ ರಚಿತವಾದ ಗ್ರಂಥಗಳು. ಆದರೆ ಧರ್ಮಶಾಸ್ತ್ರ ವೇದಕ್ಕೆ ಅನುಗುಣವಾಗಿರುವ ಗ್ರಂಥಗಳು. ವೇದಗಳು ಸನಾತನ ಮತ್ತು ಸಾರ್ವಕಾಲಿಕ ಅರ್ಥವನ್ನು ಹೇಳುವಂತಹ ಗ್ರಂಥವಾದರೆ, ಧರ್ಮಗ್ರಂಥಗಳು ಸಾರ್ವಕಾಲಿಕ ಸತ್ಯದ ಜೊತೆಗೆ ಆಯಾ ಕಾಲದ ಸಮಾಜ ಧರ್ಮವನ್ನೂ ಹೇಳುವ ಸಂವಿಧಾನವಿದ್ದಂತೆ. ಈ ಕಾರಣದಿಂದ ಧರ್ಮಗ್ರಂಥಗಳು ಕಾಲಬಾಧಿತ ಮತ್ತು ಅವುಗಳನ್ನು ಎಲ್ಲಾ ಸಂದರ್ಭದಲ್ಲಿ ನೇರವಾಗಿ ಪ್ರಮಾಣ ಮಾಡಲು ಬರುವುದಿಲ್ಲ. ಉದಾಹರಣೆಗೆ ನಿಯೋಗ ಪದ್ಧತಿಯನ್ನು ಕೆಲವು ಧರ್ಮಶಾಸ್ತ್ರಗಳು ಹೇಳುತ್ತವೆ. ಅದು ಪಾಂಡವರ ಕಾಲದಲ್ಲಿ ಆಚರಣೆಯಲ್ಲಿತ್ತು. ಆದರೆ ಅದು ಇಂದು ಸಿಂಧುವಲ್ಲ. ಈ ಎಲ್ಲಾ ಕಾರಣದಿಂದ ಸಮಾಜಧರ್ಮ, ವ್ಯಕ್ತಿಧರ್ಮ ಮತ್ತು ಸನಾತನಧರ್ಮ ತಿಳಿದ ಜ್ಞಾನಿಗಳಷ್ಟೇ ಧರ್ಮಶಾಸ್ತ್ರ ಚಿಂತನೆ ಮಾಡಬಲ್ಲರು. ಹೀಗಾಗಿ ಇವೆಲ್ಲವನ್ನೂ ಬಲ್ಲ ಸೂತರನ್ನು ಇಲ್ಲಿ ಋಷಿಗಳು ಗೌರವಪೂರ್ವಕವಾಗಿ ಕೊಂಡಾಡಿದ್ದಾರೆ.

ಯಾನಿ ವೇದವಿದಾಂ ಶ್ರೇಷ್ಠೋ ಭಗವಾನ್ ಬಾದರಾಯಣಃ ।
ಅನ್ಯೇ ಚ ಮುನಯಃ ಸೂತ ಪರಾವರವಿದೋ ವಿದುಃ ॥೭॥

ವೇತ್ಥ ತ್ವಂ ಸೌಮ್ಯ ತತ್ ಸರ್ವಂ ತತ್ತ್ವತಸ್ತದನುಗ್ರಹಾತ್ ।
ಬ್ರೂಯುಃ ಸ್ನಿಗ್ಧಸ್ಯ ಶಿಷ್ಯಸ್ಯ ಗುರವೋ ಗುಹ್ಯಮಪ್ಯುತ ॥೮॥

ಋಷಿಗಳು ಸೂತರನ್ನು ಕುರಿತು ಹೇಳುವ ಈ ಮಾತನ್ನು ಶ್ಲೋಕದ ಮೇಲ್ನೋಟದ ಅರ್ಥದಲ್ಲಿ ನೋಡಿದರೆ ಸ್ವಲ್ಪ ಗಾಬರಿಯಾಗುತ್ತದೆ! ಮೇಲ್ನೋಟದಲ್ಲಿ ನೋಡಿದರೆ: "ವೇದವ್ಯಾಸರು ಮತ್ತು ಈ ಕಾಲದ ಎಲ್ಲಾ ಋಷಿಗಳು ಏನೇನು ತಿಳಿದಿದ್ದಾರೆ, ಅದೆಲ್ಲವೂ ತದ್ವತ್ತಾಗಿ, ಪೂರ್ಣಪ್ರಮಾಣದಲ್ಲಿ ತಮಗೆ ತಿಳಿದಿದೆ" ಎಂದು ಹೇಳಿದಂತೆ ಕಾಣುತ್ತದೆ. ಈ ರೀತಿ ಹೊಗಳಿದರೆ ಅದು ಅತಿಶಯೋಕ್ತಿಯಾಗುತ್ತದೆ. ಏಕೆಂದರೆ ಸ್ವಯಂ ಭಗವಂತನ ಅವತಾರವಾದ ವೇದವ್ಯಾಸರಿಗೆ ತಿಳಿದ ಎಲ್ಲಾ ವಿಚಾರ ಇನ್ಯಾರಿಗೂ ತದ್ವತ್ತಾಗಿ ತಿಳಿದಿರಲು ಸಾಧ್ಯವೇ ಇಲ್ಲ. ಆದ್ದರಿಂದ ಇದು ಈ ಶ್ಲೋಕದಲ್ಲಿನ ವಸ್ತುಸ್ಥಿತಿ ಅಲ್ಲ. ವಸ್ತುಸ್ಥಿತಿ ತಿಳಿಯಬೇಕಾದರೆ ನಾವು ಈ ಶ್ಲೋಕವನ್ನು ಎಚ್ಚರಿಕೆಯಿಂದ ಗಮನಿಸಬೇಕು. "ಯಾನಿ ವೇದ, ವಿದಾಂ ಶ್ರೇಷ್ಟಃ, ಭಗವಾನ್ ಬಾದರಾಯಣಃ": ಜ್ಞಾನಿಗಳಲ್ಲಿ ಶ್ರೇಷ್ಟರು ಭಗವಾನ್ ವೇದವ್ಯಾಸರು[ಬಾದರಾಯಣರು]. ಅವರು ಏನನ್ನು ತಿಳಿದಿದ್ದಾರೋ-ಆ ಜ್ಞಾನದ ತುಣುಕನ್ನೇ ಭಗವಂತನನ್ನು ಬಲ್ಲ ಹಾಗೂ ಸಮಸ್ತವಿಶ್ವವನ್ನು ಅದರ ತರತಮಭಾವದಿಂದ ತಿಳಿದ ಋಷಿಗಳು[ಪರಾವರವಿದೋ ವಿದುಃ] ತಿಳಿದಿದ್ದಾರೆ. ಅಂತಹ ಅಪೂರ್ವ ಜ್ಞಾನದ ತುಣುಕನ್ನು ವೇದವ್ಯಾಸರಿಂದ ನೇರ ಉಪದೇಶ ಪಡೆದ ತಾವು ಅವರ ಅನುಗ್ರಹದಿಂದ ಪೂರ್ಣವಾಗಿ ಅರಿತಿದ್ದೀರಿ. ನೀವು ವ್ಯಾಸರ ಪ್ರೀತಿಯ ಶಿಷ್ಯನಾಗಿರುವುದರಿಂದ ಅವರು ನಿಮ್ಮಲ್ಲಿ ಅನೇಕ ರಹಸ್ಯಗಳನ್ನು ಬಿಚ್ಚಿಟ್ಟಿದ್ದಾರೆ. ತಮಗೆ ತಿಳಿದ ಪುರಾಣದ ರಹಸ್ಯ ನಮಗೆ ತಿಳಿಯದು. ಆದ್ದರಿಂದ ತಾವು ಆ ಜ್ಞಾನವನ್ನು ನಮಗೆ ಹೇಳಬೇಕು ಎಂದು ಋಷಿಗಳು ಉಗ್ರಶ್ರವಸ್ಸರಲ್ಲಿ ಕೇಳಿಕೊಳ್ಳುತ್ತಾರೆ.

ಇಲ್ಲಿ 'ಸೌಮ್ಯ' ಎನ್ನುವ ವಿಶೇಷಣ ಬಳಸಲಾಗಿದೆ. ಸೌಮ್ಯ ಎಂದರೆ ಸಾತ್ತ್ವಿಕ ಸ್ವಭಾವದವರು ಎನ್ನುವುದು ಒಂದರ್ಥವಾದರೆ, ಈ ಪದವನ್ನು ಬಿಡಿಸಿ ನೋಡಿದರೆ: ಇಲ್ಲಿ 'ಉಮಾ' ಎನ್ನುವ ಪದವಿದೆ. ಉಮಾ ಎಂದರೆ

ಉತ್ಕೃಷ್ಟವಾದ ಜ್ಞಾನ ಅಥವಾ ಭಗವದ್ ವಿಷಯಿಕವಾದ ಅರಿವು. ಇಂತಹ ಅರಿವು ಉಳ್ಳವರು ಸೋಮರು. (ವಾಯುದೇವರನ್ನು ಸೋಮ ಎಂದೂ ಕರೆಯುತ್ತಾರೆ). ಇಂತಹ ಗುಣ ಇರುವಿಕೆ ಸೌಮ್ಯ.

ತತ್ರ ತತ್ರಾಂಜಸಾಽಽಯುಷ್ಮನ್ ಭವತಾ ಯದ್ ವಿನಿಶ್ಚಿತಮ್ ।
ಪುಂಸಾಮೇಕಾಂತತಃ ಶ್ರೇಯಸ್ತನ್ನಃ ಶಂಸಿತುಮರ್ಹಸಿ ॥೯॥

ಪ್ರಾಯೇಣಾಲ್ಪಾಯುಷೋ ಮರ್ತ್ಯಾಃ ಕಲಾವಸ್ಮಿನ್ ಯುಗೇ ಜನಾಃ ।
ಮಂದಾಃ ಸುಮಂದಮತಯೋ ಮಂದಭಾಗ್ಯಾ ಹ್ಯುಪದ್ರುತಾಃ ॥೧೦॥

ಈ ಶ್ಲೋಕದಲ್ಲಿ ಋಷಿಗಳು ತಮ್ಮ ಅಭಿಲಾಷೆಯನ್ನು ಸೂತರ ಮುಂದಿಡುವುದನ್ನು ಕಾಣುತ್ತೇವೆ. “ ಎಲ್ಲಾ ಪುರಾಣ, ಇತಿಹಾಸ ಹಾಗೂ ಧರ್ಮಶಾಸ್ತ್ರಗಳನ್ನು ಓದಿದ ನೀವು ಅಂತಹ ಗ್ರಂಥಗಳಲ್ಲಿ ಮನುಷ್ಯನ ಬದುಕಿಗೆ ಅವಶ್ಯವಾಗಿ ಬೇಕಾಗಿರುವ, ಆಯಾ ಗ್ರಂಥಗಳ ಸಾರವನ್ನು ನಮಗೆ ತಿಳಿಸಿ” ಎಂದು ಶೌನಕರು ಸೂತರಲ್ಲಿ ಕೇಳಿಕೊಳ್ಳುತ್ತಾರೆ. ಒಟ್ಟಿನಲ್ಲಿ ಇಡೀ ಜೀವಮಾನದಲ್ಲಿ ಮಾನವನು ತಿಳಿಯಲೇ ಬೇಕಾದ ಅತ್ಯಂತ ಶ್ರೇಯಸ್ಕರ ವಿಷಯವನ್ನು, ಈ ಜಗತ್ತಿನ ಶ್ರೇಯಸ್ಸಿಗೋಸ್ಕರ ಹೇಳಿ ಎಂದು ಅವರು ಕೇಳಿಕೊಳ್ಳುತ್ತಾರೆ. ಋಷಿಗಳ ಈ ಮಾತಿನಿಂದ ನಮಗೆ ತಿಳಿಯುವುದೇನೆಂದರೆ: ಅವರು ತಮಗಾಗಿ ಈ ಪ್ರಶ್ನೆಯನ್ನು ಸೂತರ ಮುಂದಿಟ್ಟಿಲ್ಲ. ಬದಲಾಗಿ ಜಗತ್ತಿನಲ್ಲಿ ಗೊತ್ತಿಲ್ಲದವರಿಗೆ ಗೊತ್ತಾಗಲಿ ಎನ್ನುವ ಉದ್ದೇಶದಿಂದ ಕೇಳುತ್ತಿದ್ದಾರೆ. ಈ ಪ್ರಶ್ನೋತ್ತರ ಸಂವಾದ ದಾಖಲೆಯಾಗಿ ಮುಂದಿನ ಜನಾಂಗಕ್ಕೆ ತಿಳಿಯಲಿ ಎನ್ನುವ ಉದ್ದೇಶ ಅವರದು. ತಾವು ಏಕೆ ಈ ರೀತಿ ಕೇಳುತ್ತಿದ್ದೇವೆ ಎನ್ನುವುದನ್ನು ಹೇಳುತ್ತಾ ಋಷಿಗಳು ಹೇಳುತ್ತಾರೆ: ಇದು ಕಲಿಯುಗ. ಕಲಿಯುಗದ ಜನರು ಹೆಚ್ಚಾಗಿ ಅಲ್ಪಾಯುಷಿಗಳು. ಜನರ ಪ್ರವೃತ್ತಿ ಮತ್ತು ಬುದ್ಧಿ ಕಲಿಯುಗದಲ್ಲಿ ಮಂದ. ಒಂದು ವೇಳೆ ಬುದ್ಧಿ ಚುರುಕಾಗಿದ್ದರೂ ಕೂಡಾ, ಅಲ್ಲಿ ಯಾವುದೋ ಸಾಮಾಜಿಕ ತೊಂದರೆಯಿರುತ್ತದೆ. ಅದಕ್ಕಾಗಿ, ಜ್ಞಾನಸಾರವನ್ನು ತಾವು ಹೇಳಬೇಕು ಎಂದು ಋಷಿಗಳು ಉಗ್ರಶ್ರವಸ್ಸರಲ್ಲಿ ಕೇಳಿಕೊಂಡು ತಮ್ಮ ಆರು ಪ್ರಶ್ನೆಗಳನ್ನು ಅವರ ಮುಂದಿಡುತ್ತಾರೆ.

## ನೈಮಿಶಾರಣ್ಯದಲ್ಲಿ ಶೌನಕರು ಉಗ್ರಶ್ರವಸ್ಸರಲ್ಲಿ ಕೇಳಿದ ಆರು ಪ್ರಶ್ನೆಗಳು

ಭೂರೀಣಿ ಭೂರಿಕರ್ಮಾಣಿ ಶ್ರೋತವ್ಯಾನಿ ವಿಭಾಗಶಃ ।
ಅತಃ ಸಾಧೋಽತ್ರ ಯತ್ ಸಾರಂ ಸಮುದ್ಧೃಹ್ಯ ಮನೀಷಯಾ ।
ಬ್ರೂಹಿ ಭದ್ರಾಯ ಭೂತಾನಾಂ ಯೇನಾತ್ಮಾಽಽಶು ಪ್ರಸೀದತಿ ॥೧೧॥

ಋಷಿಗಳು ಹೇಳುತ್ತಾರೆ: ತಿಳಿಯಬೇಕಾಗಿರುವುದು ತುಂಬಾ ಇದೆ. ಒಂದೊಂದು ವಿಷಯವನ್ನು ವಿಭಾಗಮಾಡಿ ಅಧ್ಯಯನ ಮಾಡಲು ಒಂದು ಜನ್ಮ ಸಾಲದು ಮತ್ತು ಅದಕ್ಕಾಗಿ ಮಾಡಬೇಕಾದ ಕರ್ಮಗಳೂ ಅನಂತ. ಹಾಗಾಗಿ ಸಜ್ಜನರಾದ ತಾವು, ಕಲಿಯುಗದ ಜನರ ಮೇಲೆ ಅನುಕಂಪ ತೋರಿ, ಜೀವಜಾತದ ಕ್ಷೇಮಕ್ಕೋಸ್ಕರ ಜ್ಞಾನವನ್ನು ನೀಡಬೇಕು. ತಾವು ಅಧ್ಯಯನ ಮಾಡಿರುವುದರಲ್ಲಿ, ಇಡೀ ಪ್ರಪಂಚಕ್ಕೆ ಅತ್ಯಂತ ಶ್ರೇಯಸ್ಕರವಾದ, ಸಾರಗಳಲ್ಲೇ

ಸಾರವಾದ ವಿಷಯ ಯಾವುದು ಎಂದು ನೀವೇ ಗ್ರಹಣ ಮಾಡಿ ಹೇಳಬೇಕು. ಯಾವ ಮಾತನ್ನು ಕೇಳಿದಾಗ ಮನಸ್ಸು ಆನಂದದಿಂದ ಹುಚ್ಚೆದ್ದು ಕುಣಿಯಬಲ್ಲದೋ-ಅಂತಹ ಜೀವದ ಉದ್ಧಾರದ ಮಾತನ್ನು; ಯಾವ ವಿಷಯವನ್ನು ನಾವು ತಿಳಿಯುವುದರಿಂದ ಭಗವಂತ ನಮ್ಮ ಮೇಲೆ ಪ್ರಸನ್ನನಾಗುತ್ತಾನೋ-ಅಂತಹ ಮಾತನ್ನು ಹೇಳಬೇಕಾಗಿ ಋಷಿಗಳು ಸೂತರಲ್ಲಿ ವಿನಂತಿಸಿಕೊಳ್ಳುತ್ತಾರೆ. ಒಟ್ಟಿನಲ್ಲಿ ಹೇಳಬೇಕೆಂದರೆ: 'ಮನುಷ್ಯ ತನ್ನ ಜೀವನದಲ್ಲಿ ತಿಳಿಯಲೇಬೇಕಾದ ಅತ್ಯಂತ ಮುಖ್ಯವಾದ ಸಾರಭೂತ ಸಂಗತಿ ಯಾವುದು?' ಇದು ಋಷಿಗಳು ಉಗ್ರಶ್ರವಸ್ಸಿನ ಮುಂದಿಟ್ಟ ಮೊದಲ ಪ್ರಶ್ನೆ.

ಸೂತ ಜಾನಾಸಿ ಭದ್ರಂ ತೇ ಭಗವಾನ್ ಸಾತ್ವತಾಂ ಪತಿಃ ।
ದೇವಕ್ಯಾಂ ವಸುದೇವಸ್ಯ ಜಾತೋ ಯಸ್ಯ ಚಿಕೀರ್ಷಯಾ ॥೧೨॥

ತನ್ನಃ ಶುಶ್ರೂಷಮಾಣಾನಾಮರ್ಹಸ್ಯಂಗಾನುವರ್ಣಿತುಮ್ ।
ಯಸ್ಯಾವತಾರೋ ಭೂತಾನಾಂ ಕ್ಷೇಮಾಯ ವಿಭವಾಯ ಚ ॥೧೩॥

ಈ ಹಿಂದೆ ಹೇಳಿದಂತೆ ಋಷಿಗಳ ಈ ಸಂಭಾಷಣೆ ಭಗವಂತ ಕೃಷ್ಣಾವತಾರ ಸಮಾಪ್ತಿ ಮಾಡಿದ ಕೆಲವು ವರ್ಷಗಳ ನಂತರ ನಡೆದ ಸಂಭಾಷಣೆ. ಇಲ್ಲಿ ಋಷಿಗಳು ಹೇಳುತ್ತಾರೆ: ಜಗತ್ತಿನ ಮೂಲಶಕ್ತಿಯಾದ ನಾರಾಯಣ-ಸಾತ್ವಿಕರ ಪತಿಯಾಗಿ ಯಾದವ ಕುಲದಲ್ಲಿ ಅವತರಿಸಿ ಬಂದ. ಆತ ವಸುದೇವ-ದೇವಕಿಯರ ಮಗನಾಗಿ ಏಕೆ ಹುಟ್ಟಿಬಂದ? ಇದು ಎಂತಹ ಲೀಲೆ? ಕೃಷ್ಣಾವತಾರವನ್ನು ನೋಡಿದರೆ ಅದು ಇತರ ಅವತಾರಗಳಂತೆ ಒಬ್ಬ ದುಷ್ಟನನ್ನು ಸಂಹಾರ ಮಾಡುವುದಕ್ಕೋಸ್ಕರ ಆದ ಅವತಾರವಲ್ಲ ಎನ್ನುವುದು ಸ್ಪಷ್ಟವಾಗಿ ತಿಳಿಯುತ್ತದೆ. ಏಕೆಂದರೆ ಕೃಷ್ಣಾವತಾರದಲ್ಲಿ ದುಷ್ಟ ಸಮಷ್ಟಿಯ ಸಂಹಾರವಿದೆ, ಸಮಷ್ಟಿಯಾದ ಜ್ಞಾನಕಾರ್ಯವಿದೆ. ಇಂತಹ ವಿಶೇಷತೆಯನ್ನು ಭಗವಂತ ತನ್ನ ಬೇರೆ ಅವತಾರಗಳಲ್ಲಿ ತೋರಿಸಿಲ್ಲ. ಹಾಗಾಗಿ ಇದು ಎಲ್ಲರ ಕ್ಷೇಮಕ್ಕೋಸ್ಕರ ಮತ್ತು ಸಾಧಕನ ಅಧ್ಯಾತ್ಮದ ಅಭಿವೃದ್ಧಿಗಾಗಿ ತೋರಿದ ಅವತಾರ ಎನ್ನುವುದು ಸ್ಪಷ್ಟ. ಸರ್ವಸಮರ್ಥನಾದ ಭಗವಂತ ಸಂಕಲ್ಪಮಾತ್ರದಿಂದ ಎಲ್ಲವನ್ನೂ ಮಾಡಬಲ್ಲ. ಹೀಗಿರುವಾಗ ಯಾವುದೋ ಒಂದು ಕ್ರಿಯಾವಿಶೇಷ ಮಾಡುವುದಕ್ಕೋಸ್ಕರ ಭೂಮಿಗೇಕೆ ಇಳಿದು ಬರುತ್ತಾನೆ?

ಒಟ್ಟಿನಲ್ಲಿ ಕೃಷ್ಣನ ಅವತಾರದ ಹಿನ್ನೆಲೆ ಏನು? ಅವತಾರದ ಮಹಿಮೆ ಏನು? ಅವನು ಏತಕ್ಕಾಗಿ ಭೂಮಿಗಿಳಿದು ಬಂದು ಅದ್ಭುತ ಲೀಲೆಗಳನ್ನು ತೋರಿದ? ಭಗವಂತನ ಈ ಮಹಿಮೆಯನ್ನು ನಾವು ಕಿವಿಯಾರೆ ಕೇಳಲು ಬಯಸುತ್ತೇವೆ. ಏಕೆಂದರೆ ಅಂತಹ ಭಗವಂತನ ಅವತಾರದ ಕಥೆಯನ್ನು ಕೇಳುವುದರಿಂದ ಸಿಗುವ ಆನಂದ ಅಪರಂಪಾರ. ಭಗವಂತನ ಅವತಾರದ ರಹಸ್ಯ ನಮಗೆ ಗೊತ್ತಿದೆ ಎಂದು ಯಾರೂ ಹೇಳಲು ಸಾಧ್ಯವಿಲ್ಲ. ಆದ್ದರಿಂದ ನಮಗಾಗಿ ನೀವು ಅದನ್ನು ವರ್ಣಿಸಬೇಕು ಎಂದು ಶೌನಕಾದಿಗಳು ಕೇಳಿಕೊಳ್ಳುತ್ತಾರೆ. ಇದು ಋಷಿಗಳು ಕೇಳಿದ ಎರಡನೇ ಪ್ರಶ್ನೆ.

ಆಪನ್ನಃ ಸಂಸೃತಿಂ ಘೋರಾಂ ಯನ್ನಾಮ ವಿವಶೋ ಗೃಣನ್ ।
ತತಃ ಸದ್ಯೋ ವಿಮುಚ್ಯೇತ ಯಂ ಬಿಭೇತಿ ಸ್ವಯಂ ಭವಃ ॥೧೪॥

ಸಂಸಾರ ಸಾಗರದಲ್ಲಿ ಈಜಾಡಲಾಗದೇ, ಕಂಗಾಲಾಗಿ ಒದ್ದಾಡುತ್ತಿರುವ ಸಂಸಾರಿಯನ್ನು, ಕೈ ಹಿಡಿದು ದಡ ಹಾಯಿಸುವ ಸಾಧನ 'ಭಗವಂತನ ನಾಮಸ್ಮರಣೆ' ಎನ್ನುತ್ತಾರೆ ಋಷಿಗಳು. ಈ ಶ್ಲೋಕ ಕೃಷ್ಣಾವತಾರದ ಹಿನ್ನೆಲೆಯಲ್ಲಿ ಬಂದಿರುವುದರಿಂದ, ವಿಶೇಷವಾಗಿ ಇಲ್ಲಿ 'ಭಗವಂತನ ನಾಮಸ್ಮರಣೆ' ಎಂದರೆ 'ಕೃಷ್ಣಸ್ಮರಣೆ'. ಈ ಶ್ಲೋಕದಲ್ಲಿ ಸಂಸಾರ ಸಾಗರದಲ್ಲಿರುವವರು ವಿವಶರಾಗಿ ಕೃಷ್ಣ ನಾಮವನ್ನು ಸ್ಮರಿಸಿದರೆ, ಅವರು ಸಂಸಾರ ಬಂಧದಿಂದ ಕಳಚಿಕೊಳ್ಳುತ್ತಾರೆ ಎನ್ನುವ ವಿಚಾರವನ್ನು ಹೇಳಿದ್ದಾರೆ. ಇಲ್ಲಿ 'ವಿವಶರಾಗಿ ಭಗವಂತನ ನಾಮವನ್ನು ಹೇಳುವುದು' ಎಂದರೆ-ಭಗವಂತನ ಎಚ್ಚರವಿಲ್ಲದೆ ಭಗವಂತನ ನಾಮ ಹೇಳುವುದು ಎಂದರ್ಥವಲ್ಲ. ನಿರಂತರ ಭಗವಂತನ ಸ್ಮರಣೆ, ಭಕ್ತಿ ಮತ್ತು ಉಪಾಸನೆಯಿಂದ ನಮ್ಮ ದೇಹ-ಮಾತು-ಮನಸ್ಸು ಭಗವಂತನ ಸಾಧನೆಗೆ ಶ್ರುತಿಗೂಡಿ, ತನ್ನಿಂದತಾನೇ(Automatic) ನಾವು ಭಗವಂತನ ನಾಮಸ್ಮರಣೆ ಮಾಡುವಂತಾದರೆ(ವಿವಶರಾದರೆ) ಅದು ಮೋಕ್ಷ ಸಾಧಕ. ಕೃಷ್ಣನಾಮ ಸ್ಮರಣೆಗೆ ಸಂಸಾರವೂ(ಭವ) ಹೆದರುತ್ತದೆ. ಅಷ್ಟೇ ಅಲ್ಲ, ಅಂತಹ ಜೀವ ಮೃತ್ಯುವಿನ ನಿಯಂತ್ರಣಕ್ಕೆ ಸಿಗುವುದಿಲ್ಲ.(ಭವಃ ಅಂದರೆ ಶಿವ ಕೂಡಾ ಹೌದು. ಭಗವನ್ನಾಮ ಸ್ಮರಣೆ ಮಾಡುವವರನ್ನು ಶಿವ ಸಂಹಾರ ಮಾಡುವುದಿಲ್ಲ). "ನಿರಂತರ ನಾರಾಯಣ ಸ್ಮರಣೆ ಮಾಡುವವರನ್ನು ಒಮ್ಮೆಗೆ ವಿಚಾರ ಮಾಡದೇ ನನ್ನ ಬಳಿ ಕರೆತರಬೇಡಿ. ಏಕೆಂದರೆ ಅವರು ನಾರಾಯಣನ ಸೊತ್ತು ಮತ್ತು ಅವರ ಮೇಲೆ ನನಗೆ ಹಿಡಿತವಿಲ್ಲ" ಎಂದು ಯಮದೂತರಿಗೆ ಯಮ ಹೇಳುವುದನ್ನು ವಿಷ್ಣುಪುರಾಣದಲ್ಲಿ ಹಾಗೂ ಭಾಗವತದ ಅಜಾಮಿಳನ ಕಥೆಯಲ್ಲಿ ಕಾಣುತ್ತೇವೆ. ಹೀಗಾಗಿ ಯಾರ ಬಾಯಿಯಲ್ಲಿ ನಿರಂತರ ಭಗವಂತನ ನಾಮಸ್ಮರಣೆ ಇದೆಯೋ, ಅವರು ಸಂಸಾರದಿಂದ ಬಿಡುಗಡೆಗೊಂಡು ಮುಕ್ತಿ ಮಾರ್ಗದಲ್ಲಿ ಸಾಗುತ್ತಿದ್ದಾರೆ ಎನ್ನಬಹುದು.

ಯತ್ಪಾದಸಂಶ್ರಯಾಃ ಸೂತ ಮುನಯಃ ಪ್ರಶಮಾಯನಾಃ ।
ಸದ್ಯಃ ಪುನಂತ್ಯುಪಸ್ಪೃಷ್ಟಾಃ ಸ್ವರ್ಧುನೀವಾನುಸೇವಯಾ ॥೧೫॥

ಕೋ ವಾ ಭಗವತಸ್ತಸ್ಯ ಪುಣ್ಯಶ್ಲೋಕೇಡ್ಯಕರ್ಮಣಃ ।
ಶುದ್ಧಿಕಾಮೋ ನ ಶೃಣುಯಾದ್ ಯಶಃ ಕಲಿಮಲಾಪಹಮ್ ॥೧೬॥

ಕೇವಲ ಭಗವಂತನ ನಾಮವಷ್ಟೇ ಅಲ್ಲ, ಭಗವಂತನ ಭಕ್ತರ ಸೇವೆ ಕೂಡಾ ನಮ್ಮನ್ನು ಪಾವನಗೊಳಿಸುತ್ತದೆ. ಹೇಗೆ ಗಂಗೆಯಲ್ಲಿ ಸ್ನಾನ ಮಾಡುವುದರಿಂದ, ಗಂಗೆಯ ನೀರನ್ನು ಕುಡಿಯುವುದರಿಂದ ದೇಹ ಪವಿತ್ರವಾಗುತ್ತದೋ, ಹಾಗೇ ಕಾಮ-ಕ್ರೋದವನ್ನು ಗೆದ್ದು ಭಗವಂತನಲ್ಲಿ ಮನಸ್ಸನ್ನಿಟ್ಟ ಭಗವದ್ಭಕ್ತರ ಸೇವೆ ಮಾಡುವುದರಿಂದ ಜೀವನದಲ್ಲಿ ಪರಿಶುದ್ಧರಾಗಿ ಬದುಕಬಹುದು. ಪುಣ್ಯಶ್ಲೋಕನೂ, ಈಡ್ಯಕರ್ಮನೂ ಆದ ಭಗವಂತ, ಬ್ರಹ್ಮಾದಿ ಸಕಲ ದೇವತೆಗಳಿಂದ ಹಿಡಿದು ಎಲ್ಲರಿಂದ ಸ್ತುತ್ಯನಾದವನು. ಕಲಿಯುಗದಲ್ಲಿ ಅಂತಹ ಭಗವಂತನ ಲೀಲೆಗಳನ್ನು ಕೇಳುವುದರಿಂದ ನಮ್ಮೆಲ್ಲಾ ದೋಷಗಳು ಪರಿಹಾರವಾಗಿ ನಾವು ಪರಿಶುದ್ಧರಾಗಬಹುದು. ಹೀಗಾಗಿ ನಮಗೆ ತಾವು ಕೃಷ್ಣನ ಅವತಾರದ ಹಿನ್ನೆಲೆ ಮತ್ತು ಮಹಿಮೆಯನ್ನು ಹೇಳಬೇಕು ಎಂದು ಶೌನಕಾದಿಗಳು ಉಗ್ರಶ್ರವಸ್ಸರಲ್ಲಿ ಕೇಳಿಕೊಳ್ಳುತ್ತಾರೆ.

ತಸ್ಯ ಕರ್ಮಾಣ್ಯುದಾರಾಣಿ ಪರಿಗೀತಾನಿ ಸೂರಿಭಿಃ ।
ಬ್ರೂಹಿ ನಃ ಶ್ರದ್ದಧಾನಾನಾಂ ಲೀಲಯಾ ದಧತಃ ಕಲಾಃ ॥೧೭ ॥

ಮುಂದುವರಿದು ಋಷಿಗಳು ಹೇಳುತ್ತಾರೆ: "ಕೇವಲ ಅವತಾರದ ಹಿನ್ನೆಲೆಯಷ್ಟೇ ಅಲ್ಲ, ಕೃಷ್ಣಾವತಾರದಲ್ಲಿ ಭಗವಂತ ತೋರಿದ ಎಲ್ಲಾ ಅಪೂರ್ವ ಲೀಲೆಗಳನ್ನೂ ವಿವರವಾಗಿ ಹೇಳಬೇಕು. ಇತರರು ಮಾಡಲು ಅಸಾಧ್ಯವಾದ, ಜ್ಞಾನಿಗಳು ಸದಾ ಸ್ತೋತ್ರ ಮಾಡುವ, ಮಹತ್ತರವಾದ ಕರ್ಮಗಳನ್ನು ಕೃಷ್ಣ ಮಾಡಿ ತೋರಿದ. ಇಂತಹ ಕೃಷ್ಣನ ಅವತಾರದ ಬಿತ್ತರವನ್ನು, ಕೃಷ್ಣನ ಅವತಾರದಲ್ಲಿ ಮಾಡಿದ ಒಂದೊಂದು ಕರ್ಮಗಳನ್ನು ನೀವು ನಮಗೆ ವಿವರಿಸಿ ಹೇಳಬೇಕು" ಎಂದು. ಇದು ಶೌನಕಾದಿಗಳ ಮೂರನೇ ಪ್ರಶ್ನೆ.

ಅಥಾಖ್ಯಾಹಿ ಹರೇರ್ಧೀಮನ್ನವತಾರಕಥಾಃ ಶುಭಾಃ ।
ಲೀಲಾ ವಿದಧತಃ ಸ್ವೈರಮೀಶ್ವರಸ್ಯಾತ್ಮಮಾಯಯಾ ॥೧೮ ॥

ಭಗವಂತ ಸ್ವಂತ ಇಚ್ಛೆಯಿಂದ, ತನ್ನ ಸ್ವರೂಪಭೂತ ಜ್ಞಾನದಿಂದ, ಸ್ವರೂಪ ಸಾಮರ್ಥ್ಯದಿಂದ ತಾಳಿದ ಅನೇಕ ಅವತಾರಗಳನ್ನು ಮತ್ತು ಅವತಾರಗಳ ಮುಖೇನ ಈ ಜಗತ್ತಿನಲ್ಲಿ ತೋರಿದ ನಾನಾ ಲೀಲೆಗಳನ್ನು ನೀವು ನಮಗೆ ವಿವರಿಸಬೇಕು ಎಂದು ಋಷಿಗಳು ಕೇಳಿಕೊಳ್ಳುತ್ತಾರೆ. ಇದು ಶೌನಕಾದಿಗಳು ಕೇಳಿದ ನಾಲ್ಕನೇ ಪ್ರಶ್ನೆ.

ವಯಂ ತು ನ ವಿತೃಪ್ಯಾಮ ಉತ್ತಮಶ್ಲೋಕವಿಕ್ರಮೈಃ ।
ಯತ್ ಶೃಣ್ವತಾಂ ರಸಜ್ಞಾನಾಂ ಸ್ವಾದುಸ್ವಾದು ಪದೇಪದೇ ॥೧೯ ॥

ನಮಗೆ ಭಗವಂತನ ಮಹಿಮೆಯನ್ನು ಕೇಳಿ ಸಾಕು ಎನಿಸುವುದಿಲ್ಲ. ಅದು ಎಂದೂ ಸಾಕೆನಿಸದ ಅತ್ಯಂತ ಸವಿಯಾದ ರಸಧಾರೆ. ಹೆಜ್ಜೆಹೆಜ್ಜೆಗೂ ರಸಪಾಕವನ್ನು ಹರಿಸುವ ಈ ಜ್ಞಾನದ ರುಚಿ ನಮಗೆ ತಿಳಿದಿದೆ. ಅಂತಹ ಸ್ವಾರಸ್ಯಭರಿತ ಭಗವಂತನ ಮಹಿಮೆಯನ್ನು ನಮಗೆ ಹೇಳಬೇಕಾಗಿ ಋಷಿಗಳು ಪ್ರಾರ್ಥಿಸುತ್ತಾರೆ.

ಕೃತವಾನ್ ಕಿಲ ವೀರ್ಯಾಣಿ ಸಹ ರಾಮೇಣ ಕೇಶವಃ ।
ಅತಿಮರ್ತ್ಯಾನಿ ಭಗವಾನ್ ಗೂಢಃ ಕಪಟಮಾನುಷಃ ॥೨೦ ॥

ರಾಮ-ಲಕ್ಷ್ಮಣರೇ ಕೃಷ್ಣ-ಬಲರಾಮರಾಗಿ ಭೂಮಿಯಲ್ಲಿ ಅವತರಿಸಿದರು. ನಮಗೆ ಬಲರಾಮ-ಕೃಷ್ಣರು ಮಾಡಿದ ಕರ್ಮಗಳನ್ನು ಕೇಳಬೇಕು. ಅವರ ಸಾಹಸ-ಪರಾಕ್ರಮ; ಶತ್ರು ಸಂಹಾರದಲ್ಲಿ ಅವರು ತೋರಿದ ಶೌರ್ಯದ ವೀರಗಾಥೆಯನ್ನು ಹೇಳಿರಿ ಎಂದು ಋಷಿಗಳು ಕೇಳಿಕೊಳ್ಳುತ್ತಾರೆ. ಇದು ಅವರ ಐದನೇ ಪ್ರಶ್ನೆ. ಕೃಷ್ಣಾವತಾರದಲ್ಲಿ ಭಗವಂತ ಮನುಷ್ಯರೂಪದಲ್ಲಿದ್ದು, ಅತಿಮಾನುಷ ಲೀಲೆಗಳನ್ನು ತೋರಿದ. ಅಂತಹ ಕೃಷ್ಣನ ಪರಾಕ್ರಮದ ಕಥೆಯನ್ನು ತಿಳಿಸಬೇಕೆಂದು ಋಷಿಗಳು ಕೇಳಿಕೊಳ್ಳುತ್ತಾರೆ.

ಕಲಿಮಾಗತಮಾಜ್ಞಾಯ ಕ್ಷೇತ್ರೇಽಸ್ಮಿನ್ ವೈಷ್ಣವೇ ವಯಮ್ ।
ಆಸೀನಾ ದೀರ್ಘಸತ್ರೇಣ ಕಥಾಯಾಂ ಸಕ್ಷಣಾ ಹರೇಃ ॥೨೧ ॥

**ತ್ವಂ ನಃ ಸಂದರ್ಶಿತೋ ಧಾತ್ರಾ ದುಸ್ತರಂ ನಿಸ್ತಿತೀರ್ಷತಾಮ್ ।**
**ಕಲಿಂ ಸತ್ತ್ವಹರಂ ಪುಂಸಾಂ ಕರ್ಣಧಾರ ಇವಾರ್ಣವಮ್ ॥೨೨॥**

ಈ ಕಲಿಯುಗದಲ್ಲಿ ಭಗವಂತನ ಮಹಿಮೆ ಕೇಳುವವರಿಲ್ಲ. ಆದರೆ ಅಂತಹ ಸ್ಥಿತಿ ಬರಬಾರದು. ಕಲಿಯುಗದಲ್ಲೂ ಜನ ಜಾಗೃತರಾಗಬೇಕು ಎನ್ನುವ ಉದ್ದೇಶದಿಂದ, ನಾವು ಈ ಕ್ಷೇತ್ರದಲ್ಲಿ ಹರಿಯ ಕಥೆಯ ಶ್ರವಣ ನಡೆಯುವ ವ್ಯವಸ್ಥೆ ಮಾಡಿದ್ದೇವೆ. ಈ ಕಥಾ ಶ್ರವಣದಿಂದ ಭಗವಂತನ ಮಹಿಮೆ ಎಲ್ಲೆಡೆ ಹಬ್ಬಬೇಕು ಎನ್ನುವ ಸಂಕಲ್ಪ ನಮ್ಮದು. ನಾವು ಕೇಳಲು ಸಿದ್ದರಾಗಿ ಕುಳಿತಿದ್ದೇವೆ. ಹೇಳುವುದಕ್ಕಾಗಿ ಆ ಭಗವಂತ ನಿಮ್ಮನ್ನು ಇಲ್ಲಿಗೆ ಕಳುಹಿಸಿ ಕೊಟ್ಟಿದ್ದಾನೆ. ಇದು ಪುಣ್ಯಫಲದಿಂದ ನಮಗೊದಗಿ ಬಂದ ಭಾಗ್ಯ ಮತ್ತು ಆ ಭಗವಂತನ ಸಂಕಲ್ಪ.

ಮನುಷ್ಯರ ಸಮಸ್ತ ಸಾಮರ್ಥ್ಯವನ್ನು ನಾಶಮಾಡಿ, ನಿಸ್ತೇಜ-ನಿರ್ಲಿಪ್ತರನ್ನಾಗಿ ಮಾಡುವ ಈ ಕಲಿಯ ಪ್ರಭಾವದಿಂದ ಪಾರುಮಾಡಲು ಭಗವಂತ ನಿಮ್ಮನ್ನು ಕಳುಹಿಸಿ ಕೊಟ್ಟಿದ್ದಾನೆ. ಕಲಿಯ ಪ್ರಭಾವದ ಸಮುದ್ರದಲ್ಲಿ ಈಜಲಾಗದೆ, ಕೈಸೋತು ಮುಳುಗುವ ಪರಿಸ್ಥಿತಿಯಲ್ಲಿ ನಮ್ಮನ್ನು ಪಾರುಮಾಡಲು ಆ ಭಗವಂತ ಕಳುಹಿಸಿದ ಅಂಬಿಗ ನೀವು. ನಿಮ್ಮಿಂದ ಜ್ಞಾನಧಾರೆಯನ್ನು ನಾವು ಕೇಳಲು ಸಿದ್ದರಾಗಿ ನಿಂತಿದ್ದೇವೆ. ನೀವು ಹೇಳಬೇಕು.

**ಬ್ರೂಹಿ ಯೋಗೇಶ್ವರೇ ಕೃಷ್ಣೇ ಬ್ರಹ್ಮಣ್ಯೇ ಧರ್ಮಕರ್ಮಣಿ ।**
**ಸ್ವಾಂ ಕಾಷ್ಠಾಮಧುನೋಪೇತೇ ಧರ್ಮಃ ಕಂ ಶರಣಂ ಗತಃ ॥೨೩॥**

ಧರ್ಮಸಂಸ್ಥಾಪಕನಾಗಿ ಬಂದ ಕೃಷ್ಣ ಧರ್ಮವನ್ನು ಹೆಗಲಲ್ಲಿ ಹೊತ್ತ. ಈ ದೇಶದ ಆಡಳಿತವನ್ನು ಧರ್ಮದ ದಾರಿಯಲ್ಲಿ ನಡೆಸುವ ಪಾಂಡವರ ಕೈಯಲ್ಲಿ ಕೊಟ್ಟ. ಧರ್ಮಕ್ಕೆ ಆಶ್ರಯನಾಗಿದ್ದ ಕೃಷ್ಣ ಅವತಾರ ಸಮಾಪ್ತಿಮಾಡಿದ ಮೇಲೆ ಭೂಮಿಯಲ್ಲಿ ಧರ್ಮಕ್ಕೆ ಯಾರು ಗತಿ? ಇದು ಋಷಿಗಳ ಆರನೇ ಮತ್ತು ಕೊನೇಯ ಪ್ರಶ್ನೆ.

ಯೋಗಶಾಸ್ತ್ರವಾದ ಭಗವದ್ಗೀತೆಯನ್ನು ಎಲ್ಲಾ ಯೋಗಿಗಳಿಗೆ, ಮಹಾಯೋಗಿಯಾಗಿ ಹೇಳಿದ ಯೋಗಾಚಾರ್ಯ ಕೃಷ್ಣ. ಈ ದೇಶದ ಧರ್ಮಸಂಸ್ಥಾಪಕನಾಗಿ ಆತ ೧೦೬.೫ ವರ್ಷ ನಮಗೆ ಕಾಣಿಸಿಕೊಂಡ. ಧರ್ಮವನ್ನು ಎತ್ತಿ ಹಿಡಿದು ಸದಾ ಭಗವಂತನ ಭಕ್ತರಿಗೆ ಆಶ್ರಯನಾಗಿ ನಿಂತ ಕೃಷ್ಣ. ಈಗ ಕೃಷ್ಣ ತನ್ನ ಅವತಾರ ಸಮಾಪ್ತಿ ಮಾಡಿರುವುದರಿಂದ, ಈ ಭೂಮಿಯಲ್ಲಿ ಧರ್ಮ ಯಾರ ಆಲಂಭನದಲ್ಲಿ ನಿಂತಿದೆ? ಈ ಕಲಿಯುಗದಲ್ಲಿ ಕೃಷ್ಣನ ಪ್ರತೀಕ ಯಾವುದು? ಯಾವುದರ ಮೂಲಕ ನಾವು ಧರ್ಮವನ್ನು ತಿಳಿಯಬೇಕು? ಇದನ್ನು ನಮಗೆ ಹೇಳಿ ಎಂದು ಶೌನಕಾದಿಗಳು ಉಗ್ರಶ್ರವಸ್ಸರನ್ನು ಕೇಳಿಕೊಳ್ಳುತ್ತಾರೆ. ಈ ಎಲ್ಲಾ ಪ್ರಶ್ನೆಗಳಿಗೆ ಉಗ್ರಶ್ರವಸ್ ಕೊಡುವ ಉತ್ತರವೇ ಭಾಗವತ. ಭಾಗವತ ಹೇಗೆ ರೂಪುಗೊಂಡಿತು ಎನ್ನುವುದಕ್ಕೆ ಈ ಅಧ್ಯಾಯ ಪ್ರಸ್ತಾವನೆ.

**॥ಇತಿ ಶ್ರೀಮದ್ಭಾಗವತೇ ಮಹಾ ಪುರಾಣೇ ಪ್ರಥಮಸ್ಕಂಧೇ ಪ್ರಥಮೋಽಧ್ಯಾಯಃ॥**

ಭಾಗವತ ಮಹಾ ಪುರಾಣದ ಮೊದಲ ಸ್ಕಂಧದ ಮೊದಲನೇ ಅಧ್ಯಾಯ ಮುಗಿಯಿತು.

*******

# ದ್ವಿತೀಯೋಽಧ್ಯಾಯಃ

ಇತಿ ಸಂಪ್ರಶ್ನಸಂಪೃಷ್ಟೋ ವಿಪ್ರಾಣಾಂ ರೌಮಹರ್ಷಣಿಃ ।
ಪ್ರತಿಪೂಜ್ಯ ವಚಸ್ತೇಷಾಂ ಪ್ರವಕ್ತುಮುಪಚಕ್ರಮೇ ॥೧॥

ವಿಪ್ರರು ಹಾಕಿದ ಪ್ರಶ್ನೆಗಳನ್ನು ಕೇಳಿ ರೋಮಹರ್ಷಣರ ಮಗನಾದ ಉಗ್ರಶ್ರವಸ್ಸರಿಗೆ ಬಹಳ ಸಂತೋಷವಾಯಿತು. ಅವರು ಪ್ರಶ್ನೆ ಹಾಕಿದ ಎಲ್ಲಾ ಋಷಿಗಳನ್ನು ಅಭಿನಂದಿಸಿ ತಮ್ಮ ಪ್ರವಚನ ಆರಂಭಿಸುತ್ತಾರೆ.
ಶೌನಕಾದಿಗಳಿಗೆ ಭಾಗವತ ಪ್ರವಚನ ಮಾಡುವ ಮೊದಲು ಸೂತರು ತನ್ನ ಗುರು ಶುಕಾಚಾರ್ಯರಿಗೆ ವಂದಿಸುತ್ತಾರೆ. ಹಿಂದೆ ಹೇಳಿದಂತೆ ಭಗವಾನ್ ವೇದವ್ಯಾಸರು ಭಾಗವತವನ್ನು ಮೊದಲು ಶುಕಮುನಿಗಳಿಗೆ ಉಪದೇಶಿಸಿದರು. ಶುಕಮುನಿಗಳು ಅದನ್ನು ಪರೀಕ್ಷಿತರಾಜನಿಗೆ ಉಪದೇಶ ಮಾಡುವಾಗ ಸೂತರು ಪರೀಕ್ಷಿತ ರಾಜನೊಂದಿಗೆ ಕುಳಿತು ಕೇಳಿರುವುದರಿಂದ, ಸೂತರ ಸಾಕ್ಷಾತ್ ಗುರು ಶುಕಮುನಿಗಳು. ಹಾಗಾಗಿ ಇಲ್ಲಿ ಸೂತರು ಪ್ರವಚನ ಆರಂಭಿಸುವ ಮೊದಲು ಶುಕಮುನಿಗಳ ಸ್ತೋತ್ರ ಮಾಡುತ್ತಾರೆ.

## ಋಷಿಗಳ ಪ್ರಶ್ನೆಗೆ ಉತ್ತರಿಸುವ ಮುನ್ನ ಉಗ್ರಶ್ರವಸ್ಸರಿಂದ ಗುರುಸ್ತುತಿ

**ಸೂತ ಉವಾಚ:**

ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ ದ್ವೈಪಾಯನೋ ವಿರಹಕಾತರ ಆಜುಹಾವ ।
ಪುತ್ರೇತಿ ತನ್ಮಯತಯಾ ತರವೋಽಭಿನೇದುಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ॥೨॥

ಶುಕಮುನಿಗಳನ್ನು ಸ್ತುತಿಸುವ ಈ ಶ್ಲೋಕ ಅದ್ಭುತವಾದುದು. ಈ ಶ್ಲೋಕದ ಹಿನ್ನೆಲೆಯಲ್ಲಿ ಒಂದು ಕಥೆ ಇದೆ. ಆದರೆ ಭಾಗವತದಲ್ಲಿ ಆ ವಿವರಣೆ ಇಲ್ಲ. ಏಕೆಂದರೆ ಅದನ್ನು ಮಹಾಭಾರತದಲ್ಲಿ ವಿವರಿಸಲಾಗಿದೆ. ಮೊದಲು ನಾವು ಆ ಕಥೆಯನ್ನು ಸಂಕ್ಷಿಪ್ತವಾಗಿ ನೋಡೋಣ:
ಒಮ್ಮೆ ಶುಕಾಚಾರ್ಯರು ಪೂರ್ಣಪ್ರಮಾಣದ ವಿರಕ್ತಿ ತಳೆದು, ಆಶ್ರಮದಲ್ಲಿ ಯಾರಿಗೂ ಹೇಳದೆ, ಆಶ್ರಮ ಬಿಟ್ಟು ಹೊರಟು ಹೋಗುತ್ತಾರೆ. ವೇದವ್ಯಾಸರು ಆಶ್ರಮದಲ್ಲಿ ಶುಕಮುನಿ ಇಲ್ಲದ್ದನ್ನು ಕಂಡು ಅವರನ್ನು ಹುಡುಕುತ್ತಾ ಶುಕಾಚಾರ್ಯರು ಹೋದ ಮಾರ್ಗವಾಗಿ ಹೋಗುತ್ತಾರೆ. ಈ ರೀತಿ ವಿರಕ್ತಿ ತಳೆದು ಹೊರಟ ಶುಕಾಚಾರ್ಯರ ಮನಸ್ಥಿತಿ ಹೇಗಿತ್ತೆಂದರೆ: ಅವರು ಹೋಗುತ್ತಿದ್ದ ಮಾರ್ಗದಲ್ಲಿ ಒಂದು ಕೊಳದಲ್ಲಿ ಸ್ತ್ರೀಯರು ವಿವಸ್ತ್ರರಾಗಿ ಸ್ನಾನ ಮಾಡುತ್ತಿದ್ದರೂ, ಅವರಿಗೆ ಆ ಗೋಜೇ ಇಲ್ಲದೆ ಮುಂದೆ ನಡೆದರು ಎನ್ನುತ್ತದೆ ಭಾರತ. 'ಮೋಹದ ಸೆಳೆತವನ್ನು ಮೀರಿನಿಂತ ವ್ಯಕ್ತಿ ಶುಕ' ಎನ್ನುವುದನ್ನು ವ್ಯಾಸರು ಈ ಉದಾಹರಣೆಯಲ್ಲಿ ತೋರಿಸಿದ್ದಾರೆ.
ಈ ಮೇಲಿನ ಶ್ಲೋಕದಲ್ಲಿ ಶುಕಾಚಾರ್ಯರು ಎಲ್ಲವನ್ನೂ ತ್ಯಾಗ ಮಾಡಿ ಹೋದಾಗ, ವ್ಯಾಸರು ಪುತ್ರ ಮೋಹದಿಂದ ಅವರನ್ನು ಹಿಂಬಾಲಿಸಿ ಹೋದರು ಎನ್ನುವಂತೆ ವಿವರಣೆ ಇದೆ. ಏಕೆ ಈ ರೀತಿ ಎಂದು ನೀವು ಪ್ರಶ್ನಿಸಬಹುದು. ಇದರ ಹಿಂದೆ ಒಂದು ಸ್ವಾರಸ್ಯಕರವಾದ ಭಗವಂತನ ಲೀಲೆ ಅಡಗಿದೆ. ವೇದವ್ಯಾಸರು ತಪಸ್ಸನ್ನಾಚರಿಸಿ ಹುಟ್ಟಿದ ಮಗ ಶುಕ. ಈತ ಶಿವನ ಅವತಾರ. ಅದೇ ರೀತಿ ಮಹಾಭಾರತದಲ್ಲಿ ಬರುವ ಅಶ್ವತ್ಥಾಮ ಕೂಡಾ ಸಾಕ್ಷಾತ್ ಶಿವನ ಅವತಾರ.

ಮಹಾಭಾರತ ಯುದ್ಧದ ಕೊನೆಯಲ್ಲಿ ಪಾಂಡವರ ವಂಶ ನಿರ್ವಂಶವಾಗಬೇಕೆಂದು ತೊಡೆ ಮುರಿದು ಬಿದ್ದ ದುರ್ಯೋಧನ ಬಯಸಿದಾಗ, ಅಶ್ವತ್ಥಾಮ ದ್ರೌಪದಿಯ ಐದು ಮಂದಿ ಮಕ್ಕಳ [ಪ್ರತಿವಿಂಧ್ಯ (ಯುಧಿಷ್ಠಿರ ಪುತ್ರ); ಶೃತಸೋಮ (ಭೀಮ ಪುತ್ರ); ಶೃತಕೀರ್ತಿ (ಅರ್ಜುನ ಪುತ್ರ); ಶತಾನೀಕ (ನಕುಲ ಪುತ್ರ); ಶೃತಕರ್ಮಾ (ಸಹದೇವ ಪುತ್ರ)] ತಲೆಕಡಿದು ಹತ್ಯೆಮಾಡಿ, "ಪಾಂಡವರ ಸಂತತಿಯನ್ನು ನಿರ್ವಂಶ ಮಾಡಿದೆ" ಎಂದು ದುರ್ಯೋಧನನಿಗೆ ಹೇಳುತ್ತಾನೆ. ಆಗ ಪಾತಕಿ ದುರ್ಯೋಧನ ಅಷ್ಟಕ್ಕೇ ಸಮಾಧಾನ ತಾಳದೆ, ಮಸಣದ ಮಣ್ಣಿನಿಂದ ಅಶ್ವತ್ಥಾಮನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ಪಟ್ಟಾಭಿಷೇಕ ಮಾಡಿ ಹೇಳುತ್ತಾನೆ: "ನೀನು ನಿಯೋಗ ಪದ್ಧತಿಯಲ್ಲಿ ನನ್ನ ಪತ್ನಿಯಲ್ಲಿ ಸಂತಾನ ಪಡೆಯಬೇಕು ಮತ್ತು ಆತ ಮುಂದೆ ಈ ದೇಶವನ್ನು ಆಳಬೇಕು" ಎಂದು. ಆದರೆ ಈ ಸಮಯದಲ್ಲಿ ಪಾಂಡವರ ಒಂದು ಸಂತಾನ ಮಾತ್ರ ಸುರಕ್ಷಿತವಾಗಿ ಉತ್ತರೆಯ ಗರ್ಭದಲ್ಲಿ ಬೆಳೆಯುತ್ತಿತ್ತು. ಇದಕ್ಕಾಗಿ ಅಶ್ವತ್ಥಾಮ ಉತ್ತರೆಯ ಗರ್ಭದಲ್ಲಿ ಬೆಳೆಯುತ್ತಿದ್ದ ಮಗುವನ್ನು ಹತ್ಯೆಗಯ್ಯಲು ಬ್ರಹ್ಮಾಸ್ತ್ರ ಪ್ರಯೋಗಿಸುತ್ತಾನೆ. ಉತ್ತರೆಗೆ ಪ್ರಸವವಾದಾಗ ಮಗು ಉಸಿರಾಡುತ್ತಿರಲಿಲ್ಲ. ಆದರೆ ಮಗುವನ್ನು ಕೃಷ್ಣ ಕೈಗೆತ್ತಿಕೊಂಡಾಗ ಮಗು ಕಣ್ತೆರೆಯುತ್ತದೆ. ಈ ಮಗುವೇ ಪಾಂಡವರ ನಂತರ ಮುಂದೆ ಈ ದೇಶದ ಆಡಳಿತ ಚುಕ್ಕಾಣಿ ಹಿಡಿದ ಪರೀಕ್ಷಿತ ರಾಜ.[ಈ ಕಥೆಯನ್ನು ವಿವರವಾಗಿ ಮುಂದಿನ ಅಧ್ಯಾಯಗಳಲ್ಲಿ ಕಾಣಬಹುದು] ಈ ರೀತಿ ಶಿವಶಕ್ತಿಯ 'ಅಶ್ವತ್ಥಾಮ' ರೂಪದಲ್ಲಾದ ತಪ್ಪನ್ನು, ಶಿವಶಕ್ತಿಯಿಂದಲೇ ಪರಿಮಾರ್ಜನ ಮಾಡುವುದಕ್ಕಾಗಿ, ಶಿವನೇ ಶುಕಮುನಿಯಾಗಿ, ವೇದವ್ಯಾಸರಲ್ಲಿ ಜನಿಸಿ, ವ್ಯಾಸರಿಂದ ಭಾಗವತ ಉಪದೇಶ ಪಡೆದು, ಅದನ್ನು ಪರೀಕ್ಷಿತ ರಾಜನಿಗೆ ಉಪದೇಶ ಮಾಡಿದ. ಇದು ದೇವ-ದೇವತೆಯರ ಲೀಲಾ ಪ್ರಸಂಗ. ಈ ಹಿನ್ನೆಲೆಯಲ್ಲಿ ನಾವು ಮೇಲಿನ ಶ್ಲೋಕಾರ್ಥವನ್ನು ನೋಡಬೇಕು.

ಶುಕಾಚಾರ್ಯರು ಸರ್ವಸ್ವವನ್ನೂ ತ್ಯಾಗಮಾಡಿ, ದೇಹದ ಅಭಿಮಾನವನ್ನೂ ಬಿಟ್ಟು, ದೇಹವಿದೆ ಎನ್ನುವ ಪರಿವೆಯೂ ಇಲ್ಲದೆ(ಅನುಪೇತಂ), ಆಶ್ರಮ ಬಿಟ್ಟು ಹೊರಟುಹೋದ ವಿಷಯ ದ್ವೈಪಾಯನ(ವ್ಯಾಸ)ರಿಗೆ ತಲುಪಿದಾಗ, ಅವರು ವಿರಹ ಕಾತರರಾದವರಂತೆ ಪುತ್ರನನ್ನು ಕರೆಯುತ್ತಾ ಹೊರಟರಂತೆ. ಅವರು ತನ್ನ ಪುತ್ರನನ್ನು ಕೂಗಿದಾಗ ಕಾಡಿನಲ್ಲಿನ ಮರಗಳೂ ಕೂಡಾ ಆ ಕೂಗಿಗೆ ಓಗೊಟ್ಟಂತೆ ಪ್ರತಿಧ್ವನಿಸಿದವಂತೆ. ಇಲ್ಲಿ ಸೂತರು "ಯಾರಿಗಾಗಿ ವೇದವ್ಯಾಸರು 'ಪುತ್ರಾ' ಎಂದು ಹುಡುಕಾಡಿದರೋ, ಅವರಿಗೆ ನಮಸ್ಕಾರ" ಎಂದಿದ್ದಾರೆ.

ಶಿವ ನಮ್ಮ ಮನಸ್ಸಿನ ಅಭಿಮಾನಿ. ಆತ ಅಹಂಕಾರತತ್ತ್ವವಾಗಿ(Awareness of self) ಪ್ರತಿಯೊಬ್ಬರ ಹೃದಯದಲ್ಲಿ ನೆಲೆಸಿದ್ದಾನೆ. ಅದಕ್ಕಾಗಿ ಶಿವನಿಗೆ ನಮಸ್ಕಾರ ಮಾಡುವಾಗ ಅಜ್ಞಾನದ ಗಂಟನ್ನು ಬಿಚ್ಚಿ, ನನಗೆ ಭಗವಂತನ ಅರಿವು ಬರುವಂತೆ ಮಾಡು ಎಂದು ಪ್ರಾರ್ಥಿಸುತ್ತೇವೆ. ಹಾಗಾಗಿ ಇಲ್ಲಿ ಸೂತರು "ಶುಕಾಚಾರ್ಯರು ನನ್ನೊಳಗೆ ನಿಂತು ಭಾಗವತ ನುಡಿಸಲಿ" ಎಂದು ಪ್ರಾರ್ಥಿಸಿದ್ದಾರೆ.

ಆಶ್ರಮ ಬಿಟ್ಟು ತೆರಳಿದ ಶುಕಮುನಿಗಳನ್ನು ಮರಳಿ ಆಶ್ರಮಕ್ಕೆ ಕರೆತಂದ ವೇದವ್ಯಾಸರು: "ನೀನು ವೈರಾಗ್ಯ ತಾಳುವ ಮೊದಲು, ವೈರಾಗ್ಯ ಅಂದರೇನು ಎನ್ನುವುದನ್ನು ತಿಳಿಯಬೇಕು. ಅದನ್ನು ಮಿಥಿಲೆಯ ರಾಜನಾದ ಜನಕನಿಂದ ತಿಳಿದುಕೊಂಡು ಬಾ" ಎಂದು ಅವರನ್ನು ಮಿಥಿಲೆಗೆ ಕಳುಹಿಸಿ ಕೊಡುತ್ತಾರೆ. ಮಿಥಿಲೆಗೆ ಬಂದ ಶುಕಮುನಿಗಳಿಗೆ ತಕ್ಷಣ ರಾಜ ದರ್ಶನ ನೀಡುವುದಿಲ್ಲ. ಅವರಿಗೆ ಅರಮನೆಯ ಉದ್ಯಾನದಲ್ಲಿ ಇರುವಂತೆ ಸೂಚಿಸಲಾಗುತ್ತದೆ. ಅಲ್ಲಿ ಅವರ ಚಾಕರಿಗಾಗಿ ಭೋಗ ವಸ್ತುಗಳ ಜೊತೆಗೆ ಅತ್ಯಂತ ಸುಂದರ ತರುಣಿಯರನ್ನು ರಾಜ ನೇಮಿಸುತ್ತಾನೆ. ಇದು ಒಂದು ರೀತಿಯ ಪರೀಕ್ಷೆ. ಕಾಯಿಸಿರುವುದರಿಂದಾಗಲೀ ಅಥವಾ ಸುಂದರಿಯರ ಚಾಕರಿಯಿಂದಾಗಲಿ ಶುಕ ಮುನಿಗಳ ಮನಸ್ಸು ಕದಡುವುದಿಲ್ಲ. ಅವರು ಶಾಂತಚಿತ್ತರಾಗಿ ರಾಜನಿಗಾಗಿ ಕಾಯುತ್ತಾರೆ. ಹಲವು ದಿನಗಳ ನಂತರ ರಾಜ ಶುಕರನ್ನು ಭೇಟಿ ಮಾಡಿದ ಮತ್ತು ಹೇಳಿದ: "ವೈರಾಗ್ಯ ಎಂದರೆ ಎಲ್ಲವನ್ನೂ ಬಿಟ್ಟು ಹೋಗುವುದಲ್ಲ, ಎಲ್ಲದರ

ಜೊತೆಗಿದ್ದು, ಯಾವುದನ್ನೂ ಅಂಟಿಸಿಕೊಳ್ಳದೇ ಬದುಕುವುದು" ಎಂದು. ಮಿಥಿಲೆಯಿಂದ ಮರಳಿಬಂದ ಶುಕಾಚಾರ್ಯರನ್ನು ಮತ್ತೆ ಪ್ರವೃತ್ತಿಗೆ ಎಳೆದು, ಪ್ರವೃತ್ತಿಯಲ್ಲಿ ನಿವೃತ್ತಿಯ ಬೀಜವನ್ನು ನೋಡು ಎಂದು ಹೇಳಿ, ವೇದವ್ಯಾಸರು ಅವರಿಗೆ ಭಾಗವತ ಉಪದೇಶ ಮಾಡುತ್ತಾರೆ. ಆನಂತರ ಶುಕಾಚಾರ್ಯರು ಭಾಗವತವನ್ನು ಪರೀಕ್ಷಿತರಾಜನಿಗೆ ಉಪದೇಶ ಮಾಡುತ್ತಾರೆ. ಇಲ್ಲಿ "ಇಂತಹ ಶುಕಾಚಾರ್ಯರಿಗೆ ನಮಸ್ಕಾರ" ಎಂದು ಉಗ್ರಶ್ರವಸ್ಸರು ಸ್ತೋತ್ರ ಮಾಡಿದ್ದಾರೆ.

**ಯಃ ಸ್ವಾನುಭಾವಮಖಿಲಶ್ರುತಿಸಾರಮೇಕಮಧ್ಯಾತ್ಮದೀಪಮತಿತೀರ್ಷತಾಂ ತಮೋಽನ್ಧಮ್ ।**
**ಸಂಸಾರಿಣಾಂ ಕರುಣಯಾಽಽಹ ಪುರಾಣಗುಹ್ಯಂ ತಂ ವ್ಯಾಸಸೂನುಮುಪಯಾಮಿ ಗುರುಂ ಮುನೀನಾಂ॥೩॥**

ಸೂತರು ಶುಕಾಚಾರ್ಯರನ್ನು ಸ್ತುತಿಸುತ್ತಾ ಹೇಳುತ್ತಾರೆ: "ಭಾಗವತ ರಹಸ್ಯವನ್ನು ಬಿತ್ತರಿಸುವುದಕ್ಕಾಗಿ ಗುರುಗಳಾಗಿ ನನ್ನೊಳಗೆ ಸನ್ನಿಹಿತರಾಗಿ" ಎಂದು. ಶಿವನ ಅವತಾರಿಯಾದ ಶುಕಾಚಾರ್ಯರು ಮುನಿಗಳಿಗೆಲ್ಲರಿಗೂ ಮುನಿ. ನಮಗೆ ತಿಳಿದಂತೆ ಋಷಿಗಳಲ್ಲಿ ಭೃಗು ಶ್ರೇಷ್ಠ. ಅವರಿಗಿಂತ ಎತ್ತರದಲ್ಲಿ ದೇವರ್ಷಿ ನಾರದರಿದ್ದಾರೆ. ನಾರದರಿಗಿಂತಲೂ ಮೇಲೆ ಸನತ್ಕುಮಾರ. ಆದರೆ ಶಿವ ಸನತ್ಕುಮಾರರ ತಂದೆ. ಹಾಗಾಗಿ "ಭಗವಂತನ ತತ್ತ್ವರಹಸ್ಯವನ್ನು ಬೆಳಗಿಸಿದ ಸಾಕ್ಷಾತ್ ಶಿವನ ಅವತಾರಿಯಾದ ಶುಕಾಚಾರ್ಯರಿಗೆ ನಾನು ಶರಣಾಗುತ್ತೇನೆ" ಎಂದಿದ್ದಾರೆ ಸೂತರು.
ಈ ಶ್ಲೋಕವನ್ನು ಭಾಗವತ ಪುರಾಣ ಪರ ಅರ್ಥ ಮಾಡುತ್ತಾರೆ. ಆದರೆ ಇಲ್ಲಿ ಪ್ರಾರಂಭದಲ್ಲಿ ಬಳಸಿದ 'ಸ್ವಾನುಭಾವ' ಎನ್ನುವ ವಿಶೇಷಣ ಸ್ಪಷ್ಟವಾಗಿ ಭಗವಂತನನ್ನು ಹೇಳುವುದರಿಂದ, ಈ ಶ್ಲೋಕವನ್ನು ನಾವು ಭಗವಂತನ ಪರ ಅರ್ಥ ಮಾಡಬೇಕು. ಸ್ವರೂಪಭೂತವಾದ ಅನುಭಾವ ಉಳ್ಳವನು ಸ್ವಾನುಭಾವಃ. 'ಅನುಭಾವ' ಅಂದರೆ ತಳಸ್ಪರ್ಶಿಯಾದ, ಕರಾರುವಕ್ಕಾದ ಅರಿವು. ಅಂತಹ 'ಅರ್ಥೇಷು ಅಭಿಜ್ಞಃ' ಭಗವಂತ 'ಸ್ವಾನುಭಾವಃ'. ಎಲ್ಲಕ್ಕೂ ಕಾರಣಭೂತನಾಗಿ ಸಂಸಾರದ ಕತ್ತಲನ್ನು ಕಳೆದು ಮೋಕ್ಷಮಾರ್ಗ ತೋರುವವ ಆ ಭಗವಂತ. ಭಗವಂತನ ಸನ್ನಿಧಿಯಲ್ಲಿ ಅನಂತಕಾಲ ನೆಲೆಸಬೇಕು ಎನ್ನುವ ಸಾಧಕರಿಗೆ ಭಗವಂತ ಬೆಳಕುಗಳ ಬೆಳಕು. ನಮ್ಮ ಶರೀರದೊಳಗೆ, ನಮ್ಮ ಮನಸ್ಸಿನಲ್ಲಿ, ನಮ್ಮ ಜೀವಸ್ವರೂಪದಲ್ಲಿರುವ ಜ್ಯೋತಿ ಆ ಭಗವಂತ. ಇಂತಹ ಭಗವಂತ ಅತ್ಯಂತ ಪುರಾತನ ಮತ್ತು ನಿಗೂಢ. "ಭಾಗವತ ಪುರಾಣದಲ್ಲಿ ಮೇಲ್ನೋಟಕ್ಕೆ ಎದ್ದುಕಾಣದೆ, ಗೂಢವಾಗಿದ್ದು, ಸರಸ್ವತಿ ನದಿಯಂತೆ ಅಂತರ್ಗತನಾಗಿ, ಗುಪ್ತವಾಹಿನಿಯಾಗಿ ಹರಿದ ಇಂತಹ ಭಗವಂತನ ಮಹಿಮೆಯನ್ನು ಎಲ್ಲರಿಗೂ ತಿಳಿಯುವಂತೆ ಬಿತ್ತರಿಸಿದ, ವ್ಯಾಸಪುತ್ರರಾದ ಶುಕಾಚಾರ್ಯರಿಗೆ ನಾನು ಶರಣಾಗುತ್ತೇನೆ" ಎಂದಿದ್ದಾರೆ ಸೂತರು. ಇದು ಗ್ರಂಥ ಪ್ರಾರಂಭದಲ್ಲಿನ ಗುರುಸ್ತುತಿ.

## ಋಷಿಗಳ ಪ್ರಶ್ನೆಗೆ ಉತ್ತರಿಸುವ ಮುನ್ನ ಉಗ್ರಶ್ರವಸ್ಸರಿಂದ ಷಣ್ಣಮಸ್ಕಾರ

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಗ್ರಂಥಮುದೀರಯೇ ॥೪॥**

ಯಾವುದೇ ಒಂದು ಗ್ರಂಥ ಪ್ರಾರಂಭ ಮಾಡುವುದಕ್ಕೆ ಮೊದಲು ನಾವು ಮಾಡಬೇಕಾದ ನಮಸ್ಕಾರವೇ ಈ ಷಣ್ಣಮಸ್ಕಾರ. ಇಲ್ಲಿ ನಾರಾಯಣನಿಗೆ, ನರರಿಗೆ, ನರೋತ್ತಮನಿಗೆ, ದೇವಿಗೆ, ಸರಸ್ವತಿಗೆ ಮತ್ತು ವ್ಯಾಸರಿಗೆ

ನಮಸ್ಕಾರ ಎಂದಿದ್ದಾರೆ ಸೂತರು. ಮೊಟ್ಟಮೊದಲು ನಾರಾಯಣನಿಗೆ ನಮಸ್ಕಾರ ಎಂದಿದ್ದಾರೆ. ಏಕೆಂದರೆ ಸರ್ವೋತ್ತಮ ತತ್ತ್ವ ನಾರಾಯಣ ಭಾಗವತದ ಪ್ರತಿಪಾದ್ಯ. ಶಾಸ್ತ್ರಕಾರರು ಹೇಳುವಂತೆ:

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದೌ ಅಂತ್ಯಾಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥**

ಭಗವಂತ ಸರ್ವವೇದ, ಸರ್ವಪುರಾಣ ಮತ್ತು ಸರ್ವಇತಿಹಾಸಗಳಿಂದ ವಾಚ್ಯನಾಗಿರುವ ಸರ್ವಶ್ರೇಷ್ಠತತ್ತ್ವ. ಅದಕ್ಕಾಗಿ ಆತನಿಗೆ ಮೊದಲು ನಮಸ್ಕಾರ. ಇನ್ನು ಭಗವಂತನತ್ತ ಸಾಗಲು ಎರಡು ಪ್ರಮುಖ ಶಕ್ತಿಗಳ ಮಾರ್ಗದರ್ಶನ ಬೇಕು. ಆ ಶಕ್ತಿಗಳೇ ನರ ಮತ್ತು ನರೋತ್ತಮ. ನರ ಎಂದರೆ ಗರುಡ-ಶೇಷ-ರುದ್ರರು. ನರೋತ್ತಮ ಎಂದರೆ ಬ್ರಹ್ಮ-ವಾಯು. ಇಲ್ಲಿ ಈ ರೀತಿ ಪ್ರಾರ್ಥನೆ ಮಾಡಲು ಒಂದು ವಿಶೇಷ ಕಾರಣವಿದೆ. ಉಪನಿಷತ್ತಿನಲ್ಲಿ ಹೇಳುವಂತೆ: ನಮ್ಮ ದೇಹದಲ್ಲಿ ಪ್ರಮುಖವಾಗಿ ನಾಲ್ಕು ದೇವತಾ ಶಕ್ತಿಗಳು ನಿರಂತರ ಕಾರ್ಯ ನಿರ್ವಹಿಸುತ್ತಿರುತ್ತವೆ. ಅವುಗಳೆಂದರೆ ೧. ಶರೀರಪುರುಷ, ೨. ಛಂದಃಪುರುಷ, ೩. ವೇದಪುರುಷ ಮತ್ತು ೪. ಸಂವತ್ಸರಪುರುಷ. ಈ ದೇಹ ನಿಂತು ನಡೆದಾಡಬೇಕಾದರೆ ದೇಹದಲ್ಲಿ ಶರೀರಪುರುಷನಾದ ಶಿವಶಕ್ತಿ ಬೇಕು. ಮನಸ್ಸು ಯೋಚಿಸಿದ್ದನ್ನು ಸ್ಪಂದನ, ಪರಾಶರ, ಪಶ್ಯಂತಿ, ಮದ್ಯಮ ಮತ್ತು ವೈಖರಿ ರೂಪದಲ್ಲಿ ವಾಕ್ ಶಕ್ತಿ ಯಾಗಿ ಹೊರಹೊಮ್ಮಲು ಛಂದಃಪುರುಷನಾದ ಶೇಷ ಕಾರಣ. ಮನೋಮಯ ಕೋಶದಲ್ಲಿದ್ದು, ವೇದಾಂತದ ಚಿಂತನೆ, ಮನಸ್ಸಿನಲ್ಲಿ ಮನನ ಶಕ್ತಿ ಕೊಡತಕ್ಕವ ವೇದಪುರುಷ ಗರುಡ. ವೇದಪುರುಷ ನಮಗೆ ಅಪೂರ್ವವಾದ ವೈದಿಕ ವಾಙ್ಮಯ ಶಕ್ತಿ ಪ್ರಾಪ್ತವಾಗುವಂತೆ ಮಾಡುತ್ತಾನೆ. ಜೀವದ ಯೋಗ್ಯತೆಯನ್ನು, ಇಡೀ ಜೀವದ ಸ್ವರೂಪವನ್ನು ನಿಯಂತ್ರಣ ಮಾಡುವವ ಜೀವಕಲಾಭಿಮಾನಿ ಚತುರ್ಮುಖಬ್ರಹ್ಮ, ಈತ ಸಂವತ್ಸರಪುರುಷ. ['ಸಂ-ವತ್ಸ-ರ'- ಅಂದರೆ ಚೆನ್ನಾಗಿ ಮಕ್ಕಳನ್ನು ಸಾಕುವ ಪಿತಾಮಹ]. ಬ್ರಹ್ಮ-ವಾಯು ಜೀವನನ್ನು ಮೇಲಕ್ಕೆತ್ತಿ ಸಾಧನೆಯ ಹಾದಿಯಲ್ಲಿ ತೊಡಗಿಸುತ್ತಾರೆ. ಹೀಗೆ ಈ ಪಂಚದೇವತೆಗಳು ಭಗವಂತನ ನಂತರ ದೇಹದಲ್ಲಿರುವ ಪ್ರಮುಖ ಅಧಿದೇವತೆಗಳು. ಇಲ್ಲಿ ಸೂತರು ಈ ಪಂಚ ದೇವತೆಗಳಿಗೆ, ಸಮಸ್ತ ವೇದಮಾನಿನಿಯಾದ ಲಕ್ಷ್ಮಿಗೆ, ವಾಗ್ದೇವತೆ ಸರಸ್ವತಿ-ಭಾರತೀಯರಿಗೆ ನಮಸ್ಕರಿಸಿ, ನಂತರ ಪುನಃ ಶಾಸ್ತ್ರವನ್ನು ಕೊಟ್ಟ ಭಗವಂತನ ಅವತಾರವಾದ ವೇದವ್ಯಾಸರಿಗೆ ನಮಸ್ಕರಿಸಿ, ಋಷಿಗಳ ಪ್ರಶ್ನೆಗೆ ಉತ್ತರಿಸಲು ಪ್ರಾರಂಭಿಸುತ್ತಾರೆ.

## ಶೌನಕಾದಿಗಳ ಪ್ರಶ್ನೆಗೆ ಉಗ್ರಶ್ರವಸ್ಸರು ನೀಡಿದ ಉತ್ತರ

## ಸರ್ವಶಾಸ್ತ್ರಗಳ ಸಾರ

**ಮುನಯಃ ಸಾಧು ಪೃಷ್ಟೋಽಹಂ ಭವದ್ಭಿರ್ಲೋಕಮಂಗಳಮ್ ।**
**ಯತ್ಕೃತಃ ಕೃಷ್ಣಸಂಪ್ರಶ್ನೋ ಯೇನಾತ್ಮಾಽಽಶು ಪ್ರಸೀದತಿ ॥೫॥**

**ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರಧೋಕ್ಷಜೇ ।**
**ಅಹೈತುಕ್ಯಪ್ರತಿಹತಾ ಯಯಾಽಽತ್ಮಾಽಽಶು ಪ್ರಸೀದತಿ ॥೬॥**

ಜ್ಞಾನಿಗಳಿಗೆ ಹೇಳಬೇಕು ಎನ್ನುವ ತುಡಿತವಿರುವಾಗ, ಅಷ್ಟೇ ತುಡಿತವಿರುವ ಯೋಗ್ಯ ವ್ಯಕ್ತಿ ಅದೇ ವಿಷಯವನ್ನು ಪ್ರಶ್ನೆಯಾಗಿ ಕೇಳಿದರೆ ಆಗುವ ಆನಂದ ಅಪರಂಪಾರ. ದೇವರು ಮೆಚ್ಚುವ ಮಾತನ್ನು ಆಡಬೇಕು, ಆ ಮಾತಿನಿಂದ ಮನಸ್ಸು ಪ್ರಸನ್ನವಾಗಬೇಕು, ಆ ಪ್ರಸನ್ನತೆ ದೇಹದ ಮೂಲಕ ವ್ಯಕ್ತವಾಗಬೇಕು. ಇಲ್ಲಿ ಋಷಿಗಳು ಕೇಳಿದ ಪ್ರಶ್ನೆಯಿಂದ ಸಂತೋಷಪಟ್ಟು ಸೂತರು ಹೇಳುತ್ತಾರೆ: “ಎಲ್ಲಾ ಪ್ರಶ್ನೆಗಳಿಗೂ ಏಕಮಾತ್ರ ಉತ್ತರ-ಶ್ರೀಕೃಷ್ಣ” ಎಂದು.

ಜೀವನದಲ್ಲಿ ಅತ್ಯಂತ ಸಾರಭೂತವಾದುದು ಎಂದರೆ ಅದು ‘ಅಧೋಕ್ಷಜನಲ್ಲಿ ಭಕ್ತಿ’. ಇದು ಸರ್ವಶ್ರೇಷ್ಠವಾದುದು. ಯಾವ ಸಂದೇಶದಿಂದ ಭಗವಂತನಲ್ಲಿ ಅದಮ್ಯವಾದ ಭಕ್ತಿ ಅರಳುತ್ತದೋ ಅದೇ ಜೀವನದ ಸರ್ವಶ್ರೇಷ್ಠವಾದ ಸಂದೇಶ ಎಂದಿದ್ದಾರೆ ಸೂತರು. ಇಲ್ಲಿ ಭಗವಂತನನ್ನು ‘ಅಧೋಕ್ಷಜಃ’ ಎನ್ನುವ ನಾಮದಿಂದ ಸಂಬೋಧಿಸಿದ್ದಾರೆ. ಯಾರಿಗೂ ಪ್ರತ್ಯಕ್ಷ ಕಾಣದ, ಆದರೆ ಇಂದ್ರಿಯನಿಗ್ರಹ ಮಾಡಿದ ಜ್ಞಾನಿಗಳಿಗೆ ಧ್ಯಾನದಲ್ಲಿ ಅಭಿವ್ಯಕ್ತನಾಗುವ ಅವ್ಯಕ್ತತತ್ತ್ವ ಭಗವಂತ ‘ಅಧೋಕ್ಷಜಃ’.

ಮೇಲಿನ ಶ್ಲೋಕಗಳಲ್ಲಿ ಭಕ್ತಿಯ ಕುರಿತು ಹೇಳುವಾಗ ‘ಅಹೈತುಕ’ ಮತ್ತು ‘ಅಪ್ರತಿಹತಾ’ ಎನ್ನುವ ಎರಡು ವಿಶೇಷಣಗಳನ್ನು ಬಳಸಿರುವುದನ್ನು ನಾವು ಗಮನಿಸಬೇಕು. ಇದು ಭಕ್ತಿಯಲ್ಲಿ ಇರಲೇಬೇಕಾದ ಎರಡು ಪ್ರಮುಖ ಅಂಶಗಳು. ನಾವು ದೇವರಲ್ಲಿ ಭಕ್ತಿ ಮಾಡುವಾಗ ನಮ್ಮ ಭಕ್ತಿ ಅಹೈತುಕವಾಗಿರಬೇಕು. ಅಂದರೆ ಭಕ್ತಿಗೆ ಒಂದು ಹೆಳೆ(ಕಾರಣ) ಇರಬಾರದು. ಅನಿಮಿತ್ತವಾಗಿ ದೇವರಲ್ಲಿ ಸ್ನೇಹ ಬೆಳೆಸುವುದು ಅಹೈತುಕ ಭಕ್ತಿ. ಪ್ರೀತಿ ಮತ್ತು ಕಾರಣ ಒಟ್ಟಿಗಿದ್ದರೆ ಅದು ವ್ಯಾಪಾರವಾಗುತ್ತದೆ. ರಾಮಾಯಣದಲ್ಲಿ ಹೇಳುವಂತೆ: “**ನ ಕಿಂಚಿತ್ ಅಪಿ ಕುರ್ವಾಣಃ ಸೌಖ್ಯೈಃ ದುಃಖಾನಿ ಅಪೋಹತಿ । ತತ್ ತಸ್ಯ ಕಿಮ್ ಅಪಿ ದ್ರವ್ಯಂ ಯಃ ಹಿ ಯಸ್ಯ ಪ್ರಿಯಃ ಜನಃ ॥**” ನಿಜವಾದ ಪ್ರೀತಿ ಎಂದರೆ ಅದು ಹೇಗೆ ನಿಷ್ಕಾರಣವೋ, ಹಾಗೇ, ಭಗವಂತನಲ್ಲಿ ಭಕ್ತಿ ಮಾಡುವಾಗ ‘ಇಂತಹದ್ದು ಬೇಕು, ಇದು ಕೊಡು’ ಎಂದು ಕೇಳದೇ, ನಿಷ್ಕಾಮ ಸ್ನೇಹ ಬೆಳೆಸುವುದು ಅಹೈತುಕ ಭಕ್ತಿ.

ಕೆಲವೊಮ್ಮೆ ದೇವರಲ್ಲಿ ಭಕ್ತಿ ಬೆಳೆಸಿಕೊಂಡವರ ಜೀವನದಲ್ಲಿ ಯಾವುದೋ ಒಂದು ದುರ್ಘಟನೆ, ನಷ್ಟ ಸಂಭವಿಸುತ್ತದೆ. ಆಗ ಕೆಲವರು ಕುಸಿದು ಬೀಳುತ್ತಾರೆ. “ದೇವರಿದ್ದಿದ್ದರೆ ಈ ರೀತಿ ಆಗುತ್ತಿತ್ತೇ? ನಾನು ದೇವರನ್ನು ಪೂಜಿಸಿದ್ದಕ್ಕೆ ಇದು ಆತ ಕೊಟ್ಟ ಪ್ರತಿಫಲವೇ?” ಎಂದೆಲ್ಲಾ ಪ್ರಶ್ನಿಸಿಕೊಂಡು ದೇವರಲ್ಲಿ ನಂಬಿಕೆ ಕಳೆದುಕೊಳ್ಳುವವರಿದ್ದಾರೆ. ಇದು ನಿಜವಾದ ಭಕ್ತಿಯಲ್ಲ. ಜೀವನದಲ್ಲಿ ನಡೆಯುವ ಯಾವ ತಾಪತ್ರಯಗಳೂ ನಮ್ಮ ಭಕ್ತಿಗೆ ಬಾಧಕವಾಗಿ ನಿಲ್ಲಬಾರದು. ಎಷ್ಟು ಕಷ್ಟ ಬಂತೋ ಅಷ್ಟೇ ಮನಸ್ಸು ಧೃಢವಾಗಿ ಭಕ್ತಿ ಬೆಳೆಯಬೇಕು. ಎಂದೂ ನಮ್ಮ ಭಕ್ತಿಗೆ ಚ್ಯುತಿಯಾಗಬಾರದು. ಇದನ್ನು ಅಪ್ರತಿಹತಾ ಭಕ್ತಿ ಎನ್ನುತ್ತಾರೆ. ಹೀಗೆ ಯಾವುದೇ ಕಾರಣಕ್ಕೂ ತಡೆಯಾಗದ, ನಿಷ್ಕಾರಣ ಭಕ್ತಿ ಭಗವಂತನನ್ನು ಒಲಿಸುವುದಕ್ಕೆ ಮುಖ್ಯ ಸಾಧನವಾಗುತ್ತದೆ.

**ವಾಸುದೇವೇ ಭಗವತಿ ಭಕ್ತಿಯೋಗಃ ಪ್ರಯೋಜಿತಃ ।**
**ಜನಯತ್ಯಾಶು ವೈರಾಗ್ಯಂ ಜ್ಞಾನಂ ಚ ಯದಹೈತುಕಮ್ ॥೭॥**

**ಧರ್ಮಃ ಸ್ವನುಷ್ಠಿತಃ ಪುಂಸಾಂ ವಿಷ್ವಕ್ಸೇನಕಥಾಶ್ರಯಾಮ್ ।**
**ನೋತ್ಪಾದಯೇದ್ ಯದಿ ರತಿಂ ಶ್ರಮ ಏವ ಹಿ ಕೇವಲಮ್ ॥೮॥**

ಜ್ಞಾನವಿಲ್ಲದೆ ಕೇವಲ ಭಕ್ತಿ ಮಾಡಿ ಏನೂ ಉಪಯೋಗವಿಲ್ಲ. ಏಕೆಂದರೆ ತಿಳುವಳಿಕೆ ಇಲ್ಲದ ಭಕ್ತಿ ಮೂಢಭಕ್ತಿಯಾಗುವ ಅಪಾಯವಿದೆ. 'ಭಕ್ತಿ' ಎಂದರೆ ಒಬ್ಬರ ಮಹಿಮೆಯನ್ನು ತಿಳಿದು ಗೌರವಿಸುವುದು. ಮಹಿಮೆಯನ್ನು ತಿಳಿಯುವುದನ್ನೇ 'ಜ್ಞಾನ' ಎನ್ನುತ್ತಾರೆ. ಆದ್ದರಿಂದ ಜ್ಞಾನವಿಲ್ಲದೆ ಭಕ್ತಿಯೇ ಇಲ್ಲ. ಜ್ಞಾನವೆನ್ನುವುದು ಭಕ್ತಿಯ ಒಂದು ಘಟಕ. ಅದೇ ರೀತಿ ವೈರಾಗ್ಯ. ನಮಗೆ ಭಗವಂತನ ಬಗೆಗೆ ಜ್ಞಾನ ಬಂದಾಗ, ಅದು ಮಹತ್ತರವಾದ ತತ್ತ್ವ ಎನ್ನುವುದು ತಿಳಿಯುತ್ತದೆ. ಈ ಸತ್ಯ ತಿಳಿದಾಗ ನಮಗೆ ಇತರ ಲೌಕಿಕ ಸುಖದ ಮೇಲೆ ವೈರಾಗ್ಯ ಬರುತ್ತದೆ. ಹೀಗಾಗಿ ಜ್ಞಾನ-ಭಕ್ತಿ-ವೈರಾಗ್ಯ ಇವು ಒಂದನ್ನು ಬಿಟ್ಟು ಒಂದಿರಲಾರವು. ಪ್ರಾಮಾಣಿಕ ಭಕ್ತಿ ಇರುವಲ್ಲಿ ಜ್ಞಾನ ಮತ್ತು ವೈರಾಗ್ಯ ಇದ್ದೇ ಇರುತ್ತವೆ.

ನಮ್ಮ ಜ್ಞಾನ ಅದು ಹೇತುವಾಗದ ಜ್ಞಾನವಾಗಿರಬೇಕು. ತರ್ಕದ ಬಲದಿಂದ ಬರುವ ಜ್ಞಾನ ವ್ಯರ್ಥ. ಭಗವಂತ ಇದ್ದಾನೆ ಅಥವಾ ಇಲ್ಲಾ ಎಂದು ತರ್ಕ ಮಾಡುವುದನ್ನು ಬಿಟ್ಟು, ಆತನನ್ನು ಮನಸ್ಸಿನಲ್ಲಿ ಮನನಮಾಡಿ ಒಲಿಸಿಕೊಳ್ಳಲು ಪ್ರಯತ್ನಮಾಡಬೇಕು. ಹೇತುವಾದದಿಂದ ಬರುವ ಜ್ಞಾನ ಎಂದೂ ಭಕ್ತಿಗೆ ಪೂರಕವಾಗಿರುವುದಿಲ್ಲ. ಸಾಮಾನ್ಯವಾಗಿ ತರ್ಕವಿದ್ದಲ್ಲಿ ಅಹಂಕಾರವಿರುತ್ತದೆ. ಆದರೆ ಅಹಂಕಾರವಿದ್ದೆಡೆ ಎಂದೂ ಭಕ್ತಿ ಇರಲಾರದು. ಹೀಗಾಗಿ ತರ್ಕ ಯಾವಾಗಲೂ ಭಕ್ತಿಗೆ ವಿರುದ್ಧವಾಗಿ ನಿಲ್ಲುತ್ತದೆ ಮತ್ತು ಅದು ಎಂದೂ ಭಕ್ತಿಗೆ ಪೋಷಕವಾಗಲಾರದು.

ನೀನು ಏನು ಮಾಡುವುದರಿಂದ ನಿನ್ನ ಮನಸ್ಸು ಭಗವಂತನೆಡೆಗೆ ಹರಿಯುತ್ತದೋ ಅದು ನಿನ್ನ ಧರ್ಮ. ಯಾವುದರಿಂದ ನಾವು ಭಗವಂತನಿಗೆ ಬೆನ್ನು ಹಾಕುವಂತಾಗುತ್ತದೋ ಅದೆಲ್ಲವೂ ಅಧರ್ಮ. ಯಾವುದೇ ಧರ್ಮಾಚರಣೆ ಕೂಡಾ ವಿಧಿವತ್ತಾಗಿ, ಶಾಸ್ತ್ರೀಯವಾಗಿ, ಸಮರ್ಪಕವಾಗಿ ಅನುಸಾರ ಮಾಡಿದರೂ ಕೂಡಾ, ಆ ಧರ್ಮಾನುಷ್ಠಾನದ ಹಿನ್ನೆಲೆಯಲ್ಲಿ ಭಗವಂತನ ಎಚ್ಚರ ಇಲ್ಲದಿದ್ದರೆ; ಅದು ಭಗವಂತನ ಕಥೆಯಲ್ಲಿ ಆಸಕ್ತಿ ಮೂಡಿಸದೇ ಇದ್ದರೆ; ಆಗ ಆ ಧರ್ಮಾನುಷ್ಠಾನ ಬದುಕಿಗೊಂದು ಭಾರ ಅಷ್ಟೇ. ಹೀಗಾಗಿ ನಮ್ಮೆಲ್ಲಾ ಅನುಷ್ಠಾನದ ಹಿಂದೆ ಭಗವದ್ ಪ್ರಜ್ಞೆ ಇರಲೇಬೇಕು ಎನ್ನುವ ಎಚ್ಚರ ಅತ್ಯಗತ್ಯ. ನಮ್ಮ ಅನುಷ್ಠಾನದ ಹಿಂದಿರುವ ಇನ್ನೊಂದು ಅಪಾಯವೆಂದರೆ: ನಾವು ಅನುಷ್ಠಾನ ಮಾಡಿ, ಅದರಿಂದ "ನಾನು ಅನುಷ್ಠಾನವಂತ" ಎನ್ನುವ ಅಹಂಕಾರ(**Ego**) ಬೆಳೆದರೆ ನಮ್ಮೆಲ್ಲಾ ಅನುಷ್ಠಾನವೂ ವ್ಯರ್ಥ.

ಪ್ರತಿಯೊಬ್ಬ ಸಾಧಕನ ನಡೆಯೂ ಭಿನ್ನ ಮತ್ತು ಅದು ಅವನಿಗೆ ಮೀಸಲು. ನಮ್ಮ ಮನಸ್ಸು ಭಗವಂತನೆಡೆಗೆ ಹರಿಯಲು ಸಾಧನವಾಗುವ ಪ್ರತಿಯೊಂದು ಕ್ರಿಯೆ ನಮಗೆ ಧರ್ಮ. ಯಾವುದರಿಂದ ನಾವು ಭಗವಂತನಿಂದ ದೂರ ಸರಿಯುತ್ತೇವೋ ಅದು ಕೇವಲ ಶ್ರಮ(ಒದ್ದಾಟ). ಹೇಗೆ ಭಗವಂತನ ಮಹತ್ವವನ್ನು ಅರಿತು ಭಕ್ತಿ ಮಾಡಬೇಕು ಎನ್ನುವ ಜ್ಞಾನ ಬಂದಾಗ, ಭಗವಂತನ ಪ್ರೀತಿಯ ಮುಂದೆ ಪ್ರಾಪಂಚಿಕ ಸುಖ ಕ್ಷುಲ್ಲಕ ಎನ್ನುವುದು ತಿಳಿಯುತ್ತದೆ.

ವದಂತಿ ತತ್ ತತ್ತ್ವವಿದಸ್ತತ್ತ್ವಂ ಯಜ್ಜ್ಞಾನಮದ್ವಯಮ್ ।
ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥೧೧॥

ಸತ್ತಾಮಾತ್ರಂ ತು ಯತ್ಕಿಂಚಿತ್ ಸದಸಚ್ಚಾವಿಶೇಷಣಮ್
ಉಭಾಭ್ಯಾಂ ಭಾಷ್ಯತೇ ಸಾಕ್ಷಾದ್ ಭಗವಾನ್ ಕೇವಲಃ ಸ್ಮೃತಃ ॥೧೨॥

ಎಲ್ಲಕ್ಕಿಂತಲೂ ಹಿರಿದಾದ, ಸರಿಸಾಟಿ ಇಲ್ಲದ(ಅದ್ವಯಮ್=ಸಮಾನನಿಲ್ಲದ ಮತ್ತು ಉತ್ತಮನಿಲ್ಲದ), ಸ್ವತಂತ್ರನಾದ ಭಗವಂತನನ್ನೇ ತತ್ತ್ವಜ್ಞಾನಿಗಳು 'ತತ್ತ್ವ' ಎಂದು ಕರೆಯುತ್ತಾರೆ. ಇಂತಹ ಭಗವಂತನನ್ನು ಬ್ರಹ್ಮ, ಪರಂಬ್ರಹ್ಮ, ಆತ್ಮ,

ಪರಮಾತ್ಮ, ಭಗಃ, ಭಗವಾನ್ ಇತ್ಯಾದಿ ಗುಣವಾಚಕ ನಾಮಗಳಿಂದ ಕರೆಯುತ್ತಾರೆ. ತತ್ತ್ವ ಎಂದರೆ: ಹಿಂದೆ ಹೇಗಿತ್ತೋ ಹಾಗೇ ಎಂದೆಂದೂ ಇರುವಂತಹದ್ದು. ನಿರ್ವಿಕಾರವಾಗಿ ಎಲ್ಲಾ ಕಾಲದಲ್ಲೂ ಸದಾ ಏಕರೂಪವಾಗಿರುವ ತತ್ತ್ವ ಭಗವಂತನೊಬ್ಬನೇ. ಇಂತಹ ಭಗವಂತನನ್ನು ಅರಿಯುವುದಕ್ಕಾಗಿಯೇ ಎಲ್ಲಾ ಅನುಷ್ಠಾನಗಳಿರುವುದು.

ಇಲ್ಲಿ ಭಗವಂತನನ್ನು 'ಸತ್ತಾಮಾತ್ರಮ್' ಎಂದು ಕರೆದಿದ್ದಾರೆ. ಅಂದರೆ ಅವನು ಆನಂದಸ್ವರೂಪ(ನಂದತಿ) ಮತ್ತು ನಮಗೆಲ್ಲಾ ಆನಂದ ಕೊಡುವವನು(ನಂದಯತಿ). ಇಂತಹ ಸಚ್ಚಿದಾನಂದಸ್ವರೂಪನಾದ, ಲೋಕವಿಲಕ್ಷಣನಾದ(ಯತ್ ಕಿಂಚಿತ್) ಭಗವಂತನನ್ನು ಲೋಕದ ಅನುಭವದಲ್ಲಿ ವರ್ಣಿಸಲು ಸಾಧ್ಯವಿಲ್ಲ. ನಮ್ಮ ಜ್ಞಾನ 'ಪ್ರಪಂಚವಿಶಿಷ್ಟವಾದ' ಜ್ಞಾನವಾದರೆ, ಭಗವಂತನ ಜ್ಞಾನ ತಾನೇ ತಾನಾದ 'ಅಖಂಡ-ಅರಿವು'. ಹೊರಗಿನ ಪ್ರಪಂಚ ಭಗವಂತನ ಜ್ಞಾನದಲ್ಲಿ ಗೋಚರವಾದರೂ ಸಹ, ಅದು ಅವನ ಜ್ಞಾನಕ್ಕೆ ಅಂಟಿಕೊಂಡಿಲ್ಲ. ಆತ ಯಾವ ದೋಷದ ಸ್ಪರ್ಶವೂ ಇಲ್ಲದ, ಜ್ಞಾನಾನಂದಪೂರ್ಣ ಪರತತ್ತ್ವ. ಹೀಗಾಗಿ ಎಲ್ಲಾ ಜ್ಞಾನಿಗಳೂ ಕೂಡಾ ಭಗವಂತನನ್ನು ಧ್ಯಾನದಲ್ಲಿ ಕಾಣುವ ಪ್ರಯತ್ನ ಮಾಡುತ್ತಾರೆ.

ತಚ್ಛ್ರದ್ದಧಾನಾ ಮುನಯೋ ಜ್ಞಾನವೈರಾಗ್ಯಯುಕ್ತಯಾ ।
ಪಶ್ಯಂತ್ಯಾತ್ಮನಿ ಚಾತ್ಮಾನಂ ಭಕ್ತ್ಯಾ ಶ್ರುತಿಗೃಹೀತಯಾ ॥೧೨॥

"ಆಸ್ತಿಕ್ಯಪ್ರಜ್ಞೆಯುಳ್ಳ ಋಷಿ-ಮುನಿಗಳು ಜ್ಞಾನ-ಭಕ್ತಿ-ವೈರಾಗ್ಯವನ್ನು ಬೆಳೆಸಿಕೊಂಡು ಭಗವಂತನನ್ನು ಕಂಡರು" ಎನ್ನುತ್ತಾರೆ ಸೂತರು. ಈ ಹಿಂದೆ ಹೇಳಿದಂತೆ: ಭಗವಂತನ ಅರಿವೇ ಜ್ಞಾನ; ಆ ಅರಿವಿನಿಂದ ಈ ಪ್ರಪಂಚದ ಸೀಮಿತತೆಯನ್ನು ತಿಳಿದಾಗ ಬರುವ ಮಾನಸಿಕ ಸ್ಥಿತಿಯೇ-ವೈರಾಗ್ಯ; ನಿಷ್ಕಾರಣವಾದ ಭಗವಂತನ ಬಗೆಗಿನ ಪ್ರೀತಿಯೇ-ಭಕ್ತಿ. ಇಂತಹ ಜ್ಞಾನ-ಭಕ್ತಿ-ವೈರಾಗ್ಯ ಶಾಸ್ತ್ರ ಗ್ರಹಣದಿಂದ ಬರುತ್ತದೆ. ಮೇಲಿನ ಶ್ಲೋಕದಲ್ಲಿ 'ಶ್ರುತಿಗೃಹೀತಯಾ' ಎಂದಿದ್ದಾರೆ. ಇಲ್ಲಿ 'ಶ್ರುತಿ' ಎಂದರೆ ಯಾರ ಕೃತಿಯೂ ಅಲ್ಲದ ವೇದಗಳು. ವೇದಗಳಿಗೆ ಅನುಗುಣವಾಗಿ ನಾವು ಅನುಸಂಧಾನ ಮಾಡಿದರೆ, ಅದರಿಂದ ಭಗವಂತನ ಅರಿವು ಗಟ್ಟಿಗೊಳ್ಳುತ್ತದೆ ಮತ್ತು ಮಹಾತ್ಮ್ಯಜ್ಞಾನ ಬೆಳೆಯುತ್ತದೆ. ಇಂತಹ ಜ್ಞಾನದಿಂದ ಬೆಳೆಯುವ ಭಕ್ತಿ ನಿಜವಾದ ಭಕ್ತಿ. ವೇದವನ್ನು ಗುರುಮುಖದಲ್ಲಿ ಶ್ರವಣಮಾಡಿ ಬೆಳೆದ ಜ್ಞಾನ-ಭಕ್ತಿ-ವೈರಾಗ್ಯದಿಂದ, ಋಷಿ-ಮುನಿಗಳು ಧ್ಯಾನದಲ್ಲಿ ಭಗವಂತನನ್ನು ಕಾಣುತ್ತಾರೆ.

ಇಲ್ಲಿ ಋಷಿ-ಮುನಿಗಳು "ಆ ಆತ್ಮನನ್ನು-ಈ ಆತ್ಮನಲ್ಲಿ ಕಂಡರು" ಎಂದಿದ್ದಾರೆ. ಭಗವಂತನನ್ನು ಆತ್ಮದಲ್ಲಿ ಕಾಣುವುದು ಎಂದರೆ: ಮೊದಲು ಬ್ರಹ್ಮಾಂಡದಲ್ಲಿರುವ ಭಗವಂತನನ್ನು ಪಿಂಡಾಂಡದಲ್ಲಿ(ದೇಹದಲ್ಲಿ) ಕಾಣುವುದು. ನಂತರ ಹೃದಯದಲ್ಲಿ ಭಗವಂತನನ್ನು ಕಾಣುವುದು. ಅನಂತರ ಮನಸ್ಸು-ಬುದ್ಧಿ-ಚಿತ್ತದಲ್ಲಿ ಭಗವಂತನ ದರ್ಶನ. ನಂತರ ಜೀವಕಲಾಭಿಮಾನಿ ಬ್ರಹ್ಮ-ವಾಯುವಿನಲ್ಲಿ ಮತ್ತು ಜೀವಸ್ವರೂಪದಲ್ಲಿ ಭಗವಂತನ ದರ್ಶನ.

ತಸ್ಮಾದೇಕೇನ ಮನಸಾ ಭಗವಾನ್ ಸಾತ್ವತಾಂ ಪತಿಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಧ್ಯೇಯಃ ಪೂಜ್ಯಶ್ಚ ನಿತ್ಯದಾ ॥೧೪॥

ಭಗವಂತನ ಅಂತಃದರ್ಶನಕ್ಕಾಗಿ ನಮ್ಮ ನಡೆ ಹೇಗಿರಬೇಕು ಎನ್ನುವುದನ್ನು ವಿವರಿಸುತ್ತಾ ಇಲ್ಲಿ ಹೇಳುತ್ತಾರೆ: "ಗಳಿಗೆಗೊಂದು ಬುದ್ಧಿ ಮಾಡಬೇಡ; ಸ್ಥಿರವಾದ, ಏಕಾಗ್ರ ಮನಸ್ಸಿನಿಂದ ಭಗವಂತನ ಕಡೆಗೆ ದೃಷ್ಟಿಹರಿಯಿಸು; ಒಂದೇ

ಮನಸ್ಸಿನಿಂದ ನಿರ್ಧಾರ ಮಾಡು; ಮನಸ್ಸು ಚಂಚಲವಾಗದೇ ಒಂದೇ ಕಡೆ ಸ್ಥಿರವಾಗಿ ನಿಲ್ಲುವಂತೆ ನೋಡಿಕೋ" ಎಂದು.

ಇಲ್ಲಿ ಮನಸ್ಸು ಚಂಚಲವಾಗದಿರಲಿ ಎಂದಿದ್ದಾರೆ. ಆದರೆ ಇದು ಬಹಳ ಕಷ್ಟ. ಏಕೆಂದರೆ ಮನಸ್ಸಿನ ಸ್ವಭಾವವೇ ಚಂಚಲ. ಅದು ಸುಲಭವಾಗಿ ಏಕಾಗ್ರವಾಗುವುದಿಲ್ಲ. ಅದನ್ನು ಸ್ಥಿರಗೊಳಿಸಬೇಕಾದರೆ ನಾವು ಮನಸ್ಸಿನ ಒಳಪದರವಾದ ಬುದ್ಧಿಯನ್ನು ಬಳಸಿ ಅಲ್ಲಿಂದ ಚಿತ್ತಕ್ಕೆ ಮತ್ತು ಚಿತ್ತದಿಂದ ಚೇತನಕ್ಕೆ ಹೋಗಬೇಕು. ಆಗ ಮನಸ್ಸು ಏಕಾಗ್ರವಾಗುತ್ತದೆ. ಈ ಏಕಾಗ್ರತೆಯಲ್ಲಿ 'ಸಾತ್ವತಾಂಪತಿಃ' ಶ್ರೀಕೃಷ್ಣನನ್ನು ಕಾಣಬೇಕು.

ನಿರಂತರ ಭಗವಂತನ ಬಗೆಗೆ ಕೇಳಬೇಕು. ಭಗವಂತನ ಬಗೆಗೆ ಚರ್ಚಿಸಬೇಕು. ತಿಳಿದವರು ಹೇಳುವುದನ್ನು ಕೇಳಬೇಕು. ಯಾರ ಮಾತನ್ನೂ ನಿರ್ಲಕ್ಷಿಸಬಾರದು. ಕೆಲವೊಮ್ಮೆ ಜೀವನಕ್ಕೆ ಹೊಸ ತಿರುವನ್ನು ನೀಡುವ ಮಾತು ಒಂದು ಮಗುವಿನಿಂದಲೂ ಬರಬಹುದು. ಜ್ಞಾನದ ಮೊಟ್ಟೆ ಎಲ್ಲಿದೆ ಎನ್ನುವುದು ನಮಗೆ ತಿಳಿದಿಲ್ಲ. ಹಾಗಾಗಿ ನಿರಂತರ ಶ್ರವಣ-ಕೀರ್ತನ ನಡೆಯುತ್ತಿರಬೇಕು.

ಮಾತಿಗೆ ಮೊದಲು ಮೌನ ಬೇಕು. ಅದಕ್ಕಾಗಿ ಧ್ಯಾನ ಬಹಳ ಮುಖ್ಯ. ಆದರೆ ಕೇವಲ ಅಂತರಂಗ ಪ್ರಪಂಚದಲ್ಲೇ ನಿಲ್ಲದೆ, ಬಾಹ್ಯ ಕರ್ಮಾದಿಗಳನ್ನೂ ತಪ್ಪದೇ ಮಾಡಬೇಕು. ಏಕೆಂದರೆ ಇದು ಸಾಮಾಜಿಕ ಬದ್ಧತೆ. ನಮ್ಮನ್ನು ಅನುಸರಿಸುವ ಜನಾಂಗದ ಮಾರ್ಗದರ್ಶನಕ್ಕಾಗಿ ಈ ನಡೆಯೂ ಅಧ್ಯಾತ್ಮದಲ್ಲಿ ಅತ್ಯಗತ್ಯ. ಹೀಗೆ ಭಗವಂತನ ಪೂಜೆ ಬಾಹ್ಯವಾಗಿ ಮತ್ತು ಅಂತರಂಗದಲ್ಲಿ ನಿತ್ಯ ನಡೆಯಬೇಕು.

**ಶುಶ್ರೂಷೋಃ ಶ್ರದ್ದಧಾನಸ್ಯ ವಾಸುದೇವಕಥಾರತಿಃ ।**
**ಸ್ಯಾನ್ಮಹತ್ಸೇವಯಾ ವಿಪ್ರಾಃ ಪುಣ್ಯತೀರ್ಥನಿಷೇವಣಾತ್** ॥೧೭॥

ಇಂದು ಸಾಮಾನ್ಯವಾಗಿ ಭಗವಂತನಲ್ಲಿ ಶ್ರದ್ಧೆಯುಳ್ಳ ಹೆಚ್ಚಿನವರನ್ನು ಕಾಡುವ ಒಂದು ಸರ್ವೇಸಾಮಾನ್ಯ ಸಮಸ್ಯೆ ಏನೆಂದರೆ: ಶಾಸ್ತ್ರಶ್ರವಣ ಮಾಡಬೇಕು, ಭಗವಂತನ ಕುರಿತು ಕೇಳಬೇಕು ಎನ್ನುವ ಬಯಕೆ ಇರುತ್ತದೆ. ಆದರೆ ಕೇಳುವಾಗ ಆಸಕ್ತಿ ಬರುವುದಿಲ್ಲ! ಈ ರೀತಿ ಸಮಸ್ಯೆ ಇದ್ದಾಗ ಹೇಗೆ ಆಸಕ್ತಿ ಬೆಳೆಸಿಕೊಳ್ಳುವುದು ಎನ್ನುವುದು ಇಲ್ಲಿರುವ ಪ್ರಶ್ನೆ. ಇದು ಬಹಳ ಮಹತ್ವವಾದ ಪ್ರಶ್ನೆ. ಈ ಪ್ರಶ್ನೆಗೆ ಮೇಲಿನ ಶ್ಲೋಕದಲ್ಲಿ ಉತ್ತರವಿದೆ. ನಮಗೆ ತಿಳಿದಂತೆ ನಮ್ಮ ಮನಸ್ಸಿಗೆ ಸ್ವಂತ ನಿರ್ಧಾರವಿಲ್ಲ. ಅದು ನಾವು ಯಾವುದನ್ನು ತರಬೇತಿ ಮಾಡಿದೆವೋ ಅದನ್ನು ಮೆಚ್ಚಿಕೊಳ್ಳುತ್ತದೆ. ಹೀಗಾಗಿ ಮನಸ್ಸಿನಲ್ಲಿ ಆಸಕ್ತಿ ಹುಟ್ಟಿಸಬೇಕಾದರೆ ನಿರಂತರ ಶ್ರವಣ ಅಗತ್ಯ. ಕೇಳಿ-ಕೇಳಿಯೇ ಆಸಕ್ತಿ ಹುಟ್ಟಬೇಕು. ಆದರೆ ಇಲ್ಲಿ ಇನ್ನೊಂದು ಸಮಸ್ಯೆ ಇದೆ. ಕೆಲವೊಮ್ಮೆ ಕೇಳುವುದರಿಂದಲೇ ವೇದಾಂತ ಬೇಡ ಅನಿಸಬಹುದು! ಇದು ಬಹಳ ಅಪಾಯಕಾರಿ. ಅದಕ್ಕಾಗಿ ಇಲ್ಲಿ ಹೇಳುತ್ತಾರೆ: **"ಸ್ಯಾನ್ಮಹತ್ಸೇವಯಾ ವಿಪ್ರಾಃ ಪುಣ್ಯತೀರ್ಥನಿಷೇವಣಾತ್"** ಎಂದು. ಅಂದರೆ ನಮ್ಮಲ್ಲಿ ನಿರಂತರ ಆಸಕ್ತಿ ಬೆಳೆಯಲಿಕ್ಕಾಗಿ ನಾವು ಪುಣ್ಯತೀರ್ಥಗಳ ಸ್ನಾನ-ಪಾನ ಮಾಡಬೇಕು ಮತ್ತು ಮಹಾತ್ಮರಾದ ಜ್ಞಾನಿಗಳ ಸೇವೆ ಮಾಡಬೇಕು. ಈ ರೀತಿ ಮಾಡುವುದರಿಂದ ಭಗವಂತನ ಬಗೆಗೆ ಮತ್ತು ಭಗವಂತನ ಕಥೆಯ ಬಗ್ಗೆ ಆಸಕ್ತಿ, ಅಭಿರುಚಿ ಹುಟ್ಟುತ್ತದೆ.

ಇಲ್ಲಿ ತೀರ್ಥ ಎಂದರೆ ನದಿಗಳೂ ಹೌದು, ಶಾಸ್ತ್ರಗಳೂ ಹೌದು. ಅಷ್ಟೇ ಅಲ್ಲ, ದೇವಸ್ಥಾನಗಳಲ್ಲಿ ಕೊಡುವ ಪುಣ್ಯದ್ರವ ಕೂಡಾ ತೀರ್ಥ. ಪುಣ್ಯನದಿಗಳಲ್ಲಿ ಮುಳುಗಿ ಸ್ನಾನ ಮಾಡುವುದರಿಂದ ಕೇವಲ ನಮ್ಮ ಬಾಹ್ಯ ಕೊಳೆ ಮಾತ್ರ

ಹೋಗುವುದಲ್ಲ, ನಮ್ಮ ಮನಸ್ಸಿನ ಮಲೀನತೆಯನ್ನು ತೊಳೆದು ಅಲ್ಲಿ ಭಗವಂತನ ಬಗೆಗೆ ಆಸಕ್ತಿ ಹುಟ್ಟಿಸುವ ಅಪೂರ್ವ ಶಕ್ತಿ ತೀರ್ಥದಲ್ಲಿರುವ ಸಾತ್ತ್ವಿಕ ಕಂಪನದಲ್ಲಿದೆ.

ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ ।
ಹೃದ್ಯಂತಃಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ॥೧೮॥

ಭಗವಂತನ ಕೀರ್ತನ, ಕಥಾಶ್ರವಣ ಎಲ್ಲಿ ನಡೆಯುತ್ತದೋ ಅಲ್ಲಿ ಭಗವಂತನ ಸನ್ನಿಧಾನವಿರುತ್ತದೆ. ಯಾರ ಶ್ರವಣ ಕೀರ್ತನದಿಂದ ನಾವು ಪಾವನರಾಗುತ್ತೇವೋ ಅಂತಹ 'ಕೃಷ್ಣ' ಬಂದು ನಮ್ಮ ಹೃದಯದಲ್ಲಿ ನೆಲೆಸಿಬಿಡುತ್ತಾನೆ. ಸಜ್ಜನರ ಪ್ರಿಯ ಸಖನಾದ ಭಗವಂತ ನಮ್ಮೊಳಗಿದ್ದು, ನಮ್ಮೊಳಗಿನ ಕೊಳೆಯನ್ನು ಸ್ವಚ್ಛಗೊಳಿಸುತ್ತಾನೆ!

ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತಸೇವಯಾ ।
ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ॥೧೯॥

ಭಗವಂತನ ಕಥಾಶ್ರವಣ, ಕೀರ್ತನ ಮತ್ತು ಭಗವದ್ಭಕ್ತರ ಸೇವೆಯಿಂದ, ಎಲ್ಲಾ ಅಭದ್ರ-ಅಮಂಗಲಗಳೂ ತೊಳೆದುಹೋಗುತ್ತವೆ. ಭಾಗವತ ಗ್ರಂಥದ ನಿರಂತರ ಸೇವನೆಯಿಂದ ಭಗವಂತ ಹೃದಯದಲ್ಲಿ ಸನ್ನಿಹಿತನಾಗುತ್ತಾನೆ. ಇದರಿಂದಾಗಿ ನಾವು ನಮ್ಮೆಲ್ಲಾ ಕೊಳೆಗಳನ್ನು ತೊಳೆದುಕೊಳ್ಳುತ್ತೇವೆ ಮತ್ತು ಅದರಿಂದ ನೈಷ್ಠಿಕ(ಅಚಲ) ಭಕ್ತಿ ಬೆಳೆಯುತ್ತದೆ. ಮನಸ್ಸು ಅಛೇದ್ಯ-ಅಭೇದ್ಯವಾಗಿ ಭಗವಂತನಲ್ಲಿ ಸ್ಥಿರಗೊಳ್ಳುತ್ತದೆ.

ತದಾ ರಜಸ್ತಮೋಭಾವಾಃ ಕಾಮಲೋಭಾದಯಶ್ಚ ಯೇ ।
ಚೇತ ಏತೈರನಾವಿದ್ಧಂ ಸ್ಥಿತಂ ಸತ್ತ್ವೇ ಪ್ರಸೀದತಿ ॥೨೦॥

ಮನಸ್ಸು ಸ್ವಚ್ಛವಾದಾಗ ಮನಸ್ಸಿನಲ್ಲಿರುವ ರಜಸ್ಸು-ತಮಸ್ಸು ತಮ್ಮ ಸತ್ವವನ್ನು ಕಳೆದುಕೊಳ್ಳುತ್ತವೆ. ಇದರಿಂದಾಗಿ ರಜಸ್ಸು ತಮಸ್ಸಿನಿಂದಾಗಿ ಬರುವ ಮಾನಸಿಕ ವಿಕಾರಗಳಾದ ಕಾಮ-ಕ್ರೋಧ-ಲೋಭಗಳು ಮನಸ್ಸಿಗೆ ಅಂಟುವುದಿಲ್ಲ. ಮನಸ್ಸು ಸ್ಥಿರವಾಗಿ ಸತ್ತ್ವಗುಣದಲ್ಲಿ/ಭಗವಂತನಲ್ಲಿ ನೆಲೆಸಿಬಿಡುತ್ತದೆ. ನಮಗೆ ಒಮ್ಮೆ ಈ ಸತ್ತ್ವವಾದ ಬೆಳಕಿನ ಅನುಭವವಾದಾಗ, ಮುಂದೆಂದೂ ರಜಸ್ಸು-ತಮಸ್ಸಿನ ಕತ್ತಲೆ ಬೇಡವೇ ಬೇಡ ಎನಿಸುತ್ತದೆ.

ಏವಂ ಪ್ರಸನ್ನಮನಸೋ ಭಗವದ್ಭಕ್ತಿಯೋಗತಃ ।
ಭಗವತ್ತತ್ತ್ವವಿಜ್ಞಾನಂ ಮುಕ್ತಸಂಗಸ್ಯ ಜಾಯತೇ ॥೨೧॥

ಮನಸ್ಸು ಪ್ರಸನ್ನವಾದಾಗ ನಮ್ಮ ಮುಖ ಅರಳುತ್ತದೆ. ಈ ರೀತಿ ಪ್ರಸನ್ನಚಿತ್ತರಾದವರನ್ನು ನೋಡುವುದೂ ಒಂದು ಆನಂದದ ಅನುಭವ. ಪ್ರಸನ್ನವಾದ ಮನಸ್ಸಿಗೆ ಭಗವದ್ ತತ್ತ್ವದ ಅರಿವು ಉಂಟಾಗುತ್ತದೆ. ಜ್ಞಾನದಿಂದ ಭಕ್ತಿ ಮತ್ತು ಭಕ್ತಿಯಿಂದ ವಿಶಿಷ್ಠಜ್ಞಾನ. ಈ ವಿಶಿಷ್ಠಜ್ಞಾನವೇ ಭಗವಂತನ ಸಂಗ-ಸಾಧನವಾದ ಮೋಕ್ಷಮಾರ್ಗ.

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ॥೨೨॥

ಭಗವಂತನನ್ನು ನಮ್ಮ ಅಂತರಂಗದಲ್ಲಿ ಹೇಗೆ ಕಾಣಬೇಕು ಎನ್ನುವುದನ್ನು ಈ ಶ್ಲೋಕ ವಿವರಿಸುತ್ತದೆ. ಭಾಗವತದಲ್ಲಿನ ಈ ಶ್ಲೋಕ ವೇದದಲ್ಲಿಯೂ ಬಂದಿದೆ. ಮುಂಡಕ ಉಪನಿಷತ್ತಿನಲ್ಲಿ ಹೇಳುವಂತೆ:

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥೨-೨-೯॥

ವೇದದಲ್ಲಿ "ತಸ್ಮಿನ್ ದೃಷ್ಟೇ ಪರಾವರೇ" ಎಂದರೆ, ಇಲ್ಲಿ "ದೃಷ್ಟ ಏವಾತ್ಮನೀಶ್ವರೇ" ಎಂದಿದ್ದಾರೆ. ನಾವು ನಮ್ಮ ಜೀವಸ್ವರೂಪದಲ್ಲಿ ಭಗವಂತನನ್ನು ಕಾಣಬೇಕು. ನಮ್ಮೊಳಗೆ ಬಿಂಬರೂಪನಾಗಿರುವ ನಮ್ಮ ಸ್ವಾಮಿಯನ್ನು ನಾವು 'ಆತ್ಮಾ' ಎಂದು ಉಪಾಸನೆ ಮಾಡಬೇಕು. ಇದನ್ನೇ ಬ್ರಹ್ಮಸೂತ್ರದಲ್ಲಿ ಈ ರೀತಿ ಹೇಳಲಾಗಿದೆ: **"ಓಂ ಆತ್ಮೇತಿ ತೋಪಗಚ್ಛಂತಿ ಗ್ರಾಹಯಂತಿ ಚ ಓಂ ॥೩-೪೮೭ ॥"** ಎಂದು. ಶ್ರುತಿಗಳಲ್ಲಿ ಹೇಳುವಂತೆ: **"ಆತ್ಮಾ ವಾಽರೇ ದೃಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ"**. ಇಲ್ಲಿ 'ಆತ್ಮಾ' ಎಂದರೆ ನಮ್ಮೊಳಗಿದ್ದು ನಮ್ಮನ್ನು ನಿಯಮಿಸುವ ಸರ್ವಶ್ರೇಷ್ಠ-ನಮ್ಮೆಲ್ಲರ ಸ್ವಾಮಿ ಭಗವಂತ. ಜಗತ್ತಿನ ಎಲ್ಲಾ ಈಶ ಶಕ್ತಿಗಳಿಗೂ(ಬ್ರಹ್ಮಾದಿ ಸಕಲ ದೇವತೆಗಳಿಗೂ) ವರನಾದ, ಎಲ್ಲರನ್ನೂ ನಿಯಂತ್ರಿಸುವ ಪರಮೇಶ್ವರ ಭಗವಂತ ನಮ್ಮೆಲ್ಲರ ಅಂತರ್ಯಾಮಿ ಎಂದು ತಿಳಿದು ನಾವು ಉಪಾಸನೆ ಮಾಡಬೇಕು.

ಇಂತಹ ಬಿಂಬರೂಪಿ ಭಗವಂತನನ್ನು ನಾವು ನಮ್ಮ ಅಂತರಂಗದಲ್ಲಿ ಕಂಡಾಗ, ನಮ್ಮ ಹೃದಯದಲ್ಲಿನ ಅಜ್ಞಾನದ ಗಂಟು ಒಡೆದು ಹೋಗಿ, ನಮ್ಮೆಲ್ಲಾ ಸಂಶಯಗಳೂ ಪೂರ್ಣವಾಗಿ ಪರಿಹಾರವಾಗುತ್ತದೆ. ಭಗವಂತನ ಅಂತರಂಗ ದರ್ಶನದಿಂದಾಗಿ, ಪ್ರಾರಾಬ್ಧಕರ್ಮವನ್ನು ಹೊರತುಪಡಿಸಿ ಇತರ ಎಲ್ಲಾ ಕರ್ಮಗಳು ನಾಶವಾಗಿ, ಕರ್ಮದ ಲೇಪದಿಂದ ತೊಡೆದುಕೊಂಡು ಜೀವ ಭಗವಂತನಲ್ಲಿ ನೆಲೆಗೊಳ್ಳುತ್ತದೆ.

ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಸ್ತೈರ್ಯುಕ್ತಃ ಪರಃ ಪುರುಷ ಏಕ ಇಹಾಸ್ಯ ಧತ್ತೇ ।
ಸ್ಥಿತ್ಯಾದಯೇ ಹರಿವಿರಿಂಚಿಹರೇತಿ ಸಂಜ್ಞಾಃ ಶ್ರೇಯಾಂಸಿ ತತ್ರ ಖಲು ಸತ್ತ್ವತನೌ ನೃಣಾಂ ಸ್ಯುಃ॥೨೪॥

ಈ ಹಿಂದೆ 'ಉಪಾಸನೆಯಲ್ಲಿ ನಮ್ಮ ಮನಸ್ಸು ರಜಸ್ಸು-ತಮಸ್ಸನ್ನು ಮೀರಿ ಸತ್ತ್ವಗುಣದಲ್ಲೇ ನೆಲೆ ನಿಲ್ಲಬೇಕು' ಎನ್ನುವ ವಿವರಣೆಯನ್ನು ನೋಡಿದೆವು. ಅದನ್ನೇ ಇನ್ನೂ ವಿವರವಾಗಿ ಈ ಶ್ಲೋಕದಲ್ಲಿ ವಿವರಿಸಲಾಗಿದೆ. ನಮಗೆ ತಿಳಿದಿರುವಂತೆ ಈ ಪ್ರಪಂಚ ತ್ರಿಗುಣಾತ್ಮಕವಾದುದು. ಪ್ರಾಕೃತ ಪ್ರಪಂಚದಲ್ಲಿ ಸತ್ತ್ವ-ರಜಸ್ಸು-ತಮಸ್ಸು ಇವು ಒಂದನ್ನು ಬಿಟ್ಟು ಒಂದಿಲ್ಲ. ಭಗವಂತ ಈ ಮೂರು ಗುಣಗಳನ್ನೇ ಬಳಸಿ ಸೃಷ್ಟಿ-ಸ್ಥಿತಿ-ಸಂಹಾರವನ್ನು ಮಾಡುತ್ತಾನೆ. ಭಗವಂತ ಪ್ರಪಂಚ ನಿಯಮನ(ಸ್ಥಿತಿ)ವನ್ನು ಸತ್ತ್ವಗುಣವನ್ನು ಆಧಾರವಾಗಿಟ್ಟುಕೊಂಡು ಸ್ವರೂಪತಃ ವಿಷ್ಣು(ಹರಿ) ರೂಪದಲ್ಲಿ ಮಾಡಿದರೆ, ಸೃಷ್ಟಿ ಮಾಡುವಾಗ ರಜೋಗುಣವನ್ನು ಆಧಾರವಾಗಿಟ್ಟುಕೊಂಡು, ಚತುರ್ಮುಖಬ್ರಹ್ಮನ(ವಿರಂಚ)

ಅಂತರ್ಯಾಮಿಯಾಗಿ ಸೃಷ್ಟಿ ಮಾಡುತ್ತಾನೆ. ಅದೇ ರೀತಿ ಸಂಹಾರ ಕಾರ್ಯವನ್ನು ತಮೋಗುಣವನ್ನು ಆಧಾರವಾಗಿಟ್ಟುಕೊಂಡು, ಶಿವನ(ಹರನ) ಅಂತರ್ಯಾಮಿಯಾಗಿ ನಿಂತು ನಿರ್ವಹಿಸುತ್ತಾನೆ.

ಈ ಶ್ಲೋಕವನ್ನು ಮೇಲ್ನೋಟದಲ್ಲಿ ನೋಡಿದರೆ ಇಲ್ಲಿ ಹರಿ-ವಿರಿಂಚ-ಹರ ಎನ್ನುವ ಮೂರು ಸಂಜ್ಞೆಗಳನ್ನು ಒಬ್ಬನೇ ಭಗವಂತ ಧರಿಸುತ್ತಾನೆ ಎಂದು ಹೇಳಿದಂತೆ ಕಾಣುತ್ತದೆ. ಆದರೆ ಅದು ಈ ಶ್ಲೋಕದ ಒಳಾರ್ಥವಲ್ಲ. ಈ ಶ್ಲೋಕದ ಅರ್ಥವಿಶೇಷ ನೋಡುವಾಗ ನಾವು ಈ ಹಿಂದೆ ಹೇಳಿದ ಮಾತನ್ನು ನೆನಪಿಸಿಕೊಂಡು ಅದಕ್ಕನುಗುಣವಾಗಿಯೇ ಅರ್ಥಚಿಂತನೆ ಮಾಡಬೇಕು. ಈ ಹಿಂದೆ ಹೇಳಿದಂತೆ: "ವೇದ್ಯಂ ವಾಸ್ತವಮತ್ರ ವಸ್ತು ಶಿವದಂ": ಎಂದರೆ ಆಯಾ ವಸ್ತುವಿನ ಒಳಗೆ ಆಯಾ ರೂಪದಲ್ಲಿ ಅಂತರ್ಯಾಮಿಯಾಗಿ ಭಗವಂತ ನೆಲೆಸಿ ನಿಯಮಿಸುತ್ತಾನೆ. ಹಾಗಾಗಿ ಬ್ರಹ್ಮನೊಳಗೆ ಬ್ರಹ್ಮನಾಮಕನಾಗಿ, ಶಿವನೊಳಗೆ ಶಿವ ನಾಮಕನಾಗಿ ಭಗವಂತನಿದ್ದಾನೆ. ಇದನ್ನು ವಾಮನಪುರಾಣದಲ್ಲಿ ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ: **"ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ".** ಭಾಗವತದಲ್ಲೇ ಮುಂದೆ ಈ ಬಗ್ಗೆ ವಿವರಣೆ ಬರುತ್ತದೆ. ಆದ್ದರಿಂದ ಭಗವಂತ ಬ್ರಹ್ಮನೊಳಗಿದ್ದು ಬ್ರಹ್ಮನಾಮಕನಾಗಿ ಸೃಷ್ಟಿ ಮಾಡಿದರೆ, ಶಿವನೊಳಗೆ ಶಿವನಾಮಕನಾಗಿ ಸಂಹಾರ ಮಾಡುತ್ತಾನೆ ಮತ್ತು ಸ್ವರೂಪಭೂತವಾದ ವಿಷ್ಣುನಾಮಕನಾಗಿ ಪಾಲನೆ ಮಾಡುತ್ತಾನೆ.

ಈ ಜಗತ್ತು ತ್ರಿಗುಣಗಳ ಆಲಂಬನೆಯಲ್ಲೇ ನಿಂತಿದ್ದರೂ ಸಹ, ಒಬ್ಬ ಸಾಧಕ ಸಾಧನೆಯ ಹಾದಿಯಲ್ಲಿ ಸತ್ತ್ವಪ್ರದನಾಗಿ ಸಾಧನೆ ಮಾಡಿದರೆ ಮಾತ್ರ ಶ್ರೇಯಸ್ಸು. ಇದನ್ನು ಬಿಟ್ಟು ರಜಸ್ಸು-ತಮಸ್ಸಿನ ಮಾರ್ಗದಲ್ಲಿ ಸಾಗಿದರೆ ಎಂದೆಂದಿಗೂ ಉದ್ಧಾರವಿಲ್ಲ. ಹೀಗೆ ಸಾತ್ತ್ವಿಕತೆಯೇ ಸಾಧನೆಯ ಹಾದಿಯಲ್ಲಿ ಮುಖ್ಯವಾಗುತ್ತದೆ.

ಪಾರ್ಥಿವಾದ್ ದಾರುಣೋ ಧೂಮಸ್ತಸ್ಮಾದಗ್ನಿಸ್ತ್ರಯೀಮಯಃ ।
ತಮಸಸ್ತು ರಜಸ್ತಸ್ಮಾತ್ ಸತ್ತ್ವಂ ಯದ್ ಬ್ರಹ್ಮದರ್ಶನಮ್ ॥೨೪॥

ಇಲ್ಲಿ ಸತ್ತ್ವ, ರಜಸ್ಸು ಮತ್ತು ತಮಸ್ಸನ್ನು ಕ್ರಮವಾಗಿ ಬೆಂಕಿ, ಹೊಗೆ ಮತ್ತು ಕಟ್ಟಿಗೆಗೆ ಹೋಲಿಸಿದ್ದಾರೆ. ಕಟ್ಟಿಗೆ ತಮಸ್ಸಿನ ಪ್ರತೀಕ. ಅದು ಯಾವಾಗಲೂ ಅಧೋಮುಖವಾಗಿರುತ್ತದೆ. ನಂತರ ಹೊಗೆ. ಇದು ರಜಸ್ಸಿನ ಪ್ರತೀಕ. ಇದು ಕಟ್ಟಿಗೆಯಂತೆ ಕೆಳಕ್ಕೆಳೆಯದಿದ್ದರೂ ಕೂಡಾ, ಎಲ್ಲೆಂದರಲ್ಲಿ ಹಬ್ಬುತ್ತದೆ. ಕಟ್ಟಿಗೆ ಕತ್ತಲೆಯ ಪ್ರತೀಕವಾದರೆ, ಹೊಗೆ ಬೆಳಕನ್ನು ಮುಚ್ಚುವ ರಜಸ್ಸಿನ ಪ್ರತೀಕ. ಆದರೆ ಕಟ್ಟಿಗೆ ಮತ್ತು ಹೊಗೆಯಿಂದ ಹುಟ್ಟುವ, ಸದಾ ಊರ್ಧ್ವಮುಖವಾಗಿರುವ ಬೆಂಕಿ ಸತ್ತ್ವದ ಪ್ರತೀಕ. ಇದು ಕಟ್ಟಿಗೆ(ತಮಸ್ಸು)ಯನ್ನು ಸುಟ್ಟು, ಹೊಗೆಯನ್ನು(ರಜಸ್ಸನ್ನು) ಮೀರಿ ಮೂಡಿಬರುವ ಬೆಳಕು. ಪ್ರಪಂಚದಲ್ಲಿ ನಮ್ಮ ಸಾಧನೆ ಕೂಡಾ ಹೀಗೇ ಇರಬೇಕು. ನಾವು ಎಚ್ಚರಿಕೆಯಿಂದ ರಜಸ್ಸು-ತಮಸ್ಸನ್ನು ಮೀರಿ ಸತ್ತ್ವದಲ್ಲೇ ಮನಸ್ಸು ನಿಲ್ಲುವಂತೆ ಪ್ರಯತ್ನಮಾಡಿ ಸಾಧನೆ ಮಾಡಿದರೆ ಭಗವಂತನ ದರ್ಶನ ಸಾಧ್ಯವಾಗುತ್ತದೆ.

ಭೇಜಿರೇ ಮುನಯೋಽಥಾಗ್ರೇ ಭಗವಂತಮಧೋಕ್ಷಜಮ್ ।
ಸತ್ತ್ವಂ ವಿಶುದ್ಧಂ ಕ್ಷೇಮಾಯ ಕಲ್ಪತೇ ನೇತರಾವಿಹ ॥೨೫॥

ಸಾತ್ತ್ವಿಕ ಸ್ವಭಾವದವರು 'ಅದೋಕ್ಷಜಃ' ಭಗವಂತನನ್ನು ಉಪಾಸನೆ ಮಾಡಿಯೇ ಉನ್ನತಿಗೇರಿದರು. ವಾಸುದೇವನಲ್ಲಿ ಭಕ್ತಿ ಕೇವಲ ಸಾತ್ತ್ವಿಕ ಸ್ವಭಾವದವರಿಗೆ ಮಾತ್ರ ಹುಟ್ಟುತ್ತದೆ. ಅಂತಹ ಸಾತ್ತ್ವಿಕರ ಮನಸ್ಸು ರಜಸ್ಸು-

ತಮಸ್ಸುಗಳಿಂದ ಕಲುಷಿತವಾಗಿರುವುದಿಲ್ಲ ಮತ್ತು ಸತ್ತ್ವ ಗುಣವೇ ಅವರಿಗೆ ಮೋಕ್ಷ ಸಾಧನವಾಗುತ್ತದೆ. ಇವರು ಸತ್ವದ ಮಹತ್ವದಿಂದ , ಸತ್ವದ ನಿಯಾಮಕನಾಗಿರುವ, ಸತ್ವಗುಣವನ್ನು ನಮ್ಮಲ್ಲಿ ಬೆಳೆಸತಕ್ಕಂತಹ ನಾರಾಯಣ ರೂಪವನ್ನು ಉಪಾಸನೆ ಮಾಡುತ್ತಾರೆ.

ಮುಮುಕ್ಷವೋ ಘೋರರೂಪಾನ್ ಹಿತ್ವಾ ಭೂತಪತೀನಥ ।
ವಾಸುದೇವಕಲಾಃ ಶಾಂತಾ ಭಜಂತಿ ಹ್ಯನಸೂಯವಃ ॥೨೬॥

ರಜಸ್ತಮಃಪ್ರಕೃತಯಃ ಸಮಶೀಲಾನ್ ಭಜಂತಿ ವೈ ।
ಪಿತೃಭೂತಪ್ರಜೇಶಾದೀನ್ ಶ್ರೀಯೈಶ್ವರ್ಯಪ್ರಜೇಪ್ಸವಃ ॥೨೭॥

ಯಾರ ಮೇಲೂ ಅಸೂಯೆ-ದ್ವೇಷವಿಲ್ಲದವರು, ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು ಎನ್ನುವ ಖಚಿತ ಅರಿವು ಉಳ್ಳವರು, ಮೋಕ್ಷಸಾಧನೆಯಲ್ಲಿ ತಮಸ್ಸು ಮತ್ತು ರಜಪ್ರವೃತ್ತಕ ರೂಪದಿಂದ ಭಗವಂತನನ್ನು ಉಪಾಸನೆ ಮಾಡುವುದಿಲ್ಲ. ಘೋರ ರೂಪಗಳು ನಮ್ಮಲ್ಲಿ ಕ್ರೌರ್ಯವನ್ನೂ ಹಾಗೂ ಮೂಢ ರೂಪಗಳು ನಮ್ಮಲ್ಲಿ ಮೌಢ್ಯವನ್ನೂ ಪ್ರಚೋದಿಸುತ್ತವೆ. ಇಂತಹ ಘೋರ ಮತ್ತು ಮೂಢವಾದ ಭೂತ-ಪ್ರೇತ-ಪಿಶಾಚಿ ಪೂಜೆ ಎಂದೂ ನಮ್ಮನ್ನು ಭಗವಂತನತ್ತ ಕೊಂಡೊಯ್ಯುವುದಿಲ್ಲ. ಪರಮ ಪ್ರಸನ್ನವಾದ ಭಗವಂತನ ರೂಪವನ್ನು ನಾವು ಅಂತರಂಗದಲ್ಲಿ ಕಾಣಬೇಕು. "ಭಗವಂತ ಪ್ರಸನ್ನನಾಗಿ ಅನುಗ್ರಹ ದೃಷ್ಟಿಯಿಂದ ಕಣ್ಣರಳಿಸಿ, ಪ್ರೀತಿಯಿಂದ ನನ್ನನ್ನು ನೋಡುತ್ತಿದ್ದಾನೆ." ಎಂದು ಅವನ ಕಣ್ಣನ್ನು ನಾವು ನಮ್ಮ ಹೃದಯದಲ್ಲಿ ಧ್ಯಾನ ಮಾಡಬೇಕು.
ಕೆಲವರು ಅರ್ಥ-ಕಾಮಕ್ಕಾಗಿ ಪಿತೃದೇವತೆಗಳ ಆರಾಧನೆ ಮಾಡುತ್ತಾರೆ. ಇದಲ್ಲದೆ ಕ್ಷುದ್ರ-ವಿಕೃತ ಉಪಾಸನೆ ಮಾಡುವವರೂ ಇದ್ದಾರೆ. ಇಂತಹ ರಾಜಸ/ತಾಮಸ ಉಪಾಸನೆಯಿಂದ ಬಯಕೆ ಈಡೇರಬಹುದು. ಆದರೆ ಆತ್ಮೋದ್ಧಾರವಿಲ್ಲ. ಹಾಗಾಗಿ ಇಂತಹ ಕೆಟ್ಟ ಉಪಾಸನೆಯನ್ನು ಬಿಟ್ಟು, ದ್ವೇಷ-ಅಸೂಯೆ ಇಲ್ಲದ, ಸ್ವಚ್ಛ ಮನಸ್ಸಿನಿಂದ, ಸಾತ್ವಿಕ ಉಪಾಸನೆ ಮಾಡಬೇಕು. ಸಾತ್ವಿಕತೆ ಕಲಿಯದೇ ಅಧ್ಯಾತ್ಮವಿಲ್ಲ.

ನಾರಾಯಣಪರಾ ವೇದಾ ನಾರಾಯಣಪರಾ ಮಖಾಃ ।
ನಾರಾಯಣಪರಾ ಯೋಗಾ ನಾರಾಯಣಪರಾಃ ಕ್ರಿಯಾಃ ॥೨೮॥

ನಾರಾಯಣಪರಂ ಜ್ಞಾನಂ ನಾರಾಯಣಪರಂ ತಪಃ ।
ನಾರಾಯಣಪರೋ ಧರ್ಮೋ ನಾರಾಯಣಪರಾ ಗತಿಃ ॥೨೦॥

ಇಲ್ಲಿ ನಾರಾಯಣಪರಾ ವೇದಾಃ ಎಂದಿದ್ದಾರೆ. ಈ ಕುರಿತ ವಿಶ್ಲೇಷಣೆಯನ್ನು ಮಂಗಲ ಪದ್ಯದಲ್ಲಿ ಸ್ವಲ್ಪ ಮಟ್ಟಿಗೆ ನೋಡಿದ್ದೇವೆ. ಸಾತ್ತ್ವಿಕರಾದ ಉಪಾಸಕರಿಗೆ ವೇದದ ಯಾವ ಮಂತ್ರವನ್ನು ಓದಿದರೂ ನಾರಾಯಣನ ರೂಪ ಅವನ ಗುಣಮಹತ್ತ್ವ ಕಾಣಬೇಕು. ನಾವು ಸಮಸ್ತ ವೇದದಲ್ಲೂ ನಾರಾಯಣನನ್ನು ಕಾಣಬೇಕು. ಐತರೇಯ ಅರಣ್ಯಕದಲ್ಲಿ ಹೇಳುವಂತೆ: "ಸರ್ವೇ ಘೋಷಾಃ ಸರ್ವೇ ವೇದಾಃ ಸರ್ವಾಃ ರಚಃ ಏಕೈವ ವ್ಯಾಹೃತಿಃ..." ಪ್ರಕೃತಿಯಲ್ಲಿನ

ಸರ್ವಶಬ್ದಗಳು, ಸರ್ವ ನಾದಗಳು ಭಗವಂತನನ್ನು ಹೇಳುತ್ತವೆ. ವೇದದಲ್ಲಿನ ಎಲ್ಲಾ ಶಬ್ದಗಳು, ಎಲ್ಲಾ ಅಕ್ಷರಗಳು, ಎಲ್ಲಾ ನಾದಗಳೂ ನಾರಾಯಣ ಪರ. ಎಲ್ಲಾ ದೇವತೆಗಳ ನಾಮ ಧರಿಸಿದವನು ಭಗವಂತ ಮತ್ತು ಎಲ್ಲಾ ದೇವತೆಗಳಿಗೆ ನಾಮವನ್ನು ಕೊಟ್ಟವನು ಭಗವಂತ. ಹಾಗಾಗಿ ಎಲ್ಲಾ ದೇವತೆಗಳ ಹೆಸರೂ ಆ ಭಗವಂತನ ಹೆಸರು. ನಾರಾಯಣ ಸೂಕ್ತದಲ್ಲಿ ಹೇಳುವಂತೆ:

**ನಾರಾಯಣ ಪರೋ ಜ್ಯೋತಿರಾತ್ಮಾ ನಾರಾಯಣಃ ಪರಃ ।**
**ನಾರಾಯಣ ಪರಂ ಬ್ರಹ್ಮ ತತ್ತ್ವಂ ನಾರಾಯಣಃ ಪರಃ ।**
**ನಾರಾಯಣ ಪರೋ ಧ್ಯಾತಾ ಧ್ಯಾನಂ ನಾರಾಯಣಃ ಪರಃ ॥**
**ಯಚ್ಚ ಕಿಂಚಿತ್ ಜಗತ್ ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।**
**ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥**

ಸಮಸ್ತ ವೇದಗಳೂ ನಾರಾಯಣನನ್ನು ಹೇಳುತ್ತವೆ. ಈ ಕುರಿತು ಇನ್ನೂ ವಿವರವಾಗಿ ನಾವು ಭಾಗವತದಲ್ಲಿ ಮುಂದೆ ಉದ್ಧವಗೀತೆಯಲ್ಲಿ ಕಾಣಬಹುದು. ಅಲ್ಲಿ ಕೃಷ್ಣ ಹೇಳುತ್ತಾನೆ: **“ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾ ಪೋಹ್ಯತೇ ತ್ವಹಂ । ಏತಾವಾನ್ಸರ್ವವೇದಾರ್ಥಃ ಶಬ್ದ ಆಸ್ಥಾಯ ಮಾಂ ಭಿದಾಂ”.** ಎಂದು.

**ನಾರಾಯಣ ಪರಾ ಮಖಾಃ :** ಇಲ್ಲಿ ಮಖಾ ಎಂದರೆ ಯಜ್ಞಗಳು. ಎಲ್ಲಾ ಯಜ್ಞ-ಯಾಗಾದಿಗಳೂ ನಾರಾಯಣನ ಪ್ರೀತಿಗೋಸ್ಕರವೇ ಇರುವಂತಹದ್ದು. ಯಜುರ್ವೇದ ಯಜ್ಞದ ಕುರಿತು ವಿವರಿಸುತ್ತದೆ. ಅಲ್ಲಿ ಕರ್ಮವಾಚಕವಾದ ಏನೇನು ಪದಗಳಿವೆ, ಅವು ಅಂತತಃ ಭಗವಂತನನ್ನು ಹೇಳುತ್ತವೆ. ಉದಾಹರಣೆಗೆ: **“ವಸಂತೇ ವಸಂತೇ ಜ್ಯೋತಿಷಾ ಯಜೇತಾ”**: ಇದರ ನೇರ ಅರ್ಥ: “ಪ್ರತಿಯೊಂದು ವಸಂತದಲ್ಲೂ ಜ್ಯೋತಿಷ್ಟೋಮಯಾಗ ಮಾಡು” ಎಂದರ್ಥ. ಇಲ್ಲಿ ಬರುವ ಪ್ರತಿಯೊಂದು ಪದವನ್ನೂ ಭಗವಂತನ ಪರ ಅರ್ಥ ಮಾಡಿದಾಗ ಈ ಶ್ಲೋಕ ಭಗವಂತನನ್ನು ಹೇಳುತ್ತದೆ ಎನ್ನುವುದು ತಿಳಿಯುತ್ತದೆ. ಹಾಗೆ ಮಾಡಿದಾಗ: ವಸಂತೇ ಅಂದರೆ: ಎಲ್ಲವುದರ ಒಳಗೂ ವಾಸ ಮಾಡುವವನು, ಎಲ್ಲೆಡೆ ತುಂಬಿರುವವನು ಎನ್ನುವ ಅರ್ಥವನ್ನು ಕೊಡುತ್ತದೆ. ಅದೇ ರೀತಿ ‘ಜ್ಯೋತಿಷಾ’. ಇಲ್ಲಿ ಷ-ಕಾರೋ ಪ್ರಾಣೋ ಆತ್ಮಾ. ಅಂದರೆ ಸರ್ವಚೇಷ್ಟಕತ್ವ. ಆದ್ದರಿಂದ ಸ್ವಯಂ ಪ್ರಕಾಶಸ್ವರೂಪನೂ ಸರ್ವಚೇಷ್ಟಕನೂ ಆದವ ಜ್ಯೋತಿಷಾ. ಇನ್ನು ‘ಆಯುಜೇತಾ’ ಎಂದರೆ: ಎಲ್ಲಾ ಯಜ್ಞಗಳಿಂದ ಪೂಜಿತನಾದವನು ಎಂದರ್ಥ. ಈ ಎಲ್ಲಾ ಅರ್ಥಗಳಿಂದ ನೋಡಿದಾಗ, ಮೇಲಿನ ಮಂತ್ರ ಸಂಪೂರ್ಣ ಭಗವದ್ ಪರ ಅರ್ಥವನ್ನು ಕೊಡುತ್ತದೆ.

**ನಾರಾಯಣಪರಾ ಯೋಗಾಃ:** ವೇದದಲ್ಲಿ ಅನೇಕ ಯೋಗಗಳನ್ನು ಹೇಳಲಾಗಿದೆ. ಉದಾಹರಣೆಗೆ ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ ಇತ್ಯಾದಿ. ಇಲ್ಲಿ ಹೇಳುತ್ತಾರೆ: “ಯಾವ ಯೋಗವೇ ಇರಲಿ, ಅದು ಭಗವಂತನೆಡೆಗೆ ಹೋಗಲು ಇರುವ ಯೋಗವೇ ಹೊರತು ಇನ್ನೇನೂ ಅಲ್ಲಾ” ಎಂದು. **“ತಸ್ಯ ಬ್ರಹ್ಮಣಿ ಸಂಯೋಗೋ ಯೋಗ ಇತಿ ಅಭಿಧೀಯತೆ”** ಚಿತ್ತವೃತ್ತಿಗೂ ಭಗವಂತನಿಗೂ ಸಂಯೋಗವಾಗುವುದಕ್ಕೆ ‘ಯೋಗ’ ಎನ್ನುತ್ತಾರೆ. ಈ ಸಂಯೋಗವಿಲ್ಲದೆ ಯಾವ ಯೋಗವೂ ಇಲ್ಲ. ಯಾವ ಸಾಧನೆಯ ಮಾರ್ಗವೇ ಇರಲಿ, ಅದು ಅಂತತಃ ನಾರಾಯಣನಲ್ಲಿಗೆ ಕೊಂಡೊಯ್ಯಬೇಕು. ಇಲ್ಲದಿದ್ದರೆ ಪೂರ್ಣತೆ ಇಲ್ಲ.

**ನಾರಾಯಣಪರಾ ಕ್ರಿಯಾಃ :** ಕೇವಲ ಯಜ್ಞ-ಯಾಗಗಳಷ್ಟೇ ಅಲ್ಲ, ನಾವು ಮಾಡುವ ಸಮಸ್ತ ಕರ್ಮಗಳೂ ಕೂಡಾ ಭಗವಂತನ ಪರವಾಗಬೇಕು. ಇದನ್ನೇ ಗೀತೆಯಲ್ಲಿ ಕೃಷ್ಣ ಹೀಗೆ ಹೇಳಿದ್ದಾನೆ:

**ಯತ್ ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್** ॥೯-೨೭॥

ನಾವು ತಿನ್ನುವುದು ಆ ವೈಶ್ವಾನರನಿಗೆ ಆಹುತಿ; ನಡೆಯುವುದು ಆ ಭಗವಂತನಿಗೆ ಪ್ರದಕ್ಷಿಣೆ; ಮಲಗುವುದು ಭಗವಂತನಿಗೆ ಸಾಷ್ಟಾಂಗ ನಮಸ್ಕಾರ; ಮಾತನಾಡುವುದು ಭಗವಂತನ ಕೀರ್ತನೆ. ಹೀಗೆ ಎಲ್ಲವೂ ಭಗವಂತನ ಪೂಜೆಯಾಗಬೇಕು.

**ನಾರಾಯಣಪರಂ ಜ್ಞಾನಂ:** ಎಲ್ಲಾ ಅರಿವು ಯಾವ ಅರಿವಿಗೆ ಮೆಟ್ಟಿಲೋ ಅದು ಶ್ರೇಷ್ಠವಾದ ಅರಿವು. ಅಧಿಭೂತದ ಅರಿವು, ಅಧ್ಯಾತ್ಮದ ಅರಿವು, ಅಧಿದೈವದ ಅರಿವು, ಅಧಿಯಜ್ಞದ ಅರಿವು, ಕರ್ಮಬ್ರಹ್ಮದ ಅರಿವು, ಇತ್ಯಾದಿ ಅರಿವು ಸಾಧನೆಯ ಒಂದೊಂದು ಮೆಟ್ಟಿಲುಗಳು. ಈ ಕುರಿತು ವಿಸ್ತಾರವಾದ ವಿವರಣೆಯನ್ನು ಭಗವದ್ಗೀತೆಯ ಎಂಟನೇ ಅಧ್ಯಾಯದಲ್ಲಿ ಕಾಣಬಹುದು. ಒಟ್ಟಿನಲ್ಲಿ ಹೇಳಬೇಕೆಂದರೆ: ಎಲ್ಲಾ ಜ್ಞಾನಗಳ ಕೊನೇ ಗುರಿ ಆ ಭಗವಂತ.

**ನಾರಾಯಣಪರಂ ತಪಃ** : ತಪಸ್ಸು ಅಂದರೆ ಚಿಂತನೆ. ಮನಸ್ಸಿನಿಂದ ಬರುವ ನಿರ್ಧಾರ-ಚಿಂತನೆಗಳೇ ತಪಸ್ಸು. ನಮ್ಮ ಮನಸ್ಸಿನ ಚಿಂತನೆಯ ಕೊನೆ ಆ ಭಗವಂತನಾಗಿರಬೇಕು. ಕಠೋಪನಿಷತ್ತಿನಲ್ಲಿ ಹೇಳುವಂತೆ: **"ತಪಾಂಸಿ ಸರ್ವಾಣಿ ಚ ಯದ್ವದಂತಿ"(೧-೨-೧೫).** ಎಲ್ಲಾ ತರ್ಕಗಳು ಎಲ್ಲಿ ಕೊನೆಯಾಗುತ್ತವೋ ಅದು ಭಗವಂತ.

**ನಾರಾಯಣಪರೋ ಧರ್ಮಃ** : ಈ ಹಿಂದೆ ವಿಶ್ಲೇಷಿಸಿಸಿದಂತೆ ಯಾವುದು ನಮ್ಮನ್ನು ಭಗವಂತನೆಡೆಗೆ ಕೊಂಡೊಯ್ಯುತ್ತದೋ ಅದು ಧರ್ಮ. ಯಾವ ನಡೆಯಲ್ಲಿ ಭಗವಂತನ ಕಡೆಗೆ ನಮ್ಮ ಮನಸ್ಸು ಹರಿಯುತ್ತದೋ ಅದೇ ನಮ್ಮ ಧರ್ಮ. ಎಲ್ಲಾ ಧರ್ಮಗಳಿರುವುದು ಭಗವಂತನನ್ನು ತಿಳಿಯುವುದಕ್ಕೋಸ್ಕರ ಹೊರತು ಧರ್ಮಕ್ಕೋಸ್ಕರ ಧರ್ಮವಲ್ಲ. ಒಟ್ಟಿನಲ್ಲಿ ಹೇಳಬೇಕೆಂದರೆ: ಧರ್ಮಕ್ಕೋಸ್ಕರ-ಧರ್ಮವಲ್ಲ, ಜ್ಞಾನಕ್ಕೋಸ್ಕರ-ಜ್ಞಾನವಲ್ಲ, ಕರ್ಮಕ್ಕೋಸ್ಕರ-ಕರ್ಮವಲ್ಲ, ತಪಸ್ಸಿಗೋಸ್ಕರ-ತಪಸ್ಸಲ್ಲ. ಭಗವಂತನನ್ನು ತಿಳಿಯುವುದಕ್ಕೋಸ್ಕರ, ಆತನ ಅನುಗ್ರಹವನ್ನು ಪಡೆಯುವುದಕ್ಕೋಸ್ಕರ ಇವೆಲ್ಲವೂ ಇರುವುದು. ಹೀಗಾಗಿ ಇಲ್ಲಿ ಹೇಳುತ್ತಾರೆ: **"ನಾರಾಯಣಪರಾ ಗತಿಃ"** ಎಂದು. ನಮ್ಮ ಸಾಧನೆಯ ಕೊನೇ ಗುರಿ ಆ ಭಗವಂತ. ನಮ್ಮೆಲ್ಲಾ ನಡೆಯೂ ಆ ಭಗವಂತನನ್ನು ಸೇರುವುದಕ್ಕೆ ಪೋಷಕವಾಗಿರಬೇಕು. ಹೀಗೆ ಉಗ್ರಶ್ರವಸ್ಸ್ ನಮ್ಮ ಅಂತರಂಗದ ಶ್ರೇಯಸ್ಸಿನ ದಾರಿಯನ್ನು ಬಹಳ ಸುಂದರವಾಗಿ ವರ್ಣಿಸಿದ್ದಾರೆ.

[ಓದುಗರಿಗೆ ಸೂಚನೆ: ಇಲ್ಲಿ ಭಗವಂತನನ್ನು 'ನಾರಾಯಣ' ಎನ್ನುವ ಶಬ್ದ ಬಳಸಿ ವಿವರಿಸಲಾಗಿದೆ. ನಾರಾಯಣ ಶಬ್ದವನ್ನು 'ವಾಸುದೇವ' ಶಬ್ದದಿಂದ ಬಳಸಿಕೊಳ್ಳುವುದು ಇನ್ನೊಂದು ಮುಖ. ಒಂದು ರೀತಿಯಿಂದ ನೋಡಿದರೆ ವಾಸುದೇವ ಪದದ ನಿರ್ವಚನವೇ ನಾರಾಯಣ. 'ವಾಸು' ಅಂದರೆ ಒಳಗೆ ವಾಸ ಮಾಡುವವನು. 'ದೇವ' ಅಂದರೆ ಹೊರಗಡೆ ಎಲ್ಲಾ ಕಡೆ ತುಂಬಿರುವವನು. ಆದ್ದರಿಂದ ವಾಸುದೇವ ಎಂದರೆ ಒಳಗೂ ಹೊರಗೂ ತುಂಬಿರುವವನು ಎಂದರ್ಥ. ಅದೇ ರೀತಿ ಯಾರು 'ನಾರನೋ'; ಯಾರು 'ಅಯನನೋ' ಅವನು ನಾರಾಯಣ. ನಾರ ಎಂದರೆ ಒಳಗಡೆ ತುಂಬಿರುವವ. ಅಯನ ಎಂದರೆ ಎಲ್ಲಾ ಕಡೆ ವ್ಯಾಪಿಸಿರುವವ.]

**ಸ ಏವೇದಂ ಸಸರ್ಜಾಗ್ರೇ ಭಗವಾನಾತ್ಮಮಾಯಯಾ ।**
**ಸದಸದ್ರೂಪಯಾ ಚಾಸೌ ಗುಣಮಯ್ಯಾಽಗುಣೋ ವಿಭುಃ ॥೩೧॥**

ಈ ಪ್ರಪಂಚ ನಿರ್ಮಾಣಕ್ಕೆ ನಿಮಿತ್ತ ಕಾರಣ ಭಗವಂತ ಎನ್ನುವುದು ನಮಗೆ ತಿಳಿಯಿತು. ಹಾಗಾದರೆ ಇದರ ಉಪಾದಾನ ಕಾರಣ ಯಾರು? ಭಗವಂತನೆಂಬ ಕುಂಬಾರ ಈ ಬ್ರಹ್ಮಾಂಡವೆಂಬ ಮಡಕೆಯನ್ನು ಯಾವ ಮಣ್ಣಿನಿಂದ ಮಾಡಿದ? ಈ ಪ್ರಶ್ನೆಗೆ ಇಲ್ಲಿ ಉತ್ತರಿಸುತ್ತಾ ಹೇಳುತ್ತಾರೆ: "ಆತ್ಮಮಾಯಾಯಾ" ಎಂದು. ಅಂದರೆ ಭಗವಂತನ

ಅಧೀನವಾಗಿರುವ ಜಡಪ್ರಕೃತಿಯನ್ನು ಉಪಾದಾನ ಕಾರಣವಾಗಿಟ್ಟುಕೊಂಡು ಈ ಜಗತ್ತನ್ನು ಭಗವಂತ ಸೃಷ್ಟಿಮಾಡಿದ. ಈ ಜಡಪ್ರಕೃತಿ ಎನ್ನುವುದು ಕಾರ್ಯ-ಕಾರಣ ರೂಪ. ಸೂಕ್ಷ್ಮರೂಪದಿಂದಲೇ ಸ್ಥೂಲ ರೂಪದ ಸೃಷ್ಟಿ. ಈ ಪ್ರಪಂಚ ಮೊದಲು ಗುಣತ್ರಯಾತ್ಮಕವಾಗಿದ್ದು, ಏನೂ ಕಾಣಿಸುತ್ತಿರಲಿಲ್ಲ. ನಂತರ ಅದರ ವಿಕಾರದಿಂದ ಮಹತತ್ತ್ವ ಸೃಷ್ಟಿಯಾಯಿತು. ನಂತರ ಪಂಚಭೂತಗಳ ಸೃಷ್ಟಿಯಾಯಿತು; ಪಂಚಭೂತಗಳಿಂದ ಪ್ರಪಂಚ ಸೃಷ್ಟಿಯಾಯಿತು. ಈ ರೀತಿ ಕಣ್ಣಿಗೆ ಕಾಣುವ ಬೃಹತ್ ವಿಶ್ವ ನಿರ್ಮಾಣವಾಯಿತು. ಒಂದು ವಸ್ತು ಇನ್ನೊಂದು ವಸ್ತುವಿಗೆ ಕಾರ್ಯವಾದರೆ, ಅದೇ ವಸ್ತು ಮತ್ತೊಂದು ವಸ್ತುವಿಗೆ ಕಾರಣವಾಗಿರುತ್ತದೆ. ಆದರೆ ಗುಣತ್ರಯಗಳು ಎಲ್ಲಾ ವಸ್ತುಗಳಿಗೂ ಮೂಲ ಕಾರಣ. ಹೀಗೆ ಒಂದು ಕಾರ್ಯ, ಆ ಕಾರ್ಯದಿಂದ ಇನ್ನೊಂದು ಕಾರ್ಯ, ಹೀಗೆ ಎಲ್ಲವೂ ಕಾರ್ಯ-ಕಾರಣವಾಗಿ ಬೆಳೆಯುತ್ತಾ ಇಡೀ ಬ್ರಹ್ಮಾಂಡ ನಿರ್ಮಾಣವಾಯಿತು. ಜಡಪ್ರಕೃತಿ ಎನ್ನುವುದು ಪ್ರಪಂಚ ಸೃಷ್ಟಿಗೆ ಉಪಾದಾನ ಕಾರಣವಾಯಿತು. ಜಡಪ್ರಕೃತಿಯನ್ನು ಉಪಾದಾನ ಕಾರಣವಾಗಿಟ್ಟುಕೊಂಡು, ತನ್ನ ಇಚ್ಛೆ, ಸಾಮರ್ಥ್ಯ ಮತ್ತು ಜ್ಞಾನದಿಂದ ಭಗವಂತ ಈ ಪ್ರಪಂಚ ನಿರ್ಮಾಣ ಮಾಡಿದ. ಇಂತಹ ಭಗವಂತನಿಗೆ ಈ ತ್ರಿಗುಣಗಳ ಸ್ಪರ್ಶವೇ ಇಲ್ಲ. ಆತ ತ್ರಿಗುಣಾತೀತ ಎನ್ನುವುದನ್ನು ಈ ಶ್ಲೋಕ ಸ್ಪಷ್ಟವಾಗಿ ಹೇಳುತ್ತದೆ.

ತಯಾ ವಿಲಸಿತೇಷ್ವೇಷು ಗುಣೇಷು ಗುಣವಾನಿವ ।
ಅಂತಃಪ್ರವಿಷ್ಟ ಆಭಾತಿ ವಿಜ್ಞಾನೇನ ವಿಜೃಂಭಿತಃ ॥೩೧॥

ಇಲ್ಲಿ "ಈ ಪ್ರಪಂಚ ಎನ್ನುವುದು ಪ್ರಕೃತಿಯ ವಿಲಾಸ" ಎಂದಿದ್ದಾರೆ. 'ವಿಲಾಸ' ಎನ್ನುವುದು ಸಾಙ್ಖ್ಯಸಿದ್ಧಾಂತದ ನೆನಪನ್ನು ಕೊಡುವ ಶಬ್ದ. ವಿಲಾಸ ಎಂದರೆ 'ವಿಚಾರ' ಎಂದರ್ಥ. ಸಾಂಖ್ಯದಲ್ಲೊಂದು ಮಾತಿದೆ. ಅಲ್ಲಿ ಹೇಳುತ್ತಾರೆ: "ಈ ಪ್ರಕೃತಿ ಎನ್ನುವುದು ನೃತ್ಯಗಾರ್ತಿ ಇದ್ದ ಹಾಗೆ ಹಾಗೂ ಪುರುಷ ಒಬ್ಬ ಪ್ರೇಕ್ಷಕನಂತೆ; ಪುರುಷನ ಮುಂದೆ ನಾಟ್ಯವಾಡಿ ಅವನನ್ನು ಮರುಳುಗೊಳಿಸುವುದು ಪ್ರಕೃತಿ" ಎಂದು. ಪ್ರಕೃತಿ ನಾನಾ ವಿಲಾಸಗಳಿಂದ ನಮ್ಮನ್ನು ಮೋಹಗೊಳಿಸುತ್ತದೆ. ಜಡಪ್ರಕೃತಿಗೆ ಸ್ವಯಂ ಕರ್ತೃತ್ವವಿಲ್ಲದ ಕಾರಣ ಭಗವಂತ ಈ ಪ್ರಪಂಚದಲ್ಲಿ ಹಾಗೂ ಪ್ರತಿಯೊಬ್ಬ ಜೀವನೊಳಗೆ ತುಂಬಿ ಈ ಕ್ರಿಯೆಯನ್ನು ಮಾಡಿಸುತ್ತಾನೆ. ಹೀಗೆ ತ್ರಿಗುಣಾತ್ಮಕವಾದ ಪ್ರಪಂಚದಲ್ಲಿ ಹಾಗೂ ತ್ರಿಗುಣಾತ್ಮಕವಾದ ದೇಹದಲ್ಲಿ ಭಗವಂತ ತುಂಬಿರುವುದರಿಂದ ನಮಗೆ ಅವನೂ ಕೂಡಾ ಗುಣಬದ್ಧ ಎಂದು ಕಾಣುತ್ತದೆ. ಆದರೆ ಭಗವಂತನ ಜ್ಞಾನದ ವಿಜೃಂಭಣೆಯಲ್ಲಿ ತ್ರಿಗುಣದ ಸ್ಪರ್ಶವೇ ಇರುವುದಿಲ್ಲ.

ಅಸೌ ಗುಣಮಯೈರ್ಭಾವೈರ್ಭೂತಸೂಕ್ಷ್ಮೇಂದ್ರಿಯಾತ್ಮಭಿಃ ।
ಸ್ವನಿರ್ಮಿತೇಷು ನಿರ್ವಿಷ್ಟೋ ಭುಂಕ್ತೇ ಭೂತೇಷು ತದ್ಗುಣಾನ್ ॥೩೪॥

ಭಗವಂತ ಈ ತ್ರಿಗುಣಾತ್ಮಕ ಪ್ರಪಂಚವನ್ನು ತಾನೇ ನಿರ್ಮಾಣ ಮಾಡಿ, ಅದರೊಳಗೆ ಪ್ರವೇಶಮಾಡಿ, ಆನಂದಪಾನ ಮಾಡುತ್ತಿದ್ದಾನೆ. ಆದರೂ ಕೂಡಾ ಅವನಿಗೆ ಈ ತ್ರಿಗುಣಗಳ ಸ್ಪರ್ಶವಿಲ್ಲ. ಆತ ತ್ರಿಗುಣಗಳಿಂದ ನಿರ್ಮಾಣವಾದ ಪಂಚಭೂತಗಳು, ಪಂಚತನ್ಮಾತ್ರೆಗಳು ಹಾಗೂ ಮನಸ್ಸು ಇವುಗಳಿರುವ ದೇಹವನ್ನು ನಿರ್ಮಾಣ ಮಾಡಿ, ಅದರೊಳಗೆ ನಿರ್ವಿಷ್ಟನಾಗಿದ್ದಾನೆ. ಇಲ್ಲಿ 'ನಿರ್ವಿಷ್ಟ' ಎಂದರೆ ಕೇವಲ ನೆಲೆಸುವುದಲ್ಲ, ಆನಂದವಾಗಿ ನೆಲೆಸುವುದು. ಈ ಆನಂದಕ್ಕೆ ಯಾವುದೇ ದೋಷದ ಸ್ಪರ್ಶವಿಲ್ಲ. ಹೀಗೆ ಪ್ರತಿಯೊಬ್ಬರ ಒಳಗೂ ತ್ರೈಗುಣ್ಯವರ್ಜಿತನಾಗಿ ನೆಲೆಸಿದ್ದಾನೆ ಆ ಭಗವಂತ.

**ಭಾವಯನ್ನೇಷ ಸತ್ತ್ವೇನ ಲೋಕಾನ್ ವೈ ಲೋಕಭಾವನಃ ।**
**ಲೀಲಾವತಾರಾನು ಗತಸ್ತಿರ್ಯಙ್ನರಸುರಾದಿಷು ॥೩೪॥**

ಭಗವಂತ ಪ್ರಪಂಚ ಸೃಷ್ಟಿ ಮಾಡಿ ಅದರೊಳಗೆ ಸೇರಿಕೊಂಡ. ನಂತರ ಪ್ರತಿಯೊಂದು ಜೀವರೊಳಗೂ ಬಿಂಬರೂಪನಾಗಿ ತುಂಬಿದ. ಇಷ್ಟೇ ಅಲ್ಲದೆ ಮತ್ತೆ ನಮ್ಮ ಕಣ್ಣೆದುರಿಗೆ ಅವತಾರರೂಪಿಯಾಗಿ ಧರೆಗಿಳಿದು ಬಂದ. ಸರ್ವಸಮರ್ಥನಾದ ಭಗವಂತ ಏಕೆ ಅವತಾರ ತಾಳಿ ಭೂಮಿಗೆ ಇಳಿದು ಬರುತ್ತಾನೆ ಎನ್ನುವ ಪ್ರಶ್ನೆಗೆ ಉಗ್ರಶ್ರವಸ್ ಇಲ್ಲಿ ಉತ್ತರಿಸಿದ್ದಾರೆ. ಈ ಭೂಮಿಯಲ್ಲಿ ಕೆಲವೊಮ್ಮೆ ಗುಣತ್ರಯಗಳ ಸಂಘರ್ಷವಾಗುತ್ತದೆ. ಈ ರೀತಿ ಸಂಘರ್ಷದಲ್ಲಿ ತಮೋಗುಣದ ಪ್ರಭಾವ ಹೆಚ್ಚಿ, ದುಷ್ಟಶಕ್ತಿಗಳ ಕೈವಾಡ ಮೇಲಾದಾಗ, ಸತ್ತ್ವಗುಣವನ್ನು ಮರಳಿ ಸ್ಥಾಪಿಸಿ ಜಗತ್ತನ್ನು ಉಳಿಸುವುದಕ್ಕಾಗಿ ಭಗವಂತ ಇಳಿದುಬರುತ್ತಾನೆ. ಸರ್ವಸಮರ್ಥನಾದ ಭಗವಂತ ಧರ್ಮರಕ್ಷಣೆಯನ್ನು ಅವತಾರ ತಾಳದೇ ಮಾಡಬಲ್ಲ. ಆದರೆ ಆತ ಅವತಾರ ತಾಳುವುದು ಭಕ್ತರಿಗೆ ತನ್ನ ಲೀಲೆಯನ್ನು ತೋರುವುದಕ್ಕಾಗಿ. ಆತ ತಾಳುವ ಅವತಾರದಿಂದ ಕಣ್ಣಿಗೆ ಕಾಣದ ಭಗವಂತನನ್ನು ವಿಧವಿಧವಾಗಿ ಉಪಾಸನೆ ಮಾಡಲು ಸಾಧ್ಯವಾಗುತ್ತದೆ. ಆದ್ದರಿಂದ ದೇವಲೋಕದಲ್ಲಿ ಆವಿರ್ಭಾವನಾಗಿ, ಪ್ರಾಣಿಗಳಲ್ಲಿ ಆವಿರ್ಭಾವನಾಗಿ, ನರರೂಪನಾಗಿ ತನ್ನ ಲೀಲೆಯನ್ನು ಭಕ್ತರಿಗಾಗಿ ಬಿತ್ತರಿಸುತ್ತಾನೆ ಭಗವಂತ. ಆತನ ವಿವಿಧ ಅವತಾರದ ವಿವರವನ್ನು ಮುಂದಿನ ಅಧ್ಯಾಯದಲ್ಲಿ ಕಾಣಬಹುದು.

**॥ಇತಿ ಶ್ರೀಮದ್ಭಾಗವತೇ ಮಹಾ ಪುರಾಣೇ ಪ್ರಥಮಸ್ಕಂಧೇ ದ್ವಿತಿಯೋಽಧ್ಯಾಯಃ॥**

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಎರಡನೇ ಅಧ್ಯಾಯ ಮುಗಿಯಿತು.

*******

# ತೃತಿಯೋಽಧ್ಯಾಯಃ

ಶೌನಕಾದಿಗಳು ಕೇಳಿದ ಭಗವಂತನ ಅವತಾರಗಳ ವಿವರವನ್ನು ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಇಲ್ಲಿ ಭಗವಂತನ ಮೂಲರೂಪವನ್ನೊಳಗೊಂಡ ಇಪ್ಪತ್ಮೂರು ಅವತಾರಗಳನ್ನು ವಿವರಿಸಲಾಗಿದೆ. ಈ ಅವತಾರಗಳಲ್ಲಿ ನರ-ನಾರಾಯಣ ರೂಪದಲ್ಲಿನ ಭಗವಂತನ ಆವೇಶಾವತಾರವಾದ 'ನರ' ರೂಪವನ್ನು ಸೇರಿಸಿದರೆ, ಒಟ್ಟು ಇಪ್ಪತ್ನಾಲ್ಕು ಅವತಾರಗಳ ವಿವರಣೆ ಇಲ್ಲಿದೆ. ಅಖಂಡವಾಗಿರುವ ಭಗವಂತ ಮೊಟ್ಟಮೊದಲು ಸೃಷ್ಟಿ ನಿರ್ಮಾಣ ಮಾಡುವುಕ್ಕೋಸ್ಕರ ತಳೆದ ಅವತಾರದ ವಿವರಣೆಯೊಂದಿಗೆ ಈ ಅಧ್ಯಾಯ ಆರಂಭವಾಗುತ್ತದೆ.

## ಭಗವದವತಾರಗಳು

**ಸೂತ ಉವಾಚ:**

**ಜಗೃಹೇ ಪೌರುಷಂ ರೂಪಂ ಭಗವಾನ್ಮಹದಾದಿಭಿಃ ।**
**ಸಂಭೂತಂ ಷೋಡಶಕಲಮಾದೌ ಲೋಕಸಿಸೃಕ್ಷಯಾ ॥೧॥**

**ಯಸ್ಯಾಂಭಸಿ ಶಯಾನಸ್ಯ ಯೋಗನಿದ್ರಾಂ ವಿತನ್ವತಃ ।**
**ನಾಭಿಹ್ರದಾಂಬುಜಾದಾಸೀದ್ಬ್ರಹ್ಮಾ ವಿಶ್ವಸೃಜಾಂ ಪತಿಃ ॥೨॥**

ಜಗತ್ತಿನ ಸೃಷ್ಟಿಗಾಗಿ ಭಗವಂತ ವಿಶೇಷ ರೂಪದಲ್ಲಿ ಆವಿರ್ಭಾವಗೊಂಡ ರೂಪವೇ ಆತನ 'ಪುರುಷಃ' ನಾಮಕ ರೂಪ. ಇದು ಎಲ್ಲಕ್ಕಿಂತ ಮೊದಲ ಅವತಾರರೂಪ. ಭಗವಂತನ ಈ ರೂಪಕ್ಕೆ ಇನ್ನೊಂದು ಹೆಸರು 'ಪದ್ಮನಾಭ'. ಜಗತ್ತನ್ನು ಸೃಷ್ಟಿಮಾಡುವ ಮೊದಲು ತಾನೊಂದು ರೂಪಧರಿಸಿ, ತನ್ನ ನಾಭಿಯಿಂದ ಚತುರ್ಮುಖನನ್ನು ಸೃಷ್ಟಿಮಾಡಿ, ಬ್ರಹ್ಮಾಂಡವನ್ನು ಸೃಷ್ಟಿಮಾಡಿದ ರೂಪವೇ ಈ ಪದ್ಮನಾಭ ರೂಪ.

ಶಾಸ್ತ್ರಕಾರರು ಸೃಷ್ಟಿಗೆ ಕಾರಣವಾಗಿರುವ ಮೂರು ಪುರುಷರೂಪಗಳನ್ನು ಉಲ್ಲೇಖಿಸುತ್ತಾರೆ. ೧. ನಾಭಿಕಮಲದಿಂದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಮಾಡಿದ ರೂಪ. ೨. ಚತುರ್ಮುಖನ ಮುಖೇನ ಸೃಷ್ಟಿಯಾದ ಬ್ರಹ್ಮಾಂಡದೊಳಗೆ ತುಂಬಿದ ರೂಪ. ೩. ಬ್ರಹ್ಮಾಂಡದೊಳಗೆ ಅನಂತಾನಂತ ಪಿಂಡಾಂಡವನ್ನು ಸೃಷ್ಟಿಮಾಡಿ, ಆ ಪಿಂಡಾಂಡದೊಳಗೆ ತುಂಬಿದ ಪುರುಷರೂಪ. ಮೇಲಿನ ಶ್ಲೋಕದಲ್ಲಿ ಹೇಳಿರುವ ಪುರುಷರೂಪ ಮೊಟ್ಟಮೊದಲು ಮಹತತ್ತ್ವ ಧ್ಯೇಯನಾದ ಚತುರ್ಮುಖ ಬ್ರಹ್ಮನನ್ನು ನಾಭಿ ಕಮಲದಿಂದ ಸೃಷ್ಟಿ ಮಾಡಿದ ರೂಪ.

ಇಲ್ಲಿ **"ಜಗೃಹೇ ಪೌರುಷಂ ರೂಪಂ"** ಎನ್ನುವಲ್ಲಿ "ಭಗವಂತ ಪುರುಷನಾಮಕ ರೂಪವನ್ನು ಗ್ರಹಣ ಮಾಡಿದ" ಎಂದಿದ್ದಾರೆ. ಗ್ರಹಣಮಾಡುವುದು ಎಂದರೆ ಸ್ವೀಕರಿಸುವುದು ಎಂದರ್ಥ. ಇಲ್ಲಿ ಭಗವಂತ ರೂಪವನ್ನು ಸ್ವೀಕರಿಸುವುದು ಅಂದರೆ: ಆತನ ಒಂದು ರೂಪದಿಂದ ಇನ್ನೊಂದು ರೂಪ ಅಭಿವ್ಯಕ್ತವಾಗುವುದು. ಸೃಷ್ಟಿಯ ಮೊದಲು ಎಲ್ಲವೂ ಕತ್ತಲು. ಸೃಷ್ಟಿಯ ಆರಂಭ ಎಂದರೆ ಅದು ರಾತ್ರಿ ಕಳೆದು ಅರುಣೋದಯವಾದಂತೆ. ಕತ್ತಲನ್ನು ಕಳೆದು ಪದ್ಮನಾಭರೂಪನಾಗಿ ಭಗವಂತ ಅಭಿವ್ಯಕ್ತನಾಗುವುದನ್ನೇ ಇಲ್ಲಿ 'ಗ್ರಹಣ' ಮಾಡುವುದು ಎಂದಿದ್ದಾರೆ.

ಸೃಷ್ಟಿಯ ಆದಿಯಲ್ಲಿ ಎಲ್ಲವೂ ಭಗವಂತನ ಉದರದಲ್ಲಿದ್ದು, ಪ್ರಪಂಚದ ಸೃಷ್ಟಿಗಾಗಿ ಭಗವಂತ ಸಮಸ್ತ ಪ್ರಕೃತಿ ವಿಕಾರಗಳ ಮೂಲವಾದ ಷೋಡಶಕಲೆಗಳ ಸಂಗತನಾಗಿ ಪದ್ಮನಾಭ ರೂಪ ಧಾರಣೆ ಮಾಡಿದ. ಇಲ್ಲಿ ಹೇಳಿರುವ

**ಷೋಡಶಕಲೆಗಳ ವಿವರವನ್ನು ನಾವು ವೇದದಲ್ಲಿ ಕಾಣಬಹುದು. ಅಲ್ಲಿ ಹೇಳುತ್ತಾರೆ: "ಪ್ರಾಣಾಚ್ಛ್ರದ್ಧಾಂ ಖಂ ವಾಯುರ್ಜ್ಯೋತಿರಾಪಃ ಪೃಥಿವೀಂದ್ರಿಯಂ ಮನೋಽನ್ನಮನ್ನಾದ್ ವೀರ್ಯಂ ತಪೋ ಮಂತ್ರಾಃ ಕರ್ಮ ಲೋಕಾ ಲೋಕೇಷು ನಾಮ ಚ"** ಎಂದು. ಜೀವ, ಶ್ರದ್ಧೆ, ಖಂ(ಆಕಾಶ), ವಾಯು, ಜ್ಯೋತಿ, ಆಪಃ, ಪ್ರಥಿವೀ, ಇಂದ್ರಿಯ, ಮನಃ, ಅನ್ನ, ವೀರ್ಯ, ತಪಃ, ಮಂತ್ರಾಃ, ಕರ್ಮ, ಲೋಕಾಃ ಮತ್ತು ನಾಮ ಇವೇ ಆ ಹದಿನಾರು ಕಲೆಗಳು. [ಈ ಕುರಿತ ವಿವರವಾದ ವಿವರಣೆ ಪ್ರಶ್ನೋಪನಿಷತ್ತಿನ ಆರನೇ ಪ್ರಶ್ನೆಯಲ್ಲಿ ಕಾಣಬಹುದು]. ಅಭಿಮಾನಿದೇವತೆಗಳನ್ನೊಳಗೊಂಡ ಈ ಷೋಡಶಕಲೆ ಭಗವಂತನ ಉದರದಲ್ಲಿದ್ದು, ಅದಕ್ಕೆ ಅಭಿವ್ಯಕ್ತಿಕೊಡುವ ಸ್ಥಿತಿಯಲ್ಲಿ ಪುರುಷನಾಮಕ ರೂಪ ಧಾರಣೆ ಮಾಡಿದ ಭಗವಂತ, ಮಹತತ್ತ್ವದ ಸೃಷ್ಟಿಮಾಡಿ, ಬ್ರಹ್ಮಾಂಡದ ಸೃಷ್ಟಿಮಾಡಿದ.

ಯಸ್ಯಾವಯವಸಂಸ್ಥಾನೈಃ ಕಲ್ಪಿತೋ ಲೋಕವಿಸ್ತರಃ ।
ತದ್ವೈ ಭಗವತೋ ರೂಪಂ ವಿಶುದ್ಧಂ ಸತ್ತ್ವಮೂರ್ಜಿತಮ್ ॥೩॥

ಪಶ್ಯಂತ್ಯದೋ ರೂಪಮದಭ್ರಚಕ್ಷುಷಃ ಸಹಸ್ರಪಾದೋರುಭುಜಾನನಾದ್ಭುತಮ್ ।
ಸಹಸ್ರಮೂರ್ಧಶ್ರವಣಾಕ್ಷಿನಾಸಿಕಂ ಸಹಸ್ರಮೌಳ್ಯಂಬರಕುಂಡಲೋಲ್ಲಸತ್ ॥೪॥

ಭಗವಂತನ ಬೇರೆಬೇರೆ ಅವಯವಗಳ ನೆಲೆಯಿಂದ ಬೇರೆಬೇರೆ ಲೋಕಗಳ ಸೃಷ್ಟಿಯಾಯಿತು. ಭಗವಂತನ ಪಾದದಿಂದ ಭೂಮಿಯ ಸೃಷ್ಟಿ, ನಾಭಿಯಿಂದ ಅಂತರಿಕ್ಷ ಸೃಷ್ಟಿ, ಶಿರಸ್ಸಿನಿಂದ ಸ್ವರ್ಗದ ಸೃಷ್ಟಿ. ಅರ್ಥಾತ್: ಸಮಸ್ತ ಬ್ರಹ್ಮಾಂಡದೊಳಗೆ ಭಗವಂತ ವಿರಾಟ ರೂಪದಿಂದ ವ್ಯಾಪಿಸಿನಿಂತ. ದೋಷರಹಿತನಾದ ಆತನ ಆಯಾ ಅವಯವಗಳೇ ಆಯಾ ಲೋಕಗಳ ಉತ್ಪತ್ತಿಸ್ಥಾನ. ಇದೇ ಆತನ ಎರಡನೇ ಪುರುಷರೂಪ.

ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಮ್ ।
ಯಸ್ಯಾಂಶಾಂಶೇನ ಸೃಜ್ಯಂತೇ ದೇವತಿರ್ಯಙ್ನರಾದಯಃ ॥೫॥

ಭಗವಂತನ ಪುರುಷರೂಪವೇ ಮುಂದಿನ ಎಲ್ಲಾ ರೂಪಗಳ ಬೀಜ. ಆತನ ಪುರುಷರೂಪದಿಂದಲೇ ಇತರ ರೂಪಗಳ ಅಭಿವ್ಯಕ್ತವಾಗುತ್ತದೆ. ಇದು ಒಂದು ದೀಪದಿಂದ ಇನ್ನೊಂದು ದೀಪ ಹಚ್ಚಿದಂತೆ. ಹೇಗೆ ಎಲ್ಲಾ ರೂಪಗಳು ಪುರುಷರೂಪದಿಂದ ಅಭಿವ್ಯಕ್ತವಾಗುತ್ತವೋ, ಅದೇ ರೀತಿ ಕೊನೆಗೆ ಹೋಗಿ ಸೇರುವುದು ಅದೇ ಪುರುಷರೂಪದಲ್ಲಿ. ಭಗವಂತ ಈ ಬ್ರಹ್ಮಾಂಡದಲ್ಲಿ ದೇವತೆಗಳು, ಪ್ರಾಣಿಗಳು, ಮನುಷ್ಯರು ಹಾಗೂ ಅಸಂಖ್ಯ ಜೀವಜಾತಗಳನ್ನು ಸೃಷ್ಟಿಸಿ, ತನ್ನ ಅನಂತ ಅಂಶಗಳಿಂದ ಪ್ರತಿಯೊಂದು ಜೀವರೊಳಗೆ ತುಂಬಿದ. ಇದು ಸೃಷ್ಟಿಗೆ ಕಾರಣವಾದ ಮೂರನೇ ಪುರುಷರೂಪ.

ಸೃಷ್ಟಿಯ ಮೊದಲ ಮನ್ವಂತರ ಸ್ವಾಯಂಭುವ ಮನ್ವಂತರ. ಆನಂತರ ಸ್ವಾರೋಚಿಷ, ಉತ್ತಮ, ರೈವತ, ತಾಪಸ, ಚಾಕ್ಷುಷ ಮನ್ವಂತರಗಳು. ಈ ಆರು ಮನ್ವಂತರಗಳು ಈ ಕಲ್ಪದಲ್ಲಿ ಈಗಾಗಲೇ ಸಂದುಹೋದ ಮನ್ವಂತರಗಳು. ಈಗ ನಡೆಯುತ್ತಿರುವ ಮನ್ವಂತರ-ವೈವಸ್ವತ ಮನ್ವಂತರ. [ಭೂಮಿಯ ಆಯಸ್ಸು ಒಂದು ದಿನಕಲ್ಪ. ಅದು ಚತುರ್ಮುಖನ ಒಂದು ಹಗಲು. ಒಂದು ದಿನಕಲ್ಪದಲ್ಲಿ ೧೪ ಮನ್ವಂತರಗಳು. ಈ ೧೪ ಮನ್ವಂತರಗಳನ್ನು ೧೪

ಮಂದಿ ಮನುಗಳು ನಿಯಂತ್ರಿಸುತ್ತಾರೆ. ಒಂದು ಮನ್ವಂತರಕಾಲ ಎಂದರೆ ಸುಮಾರು ೭೧ ಯುಗಚಕ್ರ ಅಥವಾ ೩೦,೮೫,೭೦,೦೦೦ ವರ್ಷಗಳು. ಇಂತಹ ೧೪ ಮನ್ವಂತರಗಳು ಹಾಗೂ ಮನ್ವಂತರಗಳ ನಡುವಿನ ಪ್ರಳಯಕಾಲ (೨೦,೦೦೦ವರ್ಷಗಳು) ಸೇರಿದಾಗ ಅದು ಒಂದು ದಿನಕಲ್ಪ. ಅಂದರೆ ೪೩೨ಕೋಟಿ ವರ್ಷಗಳು.]

ಸ ಏವ ಪ್ರಥಮಂ ದೇವಃ ಕೌಮಾರಂ ಸರ್ಗಮಾಸ್ಥಿತಃ ।
ಚಚಾರ ದುಶ್ಚರಂ ಬ್ರಹ್ಮಾ ಬ್ರಹ್ಮಚರ್ಯಮಖಂಡಿತಮ್ ॥೬॥

ತಾನು ಸೃಷ್ಟಿಸಿದ ಪ್ರಪಂಚದಲ್ಲಿ ಮೊಟ್ಟಮೊದಲು ಸ್ವಾಯಂಭುವ ಮನ್ವಂತರದಲ್ಲಿ ಭಗವಂತ ಸನತ್ಕುಮಾರನಾಗಿ ಅವತರಿಸಿದ. ಇದನ್ನು ಕೆಲವರು ಚತುರ್ಸನಾವತಾರ ಎಂದು ಹೇಳುತ್ತಾರೆ. ಸನಕ-ಸನಂದನ-ಸನಾತನ-ಸನತ್ಕುಮಾರ ಈ ನಾಲ್ಕು ಮಂದಿ 'ಸನ'ರಲ್ಲಿನ ಸನತ್ಕುಮಾರನೇ-ಭಗವಂತನ ರೂಪ ಎಂದು ಹಲವು ವ್ಯಾಖ್ಯಾನಕಾರರು ಹೇಳಿದ್ದಾರೆ. ಆದರೆ ಅದು ಸರಿಯಲ್ಲ. ಏಕೆಂದರೆ ಆ ಸನತ್ಕುಮಾರ ಒಬ್ಬ ಋಷಿ. ಆತ ಬ್ರಹ್ಮಪುತ್ರ. ಅವನೇ ವಿಷ್ಣುಪುತ್ರನಾಗಿ ಕಾಮನಾದ, ಶಿವಪುತ್ರನಾಗಿ ಷಣ್ಮುಖ/ಸ್ಕಂಧನಾದ. ಆದ್ದರಿಂದ ಆ ಋಷಿಯೇ ಬೇರೆ, ಭಗವಂತನ ಈ ಅವತಾರವೇ ಬೇರೆ. ಬ್ರಹ್ಮಪುರಾಣದಲ್ಲಿ ಹೇಳುವಂತೆ: ಸನತ್ಕುಮಾರ ಋಷಿಗೆ ಬ್ರಹ್ಮಚರ್ಯದ ಉಪದೇಶ ಮಾಡಿದ ಮನ್ವಂತರದ ಮೊಟ್ಟಮೊದಲ ಭಗವಂತನ ಅವತಾರವೇ 'ಸನತ್ಕುಮಾರ ರೂಪ'. ಈ ರೂಪದಲ್ಲೇ ಭಗವಂತ ಚತುರ್ಮುಖನಿಗೆ ವೇದೋಪದೇಶ ಮಾಡಿದ. ಅಖಂಡ ಬ್ರಹ್ಮಚರ್ಯ ಸಾಧನೆಯನ್ನು ನಡೆದು ತೋರಿದ ಅವತಾರವಿದು. ಇದು ಸುಮಾರು ಇನ್ನೂರು ಕೋಟಿ ವರ್ಷಗಳ ಹಿಂದೆ ನಡೆದ ಮನ್ವಂತರದ ಮೊದಲ ಅವತಾರ.

ದ್ವಿತೀಯಂ ತು ಭವಾಯಾಸ್ಯ ರಸಾತಳಗತಾಂ ಮಹೀಮ್ ।
ಉದ್ಧರಿಷ್ಯನ್ನುಪಾದತ್ತ ಯಜ್ಞೇಶಃ ಸೌಕರಂ ವಪುಃ ॥೭॥

ಭಗವಂತನ ಎರಡನೇ ಅವತಾರ ವರಾಹ ಅವತಾರ. ಭಗವಂತ ವರಾಹ ರೂಪಿಯಾಗಿ ಎರಡು ಬಾರಿ ಅವತರಿಸಿರುವುದನ್ನು ಕಾಣುತ್ತೇವೆ. ಒಂದು ಸ್ವಾಯಂಭುವ ಮನ್ವಂತರದಲ್ಲಿ ಹಾಗೂ ಇನ್ನೊಂದು ವೈವಸ್ವತ ಮನ್ವಂತರದಲ್ಲಿ. ಸ್ವಾಯಂಭುವ ಮನ್ವಂತರದಲ್ಲಿ ಮೊದಲ ವರಾಹ ಅವತಾರವಾಗಿರುವುದರಿಂದ ಕಾಲಾನುಕ್ರಮದಲ್ಲಿ[Chronological order] ಅದು ಭಗವಂತನ ಎರಡನೇ ಅವತಾರ. ದೈತ್ಯ ಶಕ್ತಿಯ ಪ್ರಭಾವದಿಂದಾಗಿ ಈ ಭೂಮಿ ತನ್ನ ಕಕ್ಷೆಯಿಂದ ಕಳಚಿಕೊಂಡಾಗ, ವರಾಹರೂಪದಲ್ಲಿ ಬಂದು ಭೂಮಿಯನ್ನು ಮರಳಿ ಕಕ್ಷೆಯಲ್ಲಿಟ್ಟ ಅವತಾರವಿದು. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಪುತ್ರನಾದ ಆದಿದೈತ್ಯ ಹಿರಣ್ಯಾಕ್ಷನನ್ನು ವರಾಹರೂಪನಾಗಿ ಭಗವಂತ ಸಂಹಾರ ಮಾಡಿದರೆ, ವೈವಸ್ವತ ಮನ್ವಂತರದಲ್ಲಿ ಅದಿತಿ-ಕಾಶ್ಯಪರ ಮಗನಾದ ಹಿರಣ್ಯಾಕ್ಷನನ್ನು ಮರಳಿ ವರಾಹರೂಪಿಯಾಗಿ ಸಂಹರಿಸಿದ. [ವೈಜ್ಞಾನಿಕವಾಗಿ ಭೂಮಿ ಎರಡು ಬಾರಿ ಕಕ್ಷೆಯಿಂದ ಕಳಚಿಕೊಂಡಿರುವುದು ಮತ್ತು ಅದು ಮರಳಿ ತನ್ನ ಕಕ್ಷೆಗೆ ಮರಳಿರುವ ಕುರಿತು Velikovsky ಬರೆದಿರುವ 'Words in collision' ಪುಸ್ತಕದಲ್ಲಿ ಪ್ರಸ್ತಾಪವಿದೆ. ಅಲ್ಲಿ ಆತ ಭಾಗವತವನ್ನು ಉಲ್ಲೇಖಿಸಿರುವುದನ್ನು ಕಾಣಬಹುದು]

ತೃತೀಯಮೃಷಿಸರ್ಗಂ ವೈ ದೇವರ್ಷಿತ್ವಮುಪೇತ್ಯ ಸಃ ।
ತಂತ್ರಂ ಸಾತ್ವತಮಾಚಷ್ಟ ನೈಷ್ಕರ್ಮ್ಯಂ ಕರ್ಮಣಾಂ ಯತಃ ॥೮॥

ಸ್ವಾಯಂಭುವ ಮನ್ವಂತರದಲ್ಲಿ ಆದ ಭಗವಂತನ ಮೂರನೇ ಅವತಾರವನ್ನು ಈ ಶ್ಲೋಕ ವಿವರಿಸುತ್ತದೆ. ಹೆಚ್ಚಿನ ವ್ಯಾಖ್ಯಾನಕಾರರು ಈ ಅವತಾರವನ್ನು ಭಗವಂತನ 'ನಾರದ ರೂಪದ ಅವತಾರ' ಎಂದು ಹೇಳಿರುವುದನ್ನು ಕಾಣುತ್ತೇವೆ. ಆದರೆ ದೇವರ್ಷಿ ನಾರದ ಭಗವಂತನ ಅವತಾರವಲ್ಲ. ಇದು ನಾರದಾದಿ ಸಮಸ್ತ ದೇವತೆಗಳಿಗೂ ಋಷಿಯಾಗಿ ಉಪದೇಶ ಮಾಡಿದ ಭಗವಂತನ 'ಐತರೇಯ' ನಾಮಕ ರೂಪ. ಯಾರಿಂದ ಐತರೇಯ ಉಪನಿಷತ್ತು, ಐತರೇಯ ಬ್ರಾಹ್ಮಣ ಮತ್ತು ಐತರೇಯ ಅರಣ್ಯಕ ಎನ್ನುವ ವೇದಭಾಗ ಆವಿಷ್ಕಾರವಾಯಿತೋ, ಅಂತಹ ಭಗವಂತನ ವಿಶಿಷ್ಠವಾದ ಮೂರನೇ ಅವತಾರವೇ ಐತರೇಯ ರೂಪ. ಬ್ರಹ್ಮಪುರಾಣದಲ್ಲಿ ಹೇಳುವಂತೆ: ಭಗವಂತನ ಈ ಅವತಾರದ ಇನ್ನೊಂದು ಹೆಸರು ಮಹಿದಾಸ. ಈ ಹಿನ್ನೆಲೆಯಲ್ಲಿ ಪುರಾಣದಲ್ಲಿ ಒಂದು ರೋಚಕವಾದ ಕಥೆ ಇದೆ. ಅದನ್ನು ಭಾಗವತ ವಿವರಿಸುವುದಿಲ್ಲ. ಭಾಗವತದ ಮುಂದಿನ ಶ್ಲೋಕಕ್ಕೆ ಹೋಗುವ ಮುನ್ನ ನಾವು ಭಗವಂತನ 'ಐತರೇಯ ಮಹಿದಾಸ' ರೂಪದ ಕಥೆಯನ್ನು ಸಂಕ್ಷಿಪ್ತವಾಗಿ ತಿಳಿದು ಮುಂದುವರಿಯೋಣ.

ಐತರೇಯನ ತಂದೆಯ ಹೆಸರು 'ವಿಶಾಲ' ಎನ್ನುವ ಋಷಿ. ಈತನ ಇಬ್ಬರು ಹೆಂಡತಿಯರಲ್ಲಿ ಒಬ್ಬಳ ಹೆಸರು 'ಇತರ' ಹಾಗೂ ಆಕೆಯಲ್ಲಿ ಹುಟ್ಟಿದವನೇ ಐತರೇಯ. ಐತರೇಯ ಮಗುವಾಗಿದ್ದಾಗ ಬಹಳ ಅಳುತ್ತಿದ್ದನಂತೆ. ಅದೆಷ್ಟು ಅಳುತ್ತಿದ್ದನೆಂದರೆ ಒಂದು ದಿನ ಆತನ ಅಳುವನ್ನು ಕೇಳಿ ತಾಯಿಗೂ ಕೋಪ ಬಂದು, "ಬಾಯಿ ಮುಚ್ಚು" ಎಂದು ಗದರಿದಳಂತೆ. ಆಕೆ ಆ ರೀತಿ ಹೇಳಿದಾಗ ಮಗು ಬಾಯಿ ಮುಚ್ಚಿತು. ಆದರೆ ಅಂದಿನಿಂದ ಮಗು ಮತ್ತೆ ಬಾಯಿ ತೆರೆದು ಮಾತನಾಡಲಿಲ್ಲ. ಇದರಿಂದಾಗಿ ಎಲ್ಲರೂ ಮಗುವನ್ನು 'ಮೂಗ' ಎಂದೇ ತಿಳಿದರು. ಆತನ ಸಹೋದರರು ತಂದೆಯಿಂದ ವಿದ್ಯಾಭ್ಯಾಸ ಕಲಿತು ಖ್ಯಾತ ಋಷಿಗಳಾದರು. ಆದರೆ ಐತರೇಯ ಮೂಗನಂತೇ ಇದ್ದುಬಿಟ್ಟ. ಒಂದು ದಿನ ಐತರೇಯನ ತಂದೆ ತನ್ನ ಇತರ ಮಕ್ಕಳೊಂದಿಗೆ ಯಾವುದೋ ಒಂದು ಯಜ್ಞ ಕಾರ್ಯಕ್ಕಾಗಿ ತೆರಳಿದ್ದ. ಆದರೆ ಆತ ಐತರೇಯ ಮೂಗನೆಂದು ತಿಳಿದಿದ್ದರಿಂದ, ಅವನನ್ನು ಮನೆಯಲ್ಲೇ ಬಿಟ್ಟು ಹೋಗಿದ್ದ. ಆಗ ಹೆತ್ತ ಕರುಳಿಗೆ ಬೇಸರವಾಗುತ್ತದೆ. ಆಕೆ ಕಣ್ಣೀರು ತೆಗೆದು ಹೇಳುತ್ತಾಳೆ: "ನಿನಗೆ ಮಾತು ಬರುತ್ತಿದ್ದರೆ ತಂದೆ ಜೊತೆಯಲ್ಲಿ ಹೋಗಿ ಯಜ್ಞದಲ್ಲಿ ಪಾಲ್ಗೊಂಡು ವೇದಮಂತ್ರ ಹೇಳಬಹುದಿತ್ತು. ಆದರೆ ನನ್ನ ದೌರ್ಭಾಗ್ಯದಿಂದ ನಿನಗೆ ಮಾತೇ ಬರುತ್ತಿಲ್ಲ" ಎಂದು. ಆಗ ಬಾಲಕ ಐತರೇಯ ಮಾತನಾಡುತ್ತಾನೆ ಮತ್ತು ಹೇಳುತ್ತಾನೆ: "ಅಮ್ಮಾ, ನೀನು ಬಾಯಿ ಮುಚ್ಚು ಎಂದಿದ್ದಕ್ಕೆ ನಾನು ಮಾತನಾಡುತ್ತಿಲ್ಲ. ನೀನು ಅನುಮತಿ ಕೊಟ್ಟರೆ ನಾನು ವೇದಮಂತ್ರ ಹೇಳಬಲ್ಲೆ" ಎಂದು. ಆಗ ತಾಯಿಗೆ ಎಲ್ಲಿಲ್ಲದ ಸಂತೋಷವಾಗುತ್ತದೆ. ಆಕೆ ಅನುಮತಿ ಕೊಟ್ಟು ಆತನನ್ನು ತಂದೆ ಇದ್ದಲ್ಲಿಗೆ ಕಳುಹಿಸಿಕೊಡುತ್ತಾಳೆ. ಇದ್ದಕ್ಕಿದ್ದಂತೆ ಯಾಗಶಾಲೆಗೆ ಬಂದ ಐತರೇಯನನ್ನು ಕಂಡು ತಂದೆಗೆ ಕೋಪ ಬರುತ್ತದೆ. ಮೂಗನಾದ ತನ್ನ ಮಗನಿಂದಾಗಿ ಎಲ್ಲರ ಮುಂದೆ ತನ್ನ ಮುಖಭಂಗವಾಗುತ್ತದೆ ಎನ್ನುವ ಭಯ ಆತನಿಗೆ. ನೇರವಾಗಿ ಬಂದ ಐತರೇಯ ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಬಯಸುತ್ತಾನೆ. ಆಗ ತಂದೆ ಕೋಪದಿಂದ ಆತನನ್ನು ದೂರ ತಳ್ಳುತ್ತಾನೆ. ಇದನ್ನು ಕಂಡ ಭೂಮಾತೆಗೆ ತಡೆಯಲಾಗುವುದಿಲ್ಲ. ಆಕೆ ತಕ್ಷಣ ಐತರೇಯನಿಗೆ ಆಸನವನ್ನು ಕೊಡುತ್ತಾಳೆ. ಐತರೇಯ ಹೀಗೆ ಭೂಮಿಯಿಂದ ಎದ್ದು ಬಂದ ಆಸನದ ಮೇಲೆ ಕುಳಿತು, ನಿರರ್ಗಳವಾಗಿ, ಯಾರೂ ಎಂದೂ ಕೇಳರಿಯದ ವೇದಮಂತ್ರವನ್ನು ಉಚ್ಛರಿಸುತ್ತಾನೆ. ಐತರೇಯನ ಈ ಪ್ರವಚನವನ್ನು ಬ್ರಹ್ಮಾದಿ-ದೇವತೆಗಳು, ಸ್ವಯಂ ಶ್ರೀಲಕ್ಷ್ಮಿ ಕುಳಿತು ಕೇಳಿಸಿಕೊಳ್ಳುತ್ತಾರೆ. ಇದೇ ಐತರೇಯ ಋಷಿ ರೂಪದಲ್ಲಿ ಭಗವಂತನಿಂದ ಭೂಮಿಗಿಳಿದು ಬಂದ

೪೦ ಅಧ್ಯಾಯಗಳ ಐತರೇಯ ಬ್ರಾಹ್ಮಣ, ೧೪ ಅಧ್ಯಾಯಗಳ ಐತರೇಯ ಅರಣ್ಯಕ ಮತ್ತು ೬ ಅಧ್ಯಾಯಗಳ ಐತರೇಯ ಉಪನಿಷತ್ತು. ಮಹಿದತ್ತವಾದ ಆಸನದಲ್ಲಿ ಕುಳಿತವನಾದ್ದರಿಂದ ಐತರೇಯನಿಗೆ ಮಹಿದಾಸ ಎನ್ನುವ ಹೆಸರು ಬಂತು. ಅಷ್ಟೇ ಅಲ್ಲದೆ, ಮಹಾತ್ಮರಾದ ಬ್ರಹ್ಮಾದಿ ದೇವತೆಗಳು ಆತನ ಪ್ರವಚನ ಕೇಳಿರುವುದರಿಂದ ಆತ ಮಹಿದಾಸನಾದ. ಐತರೇಯನ ಪಾಂಡಿತ್ಯವನ್ನು ಕಂಡು ಆತನ ಮಲತಾಯಿಗೂ ಕಣ್ತೆರೆಯಿತು. ಮಹಿಳೆಯ ಮದ ನಿರಸನ ಮಾಡಿರುವುದರಿಂದಲೂ ಐತರೇಯ ಮಹಿದಾಸನಾದ.

ಹೀಗೆ ಒಂದು ವೇದದ ಆವಿಷ್ಕಾರಕ್ಕೋಸ್ಕರ ಋಷಿಯಾಗಿ, ಮಹಿದಾಸನಾಗಿ ಭಗವಂತ ಅವತರಿಸಿದ ಎನ್ನುವ ಕಥೆಯನ್ನು ಪುರಾಣ ಹೇಳುತ್ತದೆ. ಇಂದು ಲಭ್ಯವಿರುವ ಋಕ್ ಸಂಹಿತೆಯ ಹತ್ತು ಮಂಡಲಗಳಿಗೆ ಐತರೇಯ ಸಂಹಿತ ಎಂದೇ ಹೆಸರು. ಇಂತಹ ಅಖಂಡವಾದ ಬ್ರಾಹ್ಮಣಾರಣ್ಯಕ-ಉಪನಿಷತ್ತುಗಳ ಆವಿಷ್ಕಾರವಾಗಿರುವ ಭಗವಂತನ ಸ್ವಾಯಂಭುವ ಮನ್ವಂತರದ ಅಪೂರ್ವ ರೂಪವೇ ಭಗವಂತನ ಮೂರನೇ ಅವತಾರ.

[ಓದುಗರಿಗೆ ಸೂಚನೆ: ಐತರೇಯ ಮಹಿದಾಸ ಎನ್ನುವ ಒಬ್ಬ ಋಷಿ ಕೂಡಾ ಇದ್ದಾನೆ. ಈತನ ತಾಯಿಯ ಹೆಸರು ಕೂಡಾ 'ಇತರ'. ಈ ಋಷಿಗೂ ಭಗವಂತನ ಐತರೇಯ ಅವತಾರಕ್ಕೂ ಯಾವುದೇ ಸಂಬಂಧವಿಲ್ಲ]

**ತುರ್ಯೇ ಧರ್ಮಕಲಾಸರ್ಗೇ ನರನಾರಾಯಣಾವೃಷೀ ।**
**ಭೂತ್ವಾಽಽತ್ಮೋಪಶಮೋಪೇತಮಕರೋದ್ದುಶ್ಚರಂ ತಪಃ ॥೯॥**

ಭಗವಂತನ ನಾಲ್ಕನೇ ಅವತಾರ ನರ-ನಾರಾಯಣಾವತಾರ. ನರ ಮತ್ತು ನಾರಾಯಣ ಅನ್ನುವುದು ಎರಡು ಅವತಾರವಲ್ಲ. ನರನಲ್ಲಿ ಭಗವಂತನ ವಿಶೇಷ ಆವೇಶ ಹಾಗೂ ನಾರಾಯಣ ಭಗವಂತನ ಅವತಾರ. ಸ್ವಾಯಂಭುವ ಮನುವಿಗೆ ದೇವಹೂತಿ, ಆಕೂತಿ ಮತ್ತು ಪ್ರಸೂತಿ ಎನ್ನುವ ಮೂರು ಮಂದಿ ಹೆಣ್ಣುಮಕ್ಕಳಿದ್ದರು. ಈ ಮೂವರಲ್ಲಿ ಪ್ರಸೂತಿಯನ್ನು ದಕ್ಷಪ್ರಜಾಪತಿ ಮದುವೆಯಾದ. ಇವರಿಬ್ಬರ ದಾಂಪತ್ಯದಲ್ಲಿ ಹುಟ್ಟದ ಮಕ್ಕಳಲ್ಲಿ ಕೊನೆಯ ಮಗಳ ಹೆಸರು ಮೂರ್ತಿ. ಈಕೆಯನ್ನು ಧರ್ಮದೇವತೆ ಮದುವೆಯಾದ. ಧರ್ಮ ಮತ್ತು ಮೂರ್ತಿಯ ದಾಂಪತ್ಯದಲ್ಲಿ ಹುಟ್ಟಿದ ಮಕ್ಕಳೇ -ಹರಿ, ಕೃಷ್ಣ, ನರ ಮತ್ತು ನಾರಾಯಣ. ಭಾಗವತ ಈ ನಾಲ್ಕು ಮಕ್ಕಳಲ್ಲಿ ಹರಿ ಮತ್ತು ಕೃಷ್ಣನ ಕುರಿತು ವಿವರಣೆ ನೀಡುವುದಿಲ್ಲ.

ನರ-ನಾರಾಯಣರು ತಮ್ಮ ಮನೋನಿಗ್ರಹದಿಂದ ಕೂಡಿದ ದುಶ್ಚರವಾದ ತಪಸ್ಸು ಮಾಡಿದರು ಎನ್ನುತ್ತದೆ ಈ ಶ್ಲೋಕ. ಇಲ್ಲಿ ನಮಗೊಂದು ಪ್ರಶ್ನೆ ಮೂಡುತ್ತದೆ: ದೇವರು ಕೂಡಾ ಮನೋನಿಗ್ರಹ ಮಾಡಿ ತಪಸ್ಸು ಮಾಡುವುದು ಎಂದರೇನು? ಇದಕ್ಕೆ ಉತ್ತರಿಸುತ್ತಾ ಆಚಾರ್ಯ ಮಧ್ವರು ಹೇಳುತ್ತಾರೆ: **"ಲೋಕದೃಷ್ಟ್ಯಾ ಆತ್ಮಶಮೋಪೇತಂ"** ಎಂದು. ಅಂದರೆ ಆತ್ಮಶಮವನ್ನಿಟ್ಟುಕೊಂಡು, ಮನಸ್ಸನ್ನು ನಿಗ್ರಹ ಮಾಡಿ ತಪಸ್ಸು ಮಾಡುವುದು ಹೇಗೆ ಎಂದು ಪ್ರಪಂಚಕ್ಕೆ ತೋರಿದ ಭಗವಂತನ ವಿಶಿಷ್ಠ ಅವತಾರವಿದು. ಹಿಮಾಲಯದಲ್ಲಿರುವ ಬದರಿಕಾಶ್ರಮದಲ್ಲಿ ಇಂದಿಗೂ ನರ ಪರ್ವತ ಮತ್ತು ನಾರಾಯಣ ಪರ್ವತ ಎನ್ನುವ ಎರಡು ಪರ್ವತಗಳಿವೆ. ಸ್ವಾಯಂಭುವ ಮನ್ವಂತರದಲ್ಲಿ ಆದ ಈ ಅವತಾರವನ್ನು ಭಗವಂತ ಇನ್ನೂ ಉಪಸಂಹಾರ ಮಾಡಿಲ್ಲ. ಹಿಮಾಲಯದ ತಪ್ಪಲಿನಲ್ಲಿ ಇಂದಿಗೂ ಭಗವಂತ ಆ ರೂಪದಲ್ಲಿದ್ದಾನೆ ಎನ್ನುತ್ತಾರೆ ಜ್ಞಾನಿಗಳು.

ಪಂಚಮಃ ಕಪಿಲೋ ನಾಮ ಸಿದ್ಧೇಶಃ ಕಾಲವಿಪ್ಲುತಮ್ ।
ಪ್ರೋವಾಚಾಸುರಯೇ ಸಾಂಖ್ಯಂ ತತ್ತ್ವಗ್ರಾಮವಿನಿರ್ಣಯಮ್ ॥೧೦॥

ಸ್ವಾಯಂಭುವ ಮನ್ವಂತರದಲ್ಲಿ ಆದ ಭಗವಂತನ ಪಂಚಮ ಅವತಾರ ಕಪಿಲ ವಾಸುದೇವ ಅವತಾರ. ಸ್ವಾಯಂಭುವ ಮನುವಿನ ಮಗಳು ದೇವಹೂತಿ ಮತ್ತು ಕರ್ದಮಪ್ರಜಾಪತಿಯ ದಾಂಪತ್ಯದಲ್ಲಿ ಕಪಿಲಮುನಿಯ ರೂಪದಲ್ಲಿ ಭಗವಂತನ ಅವತಾರವಾಯಿತು. ಕಪಿಲ ವಾಸುದೇವ ರೂಪದಲ್ಲಿ ಭಗವಂತ 'ಆಸುರಿ' ಎನ್ನುವ ತನ್ನ ಶಿಷ್ಯನ ಮುಖೇನ ವೈದಿಕ ಸಾಂಖ್ಯವನ್ನು ಪ್ರಪಂಚಕ್ಕೆ ನೀಡಿದ. ಭಗವಂತನ ಈ ಅವತಾರವನ್ನು ಕಪಿಲ ವಾಸುದೇವ ಎಂದು ಕರೆಯಲು ಒಂದು ವಿಶೇಷ ಕಾರಣವಿದೆ. ಸಾಂಖ್ಯವನ್ನು ಉಪದೇಶಿಸಿದ ಕಪಿಲ ಎನ್ನುವ ಒಬ್ಬ ಋಷಿ ಕೂಡಾ ಇದ್ದಾನೆ. ಆತನ ಶಿಷ್ಯನ ಹೆಸರು ಕೂಡಾ ಆಸುರಿ. ಆದರೆ ಆತ ಉಪದೇಶಿಸಿದ ಸಾಂಖ್ಯ ಪೂರ್ಣ ಅವೈದಿಕವಾದ ನಿರೀಶ್ವರ ಸಾಂಖ್ಯ. ಈ ಕಪಿಲ ಕಪಿಲ ವಾಸುದೇವನಲ್ಲ.

ಕಾಲಕ್ರಮದಲ್ಲಿ ನಷ್ಟವಾಗಿ ಹೋಗಿರುವ ವೈದಿಕ ಸಾಂಖ್ಯವನ್ನು ಭಗವಂತ ಕಪಿಲ ವಾಸುದೇವನಾಗಿ ಆಸುರಿ ಎನ್ನುವ ಋಷಿಗೆ ಉಪದೇಶಿಸಿದ. [ಮೂಲತಃ ಭಗವಂತ ಸಾಂಖ್ಯಶಾಸ್ತ್ರವನ್ನು ಮೊದಲು ಉಪದೇಶಿಸಿರುವುದು ತನ್ನ ತಾಯಿ ದೇವಹೂತಿಗೆ. ಆನಂತರ ಅದನ್ನು ಆಸುರಿ ಎನ್ನುವ ಶಿಷ್ಯನಿಗೆ ಉಪದೇಶಿಸಿದ]. ಇದು ಕೇವಲ ವಿಶ್ವವನ್ನು ಅಂಕೆಯಲ್ಲಿ ನಿರೂಪಿಸುವ ಶಾಸ್ತ್ರವಷ್ಟೇ ಅಲ್ಲ, ಇಡೀ ಅಧ್ಯಾತ್ಮವನ್ನು ಸಂಖ್ಯೆಯ ಮೂಲಕ ಹೇಳುವ, ಯಥಾರ್ಥ ತಿಳುವಳಿಕೆ ಕೊಡುವ ಅಪೂರ್ವಶಾಸ್ತ್ರ ಕೂಡಾ ಹೌದು.

ಷಷ್ಠಮತ್ರೇರಪತ್ಯತ್ವಂ ವೃತಃ ಪ್ರಾಪ್ತೋಽನಸೂಯಯಾ ।
ಆನ್ವೀಕ್ಷಿಕೀಮಳರ್ಕಾಯ ಪ್ರಹ್ಲಾದಾದಿಭ್ಯ ಊಚಿವಾನ್ ॥೧೧॥

ಕಪಿಲ ವಾಸುದೇವನ ಸಹೋದರಿ ಅನುಸೂಯೆ. ಈಕೆಯ ಪತಿ ಅತ್ರಿ. ಅತ್ರಿ-ಅನುಸೂಯೆಯರು ತಮಗೆ ಸೃಷ್ಟಿ-ಸ್ಥಿತಿ-ಸಂಹಾರ ಮಾಡುವ ಭಗವಂತ ಮಗನಾಗಿ ಹುಟ್ಟಬೇಕೆಂದು ತಪಸ್ಸು ಮಾಡುತ್ತಾರೆ. ಈ ತಪಸ್ಸಿನ ಫಲವಾಗಿ ಅವರಿಗೆ ಮೂರು ಮಂದಿ ಮಕ್ಕಳಾಗುತ್ತಾರೆ. ಸ್ವಯಂ ಸ್ಥಿತಿಗೆ ಕಾರಣನಾದ ಭಗವಂತ 'ದತ್ತ' ನಾಮಕನಾಗಿ ಅವರಲ್ಲಿ ಅವತರಿಸುತ್ತಾನೆ. ಅತ್ರೇಯ ಎಂದರೆ ಅತ್ರಿಯ ಮಗ. ಹೀಗಾಗಿ ಅತ್ರಿಯ ಮಗನಾದ ದತ್ತ (ದತ್ತ+ಅತ್ರೇಯ) ದತ್ತಾತ್ರಯ ಎಂದು ಹೆಸರಾಗುತ್ತಾನೆ. ಅತ್ರಿಯ ಎರಡನೇ ಮಗ ದುರ್ವಾಸ. ಈತ ಸಂಹಾರ ದೇವತೆ ಶಿವನ ಅವತಾರ. ಬ್ರಹ್ಮನಿಗೆ ಭೂಮಿಯಲ್ಲಿ ಜನ್ಮವಿಲ್ಲದ್ದರಿಂದ, ಚತುರ್ಮುಖನಿಂದ ಆವಿಷ್ಠನಾದ 'ಚಂದ್ರ' ಅನುಸೂಯೆ-ಅತ್ರಿಯರ ಮೂರನೇ ಮಗನಾಗಿ ಹುಟ್ಟಿದ. [ಓದುಗರಿಗೆ ಸೂಚನೆ: ಸಾಮಾನ್ಯವಾಗಿ ದತ್ತಾತ್ರಯ ಎಂದಾಗ ಮೂರು ತಲೆ ಏಕ ಶರೀರ ಮತ್ತು ತಲೆಯಲ್ಲಿ ಚಂದ್ರನಿರುವ ಚಿತ್ರವನ್ನು ಚಿತ್ರಕಾರರು ಚಿತ್ರಿಸುತ್ತಾರೆ. ಆದರೆ ಶಾಸ್ತ್ರದಲ್ಲಿ ಎಲ್ಲೂ ಈ ರೀತಿ ರೂಪದ ವಿವರಣೆ ಇಲ್ಲ. ದತ್ತ, ದುರ್ವಾಸ ಮತ್ತು ಚಂದ್ರ ಈ ಮೂವರು ಮೂರು ಶರೀರದಲ್ಲಿ ಅವತರಿಸಿ ಬಂದ ರೂಪಗಳು. ಇಲ್ಲಿ ಚಂದ್ರ ಎಂದರೆ ಚಂದ್ರ ಗ್ರಹವಲ್ಲ] ದತ್ತಾತ್ರಯ ರೂಪದಲ್ಲಿ ಭಗವಂತ ತತ್ತ್ವವಿದ್ಯೆ ಎನ್ನುವ ಆನ್ವೀಕ್ಷಿಕಿಯನ್ನು ಅಲರ್ಕರಾಜ, ಪ್ರಹ್ಲಾದ ಮುಂತಾದವರಿಗೆ ಉಪದೇಶಿಸಿದ. ಇದು ಭಗವಂತನ ಆರನೇ ಅವತಾರ.

ತತಃ ಸಪ್ತಮ ಆಕೂತ್ಯಾಂ ರುಚೇರ್ಯಜ್ಞೋಽಭ್ಯಜಾಯತ ।
ಸ ಯಾಮಾದ್ಯೈಃ ಸುರಗಣೈರಪಾತ್ ಸ್ವಾಯಂಭುವಾಂತರಮ್ ॥೧೨॥

ಸ್ವಾಯಂಭುವ ಮನುವಿನ ಮಗಳು ಆಕೂತಿಯನ್ನು ರುಚಿಪ್ರಜಾಪತಿ ವಿವಾಹವಾದ. ಇವರ ದಾಂಪತ್ಯ ಫಲವಾಗಿ ಇವರಿಗೆ ಗಂಡು ಮಗುವಾಗುತ್ತದೆ. ಆತನೇ ಯಜ್ಞ. ಈತನೇ ಸ್ವಾಯಂಭುವ ಮನ್ವಂತರದ ಇಂದ್ರ. ಸ್ವಾಯಂಭುವ ಮನುವನ್ನು ನಾಶಮಾಡಬೇಕೆಂದು ಅಸುರ ಶಕ್ತಿಗಳು ಒಂದಾಗಿ ಕುತಂತ್ರ ಮಾಡಿದಾಗ, ಮನು ಭಗವಂತನನ್ನು ಧ್ಯಾನ ಮಾಡುತ್ತಾನೆ. ಹೀಗೆ ಧ್ಯಾನ ಮಾಡುತ್ತಾ ಸ್ವಾಯಂಭುವ ಮನು ಕಂಡ ವೇದ ಮಂತ್ರವೇ ಇಂದಿನ ಈಶಾವಾಸ್ಯ ಉಪನಿಷತ್ತು. ಈ ಉಪನಿಷತ್ತಿಗೆ ಭಗವಂತನ ಪ್ರತಿಪಾದ್ಯ ರೂಪಮೂಲವಾದ ಹೆಸರು 'ಯಾಜ್ಞೀಯ ಮಂತ್ರೋಪನಿಷತ್ತು'. ಇದು ಯಜ್ಞ ನಾಮಕ ಭಗವಂತನನ್ನು ಸ್ತುತಿಸುವ ಉಪನಿಷತ್ತು. ವೇದ ಮಂತ್ರದಿಂದ ಮನು ಭಗವಂತನ ಧ್ಯಾನ ಮಾಡಿದಾಗ, ಭಗವಂತ ಯಜ್ಞ ನಾಮಕನಾಗಿ ಸ್ವಾಯಂಭುವ ಮನುವಿಗೆ ರಕ್ಷಣೆ ಕೊಡುತ್ತಾನೆ. ಇದು ಭಗವಂತನ ಏಳನೇ ಅವತಾರ.

ಅಷ್ಟಮೋ ಮೇರುದೇವ್ಯಾಂ ತು ನಾಭೇರ್ಜಾತ ಉರುಕ್ರಮಃ ।
ದರ್ಶಯನ್ ವರ್ತ್ಮ ಧೀರಾಣಾಂ ಸರ್ವಾಶ್ರಮನಮಸ್ಕೃತಮ್ ॥೧೩॥

ಸ್ವಾಯಂಭುವ ಮನುವಿಗೆ ಇಬ್ಬರು ಗಂಡು ಮಕ್ಕಳು. ಉತ್ತಾನಪಾದ ಮತ್ತು ಪ್ರಿಯವ್ರತ. ಪ್ರಿಯವ್ರತನ ಮಗ ಆಗ್ನೀಂದ್ರ, ಆಗ್ನೀಂದ್ರನ ಮಗ ನಾಭಿರಾಜ. ನಾಭಿರಾಜ-ಮೇರುದೇವಿ ದಂಪತಿಗಳು. ಇವರು ತಮಗೆ 'ದೇವರಂತಹ ಮಗ ಹುಟ್ಟಬೇಕು' ಎಂದು ತಪಸ್ಸು ಮಾಡಿದುದರ ಫಲವಾಗಿ ಅವರಲ್ಲಿ ಭಗವಂತ ಋಷಭದೇವನಾಗಿ ಅವತರಿಸಿದ. ಇದು ಭಗವಂತನ ಎಂಟನೇ ಅವತಾರ. ಚಕ್ರವರ್ತಿಯಾಗಿ ದೇಶವಾಳಿದ ಋಷಭದೇವ, ಕೊನೆಗೆ ಒಂದು ದಿನ ಈ ದೇಶಕ್ಕೆ ಭಾರತ ಎಂದು ಹೆಸರು ಬರಲು ಕಾರಣನಾದ ತನ್ನ ಮಗ ಭರತನಿಗೆ ಅಧಿಕಾರವನ್ನು ಒಪ್ಪಿಸಿ, ಸರ್ವಸ್ವವನ್ನೂ ತ್ಯಾಗಮಾಡಿ, ಉಟ್ಟ ಬಟ್ಟೆಯನ್ನೂ ತೊರೆದು ಬತ್ತಲಾಗಿ ಹೊರಟು, ಕೊಡಚಾದ್ರಿಗೆ(ಇಂದಿನ ಕೊಲ್ಲೂರು) ಬಂದು ನೆಲೆಸಿ, ಅಲ್ಲಿ ತನ್ನ ಯೋಗಾಗ್ನಿಯಿಂದ ಅವತಾರ ಸಮಾಪ್ತಿ ಮಾಡಿದ ಎನ್ನಲಾಗುತ್ತದೆ. ಇದೊಂದು ಮೋಹಕ ಲೀಲೆ. ಋಷಭದೇವನನ್ನು ಜೈನ ಧರ್ಮದ ಆದಿತೀರ್ಥಂಕರ ಎಂದು ಹೇಳುತ್ತಾರೆ.

ಋಷಿಭಿರ್ಯಾಚಿತೋ ಭೇಜೇ ನವಮಂ ಪಾರ್ಥಿವಂ ವಪುಃ ।
ದುಗ್ಧೇಮಾನೋಷಧೀರ್ವಿಪ್ರಾಸ್ತೇನಾಯಂ ಚ ಉಶತ್ತಮಃ ॥೧೪॥

ಸ್ವಾಯಂಭುವ ಮನ್ವಂತರದಲ್ಲಿನ ಎಂಟು ಅವತಾರಗಳ ನಂತರ ವೈವಸ್ವತ ಮನ್ವಂತರದ ತನಕ ಭಗವಂತನ ವಿಶೇಷ ಅವತಾರದ ಬಗ್ಗೆ ಭಾಗವತದಲ್ಲಿ ವಿವರಣೆ ಇಲ್ಲ. ಆದರೆ ಚಾಕ್ಷುಷ ಮನ್ವಂತರದಲ್ಲಿ ಭಗವಂತನ ಆವೇಶ ಅವತಾರವೊಂದಿದೆ. ಇದು ಉತ್ತಾನಪಾದನ ಪರಂಪರೆಯಲ್ಲಿ ಬಂದ 'ಪ್ರಥುಚಕ್ರವರ್ತಿ'ಯಲ್ಲಿ ಆವಿಷ್ಟನಾಗಿ ಭಗವಂತ ನೆಲೆಸಿದ ರೂಪ.

ಪ್ರಥುಚಕ್ರವರ್ತಿಯ ಅಜ್ಜ ಅಂಗರಾಜ. ಆತನ ಮಗ ವೇನ. 'ವೇನ' ಎಂದರೆ ಜ್ಞಾನಿ ಎನ್ನುವುದು ಒಂದರ್ಥವಾದರೆ ಲೋಕಕಂಟಕ ಎನ್ನುವುದು ಇನ್ನೊಂದು ಅರ್ಥ. ತಂದೆ ತನ್ನ ಮಗ ಜ್ಞಾನಿಯಾಗಲಿ ಎಂದು ಬಯಸಿದರೆ, ವೇನ ಲೋಕಕಂಟಕನಾಗಿ ಬೆಳೆದ. ಚಿಕ್ಕವನಿರುವಾಗಲೇ ತನ್ನ ಸಹಪಾಟಿಗಳನ್ನು ಬಾವಿಗೆ ತಳ್ಳಿ ಆನಂದಿಸುತ್ತಿದ್ದ ವಿಚಿತ್ರ ಸ್ವಭಾವ ವೇನನದ್ದಾಗಿತ್ತು! ಇಂತಹ ಮಗ ಹುಟ್ಟಿರುವುದರಿಂದ ಅಂಗರಾಜನಿಗೆ ಬೇಸರವಾಗುತ್ತದೆ. ಮಗನನ್ನು ನಿಯಂತ್ರಿಸಲು ಆತ ಅನೇಕ ರೀತಿಯಿಂದ ಪ್ರಯತ್ನಪಟ್ಟ. ಆದರೆ ಅದು ಸಾಧ್ಯವಾಗಲಿಲ್ಲ. ಕೊನೆಗೆ ಒಂದು ದಿನ ರಾಜ ಯಾರಿಗೂ ಹೇಳದೆ, ಊರುಬಿಟ್ಟು ಕಾಡಿಗೆ ಹೊರಟುಹೋದ. ಇದರಿಂದಾಗಿ 'ವೇನ' ದೇಶದ ಅಧಿಪತಿಯಾದ. ರಾಜನಾದ 'ವೇನ' ತಕ್ಷಣ "ರಾಜಾ ಪ್ರತ್ಯಕ್ಷ ದೇವತಾ, ತನ್ನನ್ನು ಬಿಟ್ಟು ದೇವರನ್ನು ಯಾರೂ ಪೂಜಿಸಕೂಡದು" ಎನ್ನುವ ಆಜ್ಞೆಯನ್ನು ಹೊರಡಿಸಿ, ದೇಶದಲ್ಲಿ ಅಧಾರ್ಮಿಕತೆಯ ವಾತಾವರಣ ನಿರ್ಮಾಣಮಾಡಿದ. ಇದರ ಪರಿಣಾಮ ದೇಶದಲ್ಲಿ ದುರ್ಭಿಕ್ಷೆ ಬಂದು ಮನುಷ್ಯರಷ್ಟೇ ಅಲ್ಲ, ಸಾವಿರಾರು ಹಸುಗಳೂ ಕೂಡಾ ಆಹಾರವಿಲ್ಲದೆ ಸಾವನ್ನಪ್ಪಿದವು. ಇಷ್ಟಾದರೂ ಕೂಡಾ ವೇನ ಪಶ್ಚಾತ್ತಾಪಪಡಲಿಲ್ಲ. ಇದರಿಂದಾಗಿ ಕೋಪಗೊಂಡ ಋಷಿಗಳು ವೇನನನ್ನು ಅಧಿಕಾರದಿಂದ ಕಿತ್ತೆಸೆದರು. ಅಷ್ಟೇ ಅಲ್ಲ, ತಮ್ಮ ತಪಶಕ್ತಿಯಿಂದ, ಹೂಂಕಾರದಿಂದ ಆತನನ್ನು ನಾಶಮಾಡಿದರು. ಋಷಿಗಳು ತಮ್ಮ ತಪಶಕ್ತಿಯಿಂದ ವೇನನನ್ನು ಮಥನಮಾಡಿ, ಅಲ್ಲಿ ಇನ್ನೊಂದು ಜೀವ ಸೃಷ್ಟಿಯಾಗುವಂತೆ ಮಾಡಿದರು. ಅವನೇ 'ಪ್ರಥುಚಕ್ರವರ್ತಿ'. ಋಷಿಗಳ ಪ್ರಾರ್ಥನೆಯಂತೆ ಭಗವಂತ ಪ್ರಥುಚಕ್ರವರ್ತಿಯಲ್ಲಿ ವಿಶೇಷವಾಗಿ ಆವಿಷ್ಠನಾಗಿ ಬಂದ.

ಪ್ರಥುಚಕ್ರವರ್ತಿ ಅಧಿಕಾರಕ್ಕೆ ಬರುವ ಮೊದಲು ಭೂಮಿಯಲ್ಲಿ ನಾಗರಿಕತೆ, ಉದ್ಯಮ, ಕಾಲುವೆಗಳು, ಕೃಷಿ, ಇತ್ಯಾದಿ ಯಾವುದೂ ಒಂದು ವ್ಯವಸ್ಥಿತ ರೀತಿಯಲ್ಲಿರಲಿಲ್ಲ. ಭೂಮಿ ಏರುಪೇರಾಗಿತ್ತು. ಜನಸಂಖ್ಯೆ ಕಡಿಮೆ ಇದ್ದುದರಿಂದ ಎಲ್ಲಿ ಅನುಕೂಲವೋ ಅಲ್ಲಿ ಜನ ವಾಸ ಮಾಡುತ್ತಿದ್ದರು. ಪ್ರಥುಚಕ್ರವರ್ತಿ ಪ್ರಪಂಚದಲ್ಲಿ ಮೊಟ್ಟಮೊದಲಬಾರಿಗೆ ಒಂದು ವ್ಯವಸ್ಥಿತ ರೀತಿಯ ನಾಗರೀಕತೆಯನ್ನು ಪರಿಚಯಿಸಿ ಅಭಿವೃದ್ಧಿಪಡಿಸಿದ. ಏರುಪೇರಾಗಿದ್ದ ಭೂಮಿಯನ್ನು ಸಮತಟ್ಟುಮಾಡಿ, ಕಾಲುವೆಗಳು, ಜಲಾಶಯ, ಬೇಸಾಯಕ್ಕೆ ಬೇಕಾದ ನೀರಿನ ವ್ಯವಸ್ಥೆ, ನಗರ, ಹುಲ್ಲುಗಾವಲು, ಕಾಡು, ನಾಡು, ಇತ್ಯಾದಿಯನ್ನು ಅಭಿವೃದ್ಧಿಪಡಿಸಿದ. ಇದರಿಂದಾಗಿ ಸಂಪತ್ತಿನ ಹೊಳೆ ಹರಿಯಿತು. ಆತನ ಆಡಳಿತ ಅವಧಿಯಲ್ಲಿ ಭೂಮಿಗೊಂದು ಹೊಸ ಆಯಾಮ ಬಂದಿತು. [ಈ ಕಾರಣಕ್ಕಾಗಿ ಭೂಮಿಗೆ ಪೃಥ್ವಿ ಎನ್ನುವ ಹೆಸರು ಬಂದಿದೆ. ಪೃಥ್ವೀ ಎಂದರೆ ಪ್ರಥುಚಕ್ರವರ್ತಿಯ ಮಗಳು ಎಂದರ್ಥ]. ಇಂತಹ ಪ್ರಥುಚಕ್ರವರ್ತಿಯನ್ನು ಜನರು 'ಉಶತ್ತಮಃ' ಎಂದು ಕರೆದರು. ಅಂದರೆ ಬಯಸಿದ್ದನ್ನು ಮಾಡಬಲ್ಲವ, ಸತ್ಯಕಾಮ ಎಂದರ್ಥ. ವಸ್ತುತಃ ಆವೇಶಾವತಾರವಾದ ಭಗವಂತನ ಈ ರೂಪವನ್ನು ಇಲ್ಲಿ ಒಂಬತ್ತನೇ ಅವತಾರ ಎಂದು ಕರೆದಿದ್ದಾರೆ.

ಚಾಕ್ಷುಷ ಮನ್ವಂತರದಲ್ಲಿ ಭಗವಂತನ ಈ ಆವೇಶಾವತಾರದ ನಂತರ ಮನ್ವಂತರದ ಉಪೇಂದ್ರರೂಪ ಹಾಗೂ ತಾಪಸ ಮನ್ವಂತರದಲ್ಲಿ ಮನ್ವಂತರ ನಿಯಾಮಕ 'ತಾಪಸ' ರೂಪವನ್ನು ಬಿಟ್ಟರೆ, ವೈವಸ್ವತ ಮನ್ವಂತರದ ತನಕ ಭಗವಂತನ ಬೇರೆ ಅವತಾರಗಳಿಲ್ಲ. ವೈವಸ್ವತ ಮನ್ವಂತರದಲ್ಲಿನ ಭಗವಂತನ ವಿಶಿಷ್ಠ ಅವತಾರಗಳನ್ನು ಸೂತರು ಮುಂದೆ ವಿವರಿಸುವುದನ್ನು ಕಾಣಬಹುದು.

> ರೂಪಂ ಸ ಜಗೃಹೇ ಮಾತ್ಸ್ಯಂ ಚಾಕ್ಷುಷಾಂತರಸಂಪ್ಲವೇ ।
> ನಾವ್ಯಾರೋಪ್ಯ ಮಹೀಮಯ್ಯಾಮಪಾದ್ ವೈವಸ್ವತಂ ಮನುಮ್ ॥೧೫॥

ವೈವಸ್ವತ ಮನ್ವಂತರದ ಮೊದಲನೇ ಅವತಾರ ದಶಾವತಾರಗಳಲ್ಲಿ ಒಂದಾದ ಮತ್ಸ್ಯಾವತಾರ. ಈ ಅವತಾರ ನಡೆದದ್ದು ಚಾಕ್ಷುಷ ಮತ್ತು ವೈವಸ್ವತ ಮನ್ವಂತರದ ಸಂಧಿಕಾಲದಲ್ಲಿ. ನಮಗೆ ತಿಳಿದಂತೆ ಒಂದೊಂದು ಮನ್ವಂತರ ಮುಗಿದಾಗಲೂ ಒಂದು ಚಿಕ್ಕ ಪ್ರಳಯವಾಗುತ್ತದೆ. ಆ ಪ್ರಳಯದ ಅವಧಿ ಸುಮಾರು ೧೪೦೦ ರಿಂದ ೨೦೦೦ ವರ್ಷಗಳು. ಈ ಪ್ರಳಯಕಾಲದಲ್ಲಿ ಭೂಮಿಯ ಮೇಲಿನ ಬಹುತೇಕ ನಾಗರೀಕತೆ ನಾಶವಾಗುತ್ತದೆ. ಈ ಕಾಲದಲ್ಲಿ ಬದುಕುಳಿದ ಜನಾಂಗದಿಂದ ಮತ್ತೆ ಮರಳಿ ನಾಗರೀಕತೆ ಬೆಳೆಯುತ್ತದೆ. ಚಾಕ್ಷುಷ ಮತ್ತು ವೈವಸ್ವತ ಮನ್ವಂತರ ಸಂಧಿಕಾಲದಲ್ಲಿನ ಪ್ರಳಯದಲ್ಲಿ ವೈವಸ್ವತ ಮನುವನ್ನು ರಕ್ಷಿಸುವುದಕ್ಕೋಸ್ಕರ ಕೋಡಿರುವ ಮೀನಿನ ರೂಪದಲ್ಲಿ ಭಗವಂತ ಕಾಣಿಸಿಕೊಂಡು, ಭೂಮಿಯಿಂದ ನಿರ್ಮಾಣಗೊಂಡ ದೋಣಿಯಲ್ಲಿ ಮನುವನ್ನು ಕುಳ್ಳಿರಿಸಿ ರಕ್ಷಿಸಿದ ಅವತಾರವಿದು. ಹೀಗೆ ಮುಂದಿನ ಸಂವತ್ಸರದ ಅಧಿಪತಿಯಾಗುವಂತೆ ಅವನನ್ನು ಉಳಿಸಿ, ಅವನಿಗೆ ಪೂರ್ಣಪ್ರಮಾಣದಲ್ಲಿ ತತ್ತ್ವ ಬೋಧನೆ ಮಾಡಿ ರಕ್ಷೆ ಕೊಟ್ಟ ಭಗವಂತನ ಹತ್ತನೇ ಅವತಾರ-ಮತ್ಸ್ಯಾವತಾರ.

ಸುರಾಸುರಾಣಾಮುದಧಿಂ ಮಥ್ನತಾಂ ಮಂದರಾಚಲಮ್ ।
ದಧ್ರೇ ಕಮಠರೂಪೇಣ ಪೃಷ್ಠ ಏಕಾದಶಂ ವಿಭುಃ ॥೧೬॥

ಭಗವಂತನ ಅವತಾರ ಮಾಲಿಕೆಯಲ್ಲಿ ಹನ್ನೊಂದನೇ ಅವತಾರ ಕೂರ್ಮಾವತಾರ. ದೇವತೆಗಳು ದಾನವರು ಸೇರಿ ಸಮುದ್ರ ಮಥನ ಮಾಡಿದಾಗ ಮಥನಕ್ಕೆ ಕಡಗೋಲಾಗಿ ಬಳಸಿದ ಮಂದರ ಪರ್ವತವನ್ನು, ಅದು ಸಮುದ್ರದಲ್ಲಿ ಮುಳುಗಿ ಹೋಗದಂತೆ ಕೂರ್ಮರೂಪವನ್ನು ತಾಳಿ, ತನ್ನ ಬೆನ್ನಲ್ಲಿ ಹೊತ್ತ ಅವತಾರವಿದು.

ಧಾನ್ವಂತರಂ ದ್ವಾದಶಮಂ ತ್ರಯೋದಶಮಮೇವ ಚ ।
ಅಪಾಯಯತ್ ಸುಧಾಮನ್ಯಾನ್ ಮೋಹಿನ್ಯಾ ಮೋಹಯನ್ ಸ್ತ್ರೀಯಾ ॥೧೭॥

ಸಮುದ್ರ ಮಥನ ಮಾಡುವಾಗ ಮೊದಲು ವಿಷ ಬರುತ್ತದೆ ಹಾಗೂ ಕೊನೆಯಲ್ಲಿ ಅಮೃತವನ್ನು ಹೊತ್ತು ಭಗವಂತ ಧನ್ವಂತರಿ ರೂಪಿಯಾಗಿ ಬರುತ್ತಾನೆ. ಇದು ಭಗವಂತನ ಹನ್ನೆರಡನೇ ಅವತಾರ. ಅಮೃತವನ್ನು ಪಡೆಯಲಿಕ್ಕಾಗಿ ಅಸುರರು ಗದ್ದಲ ಮಾಡಿದಾಗ, ಮೋಹಿನಿ ರೂಪ ತಾಳಿ, ಅಸುರರನ್ನು ಮೋಹಗೊಳಿಸಿ, ದೇವತೆಗಳಿಗೆ ಅಮೃತವನ್ನು ಹಂಚಿದ ಅವತಾರ ಭಗವಂತನ ಹದಿಮೂರನೇ ಅವತಾರ.

ಕಾಲಕ್ರಮಕ್ಕನುಗುಣವಾಗಿ ಇಲ್ಲಿ ಸಮುದ್ರಮಥನವನ್ನು ನರಸಿಂಹ ಅವತಾರಕ್ಕೂ ಮೊದಲು ಹೇಳಿರುವುದನ್ನು ಕಾಣುತ್ತೇವೆ. ಇದು ಸ್ವಲ್ಪ ಗೊಂದಲವನ್ನುಂಟುಮಾಡುತ್ತದೆ. ಏಕೆಂದರೆ ಪ್ರಹ್ಲಾದನ ಮೊಮ್ಮಗ ಬಲಿಚಕ್ರವರ್ತಿ ಸಮುದ್ರಮಥನ ಕಾಲದಲ್ಲಿ ದೇವತೆಗಳ ವಿರುದ್ಧ ಹೋರಾಡಿದ ಎನ್ನುವ ಕಥೆಯೊಂದಿದೆ. ಆದರೆ ಇಲ್ಲಿ ಪ್ರಹ್ಲಾದ ಹುಟ್ಟುವ ಮೊದಲು ಹಾಗೂ ಮತ್ಸ್ಯಾವತಾರದ ನಂತರ ಸಮುದ್ರಮಥನವನ್ನು ಹೇಳಿದ್ದಾರೆ. ಇದನ್ನು ವಿಶ್ಲೇಷಿಸಿದಾಗ ನಮಗೆ ತಿಳಿಯುವುದೇನೆಂದರೆ: ಇತಿಹಾಸದಲ್ಲಿ ಎರಡು ಸಮುದ್ರಮಥನವನ್ನು ಹೇಳಲಾಗುತ್ತದೆ. ಒಂದು ರೈವತ ಮನ್ವಂತರದಲ್ಲಿ ಹಾಗೂ ಇನ್ನೊಂದು ವೈವಸ್ವತ ಮನ್ವಂತರದಲ್ಲಿ. ಬಲಿ ದೇವತೆಗಳೊಂದಿಗೆ ಹೋರಾಡಿದ ಕಥೆ ರೈವತ ಮನ್ವಂತರಕ್ಕೆ ಸಂಬಂಧಿಸಿದ್ದು. ಆದರೆ ಭಗವಂತನ ಕೂರ್ಮಾವತಾರ ನಡೆದಿರುವುದು ವೈವಸ್ವತ ಮನ್ವಂತರದಲ್ಲಿ. ಆದ್ದರಿಂದ ವೈವಸ್ವತ ಮನ್ವಂತರದಲ್ಲಿ ನಡೆದ ಸಮುದ್ರಮಥನ ಪ್ರಹ್ಲಾದನ ಜನನಕ್ಕಿಂತ ಮೊದಲು

ಹಾಗೂ ಮತ್ಸ್ಯಾವತಾರದ ನಂತರ ನಡೆದ ಘಟನೆ. ಈ ಕಾಲದಲ್ಲಿ ಬಲಿ ದೇವತೆಗಳ ವಿರುದ್ಧ ಹೋರಾಡಿರಲಿಲ್ಲ. ಇನ್ನು ರೈವತ ಮನ್ವಂತರದಲ್ಲಿ ಹೇಗೆ ಬಲಿ ಜನಿಸಿದ್ದ ಎನ್ನುವುದಕ್ಕೆ ಆಚಾರ್ಯ ಮಧ್ವರು ಒಂದು ಕಡೆ ಹೇಳುತ್ತಾರೆ: "ಪ್ರತಿ ಮನ್ವಂತರಂ ಪ್ರಾಯಃ ಪ್ರಹ್ಲಾದಾದ್ಯಾಃ ಪ್ರಜಾತಿರೆ" ಎಂದು. ಅಂದರೆ ಪ್ರಹ್ಲಾದನ ಸಂತತಿ ಪ್ರತಿ ಮನ್ವಂತರದಲ್ಲಿ ಹುಟ್ಟುತ್ತಾರೆ ಎಂದರ್ಥ. ಎಲ್ಲವನ್ನೂ ಸಮಷ್ಟಿಯಾಗಿ ನೋಡಿದಾಗ ಇಲ್ಲಿ ಗೊಂದಲವಿಲ್ಲ.

ಚತುರ್ದಶಂ ನಾರಸಿಂಹಂ ಬಿಭ್ರದ್ ದೈತ್ಯೇಂದ್ರಮೂರ್ಜಿತಮ್ ।
ದದಾರ ಕರಜೈರೂರಾವೇರಕಾನ್ ಕಟಕೃದ್ ಯಥಾ ॥೧೮॥

ಭಗವಂತನ ಹದಿನಾಲ್ಕನೇ ಅವತಾರ ನರಸಿಂಹಾವತಾರ. ನರಸಿಂಹ ಅವತಾರದ ಮೊದಲು ಹಿರಣ್ಯಾಕ್ಷನ ಸಂಹಾರಕ್ಕಾಗಿ ವರಾಹ ಅವತಾರವಾಗಿರುವುದು ನಮಗೆ ತಿಳಿದಿದೆ. ವರಾಹ ಅವತಾರ ವೈವಸ್ವತ ಮನ್ವಂತರದಲ್ಲಿ ನಡೆದ ದಶಾವತಾರದಲ್ಲಿ ಸೇರಿದ ಅವತಾರ. ಆದರೆ ಕಾಲಕ್ರಮಕ್ಕನುಗುಣವಾಗಿ ಸ್ವಾಯಂಭುವ ಮನ್ವಂತರದಲ್ಲಿ ಮೊದಲ ವರಾಹ ಅವತಾರವಾಗಿರುವುದರಿಂದ ಅದನ್ನು ಇಲ್ಲಿ ಪುನಃ ಉಲ್ಲೇಖಿಸಿಲ್ಲ.
ಪ್ರಹ್ಲಾದನಿಗೋಸ್ಕರ ನರಸಿಂಹರೂಪದಲ್ಲಿ ಅವತರಿಸಿ, ಮಹಾಬಲಿಷ್ಠನಾದ ಹಿರಣ್ಯಕಶಿಪುವನ್ನು ತನ್ನ ತೊಡೆಯಮೇಲಿಟ್ಟು, ತನ್ನ ಉಗುರಿನಿಂದ ಬಗೆದು, ಹುಲ್ಲುಗರಿಯನ್ನು ಕಿತ್ತಂತೆ ಹಿರಣ್ಯಕಶಿಪುವಿನ ಅಸುವನ್ನು ಹೀರಿದ ಅವತಾರವಿದು.

ಪಂಚದಶಂ ವಾಮನಕಂ ಕೃತ್ವಾಽಗಾದಧ್ವರಂ ಬಲೇಃ ।
ಪದತ್ರಯಂ ಯಾಚಮಾನಃ ಪ್ರತ್ಯಾದಿತ್ಸುಸ್ತ್ರಿಪಿಷ್ಟಪಮ್ ॥೧೯॥

ಪ್ರಹ್ಲಾದನ ಮಗ ವಿರೋಚನ. ಆತನ ಮಗ ಬಲಿ. ಬಲಿಯ ಆಡಳಿತಾವಧಿಯಲ್ಲಿ ಭಗವಂತ ಪುಟ್ಟ ವಾಮನರೂಪಿಯಾಗಿ ಅವತರಿಸಿದ. ಇದು ಭಗವಂತನ ಹದಿನೈದನೇ ಅವತಾರ. ಬಲಿ ನಡೆಸುತ್ತಿದ್ದ ಯಜ್ಞಕ್ಕೆ ಹೋದ ವಾಮನ ಅಲ್ಲಿ ಕೇಳಿದ್ದು ಮೂರು ಹೆಜ್ಜೆ ಭೂಮಿಯನ್ನು. ಆದರೆ ಪಡೆದದ್ದು ಮೂರು ಲೋಕಗಳನ್ನು.

ಅವತಾರೇ ಷೋಡಶಮೇ ಯಚ್ಛನ್ ಬ್ರಹ್ಮದ್ರುಹೋ ನೃಪಾನ್ ।
ತ್ರಿಃಸಪ್ತಕೃತ್ವಃ ಕುಪಿತೋ ನಿಃಕ್ಷತ್ರಾಮಕರೋನ್ಮಹೀಮ್ ॥೨೦॥

ಭಗವಂತನ ಹದಿನಾರನೇ ಅವತಾರ ಪರಶುರಾಮ ಅವತಾರ. ಭೂಮಿಯಲ್ಲಿ ಕ್ಷತ್ರ ವಂಶ ಅಧಿಕಾರದ ಉನ್ಮತ್ತತೆಯಿಂದ ದೂರ್ತರಾಗಿ ದೇಶವನ್ನು ನಾಶಮಾಡುವ ಪರಿಸ್ಥಿತಿಗೆ ತಂದಾಗ, ವೇದಗಳಿಗೆ ಹಾಗೂ ಜ್ಞಾನಿಗಳಿಗೆ ದ್ರೋಹಮಾಡಿದ ಅಂತಹ ಕೆಟ್ಟ ರಾಜ ಸಂತತಿಯನ್ನು ಇಪ್ಪತ್ತೊಂದು ಬಾರಿ ಸಂಹಾರಮಾಡಿದ ವಿಶಿಷ್ಠ ಅವತಾರವಿದು.

ತತಃ ಸಪ್ತದಶೇ ಜಾತಃ ಸತ್ಯವತ್ಯಾಂ ಪರಾಶರಾತ್ ।
ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ ॥೨೧॥

ಭಗವಂತನ ಹದಿನೇಳನೇ ಅವತಾರ ವ್ಯಾಸಾವತಾರ. ಸತ್ಯವತಿ-ಪರಾಶರರ ಮಗನಾಗಿ ವ್ಯಾಸಾವತಾರವಾಯಿತು. ಇದು ವೇದವನ್ನು ವಿಭಾಗ ಮಾಡಿದ ವಿಶಿಷ್ಟರೂಪ. ಇಲ್ಲಿ ರಾಮಾವತಾರಕ್ಕೂ ಮೊದಲು ವ್ಯಾಸಾವತಾರವನ್ನು ಕಾಲಕ್ರಮದಲ್ಲಿ ಹೇಳಿರುವುದನ್ನು ಕಾಣುತ್ತೇವೆ. ಇದು ನಮಗೆ ಸ್ವಲ್ಪ ಗೊಂದಲವನ್ನುಂಟುಮಾಡುತ್ತದೆ. ಇದನ್ನು ವಿವರಿಸುತ್ತಾ ಆಚಾರ್ಯರು ಹೇಳುತ್ತಾರೆ: "ರಾಮಾತ್ ಪೂರ್ವಮಪ್ಯಸ್ತಿ ವ್ಯಾಸಾವತಾರಃ" ಎಂದು. ಕೂರ್ಮ ಪುರಾಣದಲ್ಲಿ ಹೇಳುವಂತೆ: "ತೃತೀಯಂ ಯುಗಮಾರಭ್ಯ ವ್ಯಾಸೋ ಬಹುಷು ಜಜ್ಞಿವಾನ್". ಇಲ್ಲಿ ಈ ಮನ್ವಂತರದಲ್ಲಿ ಮೂರನೇ ದ್ವಾಪರದಿಂದಾರಂಭಿಸಿ ಅನೇಕ ದ್ವಾಪರಗಳಲ್ಲಿ ವ್ಯಾಸರು ಅವತರಿಸುತ್ತಾರೆ ಎಂದಿದ್ದಾರೆ. ವ್ಯಾಸರ ಅವತಾರ ಈಗಾಗಲೇ ವೈವಸ್ವತ ಮನ್ವಂತರದ ಮೂರನೇ, ಏಳನೇ, ಹದಿನಾರನೇ, ಇಪ್ಪತ್ತೈದನೇ ಹಾಗೂ ಈಗ ಮುಗಿದಿರುವ ಇಪ್ಪತ್ತೆಂಟನೇ ದ್ವಾಪರದಲ್ಲಿ ಐದು ಬಾರಿ ಆಗಿದೆ. ರಾಮಾವತಾರ ಆಗಿರುವುದು ವೈವಸ್ವತ ಮನ್ವಂತರದ ಇಪ್ಪತ್ನಾಲ್ಕನೇ ತ್ರೇತಾಯುಗದಲ್ಲಿ. ಈ ಕಾಲಕ್ರಮದಲ್ಲಿ ನೋಡಿದಾಗ ಭಗವಂತನ ಮೊದಲ ವ್ಯಾಸಾವತಾರ ಆಗಿರುವುದು ರಾಮಾವತಾರಕ್ಕಿಂತ ಮೊದಲು. ಇನ್ನೊಂದು ವಿಶೇಷವೇನೆಂದರೆ: ತನ್ನ ಪ್ರತೀ ಅವತಾರದಲ್ಲೂ ವ್ಯಾಸರು ಅವತರಿಸಿರುವುದು ಸತ್ಯವತಿ-ಪರಾಶರರ ಮಗನಾಗಿ.

ವ್ಯಾಸಾವತಾರವಾಗಿರುವುದೇ ವೇದ ವೃಕ್ಷಕ್ಕೆ ಶಾಖೆಗಳನ್ನು ನೀಡುವುದಕ್ಕೋಸ್ಕರ. ಅಖಂಡವಾದ ಮೂಲ ವೇದವನ್ನು ವಿಂಗಡಿಸಿ, ಜನರಿಗೆ ನೀಡಿದ ಅವತಾರವಿದು. ತನ್ನ ಮೊದಲ ನಾಲ್ಕು ಅವತಾರಗಳಲ್ಲಿ ಜ್ಞಾನಿಗಳಿಗೆ ವೇದ ವಿಂಗಡಣೆ ಮಾಡಲು ಮಾರ್ಗದರ್ಶಿಯಾಗಿದ್ದ ವ್ಯಾಸರು, ಇಪ್ಪತ್ತೆಂಟನೇ ದ್ವಾಪರದ ತನ್ನ ಅವತಾರದಲ್ಲಿ ಸ್ವಯಂ ವೇದ ವಿಂಗಡಣೆ ಮಾಡಿ ನಮಗೆ ನೀಡಿರುವುದು ಗಮನಾರ್ಹ.

ನರದೇವತ್ವಮಾಪನ್ನಃ ಸುರಕಾರ್ಯಚಿಕೀರ್ಷಯಾ ।
ಸಮುದ್ರನಿಗ್ರಹಾದೀನಿ ಚಕ್ರೇ ವೀರ್ಯಾಣ್ಯತಃ ಪರಮ್ ॥೨೨॥

ರಾಜನಾಗಿ ಭೂಮಿಯಲ್ಲಿ ಅವತರಿಸಿ ಬಂದು, ರಾವಣನ ಸಂಹಾರಕ್ಕಾಗಿ ಸೀತೆಯನ್ನು ಅನ್ವೇಷಿಸುತ್ತಾ ಹೋಗಿ, ಸಮುದ್ರ ಸ್ತಂಭನ ಮಾಡಿ, ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ರಾವಣನನ್ನು ಸಂಹಾರ ಮಾಡಿದ, ಅತಿಮಾನುಷ ಪೌರುಷ ತೋರಿದ ವಿಶೇಷ ಅವತಾರ ರಾಮಾವತಾರ. ಇದು ಭಗವಂತನ ಹದಿನೆಂಟನೇ ಅವತಾರ.

ಏಕೋನವಿಂಶೇ ವಿಂಶತಿಮೇ ವೃಷ್ಣಿಷು ಪ್ರಾಪ್ಯ ಜನ್ಮನೀ ।
ರಾಮಕೃಷ್ಣಾವಿತಿ ಭುವೋ ಭಗವಾನಹರದ್ ಭರಮ್ ॥೨೩॥

ಬಲರಾಮ ಮತ್ತು ಕೃಷ್ಣ ಭಗವಂತನ ಹತ್ತೊಂಬತ್ತು ಮತ್ತು ಇಪ್ಪತ್ತನೇ ಅವತಾರ. ಇಲ್ಲಿ 'ಬಲರಾಮ' ಅವತಾರ ಪ್ರಥುಚಕ್ರವರ್ತಿಯಂತೆ ಆವೇಶಾವತಾರ. ಶೇಷನಲ್ಲಿ ಭಗವಂತನ ವಿಶೇಷ ಆವೇಶ ಇದ್ದ ರೂಪ ಬಲರಾಮ ರೂಪವಾದರೆ, ಶ್ರೀಕೃಷ್ಣ ಭಗವಂತನ ಸಾಕ್ಷಾತ್ ಅವತಾರ. ರಾಮ ಮತ್ತು ಕೃಷ್ಣ ಎನ್ನುವ ಹೆಸರಿನಿಂದ, ಭೂಮಿಯ ಭಾರವನ್ನು ಇಳಿಸಲು, ವೃಷ್ಣಿ(ಯಾದವ) ವಂಶದಲ್ಲಿ ಭಗವಂತನ ಅವತಾರವಾಯಿತು.

ತತಃ ಕಲೌ ಸಂಪ್ರವೃತ್ತೇ ಸಮ್ಮೋಹಾಯ ಸುರದ್ವಿಷಾಮ್ ।
ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ ॥೨೪॥

ಇಪ್ಪತ್ತೊಂದನೇ ಅವತಾರ ಬುದ್ಧಾವತಾರ. ಈ ಅವತಾರ ಮೋಹಿನಿ ಅವತಾರದಂತೆ ಇನ್ನೊಂದು ಮೋಹಕ ಅವತಾರ. ತನ್ನ ಮೋಹಕ ರೂಪದಿಂದ ಅಸುರರನ್ನು ಸೆಳೆದ ಅವತಾರವಿದು. ಹೀಗಾಗಿ ಬುದ್ಧ ದಶಾವತಾರದಲ್ಲಿ ಸೇರಿದ್ದರೂ ಕೂಡಾ, ಜಗತ್ತು ಶೂನ್ಯವೆಂದ ಮೋಹಕ ಅವತಾರಿಯಾಗಿರುವುದರಿಂದ, ಆ ರೂಪದಲ್ಲಿ ಭಗವಂತನ ಆರಾಧನೆ ಇಲ್ಲ. ಬ್ರಹ್ಮಾಂಡಪುರಾಣದಲ್ಲಿ ಬುದ್ಧನ ಮೋಹಕ ರೂಪದ ವರ್ಣನೆ ಕಾಣಬಹುದು:

ಮೋಹನಾರ್ಥಂ ದಾನವಾನಾಂ ಬಾಲರೂಪೀ ಪರಃ ಸ್ಥಿತಃ ।
ಪುತ್ರಂ ತಮ್ ಕಲ್ಪಯಾಮಾಸ ಮೂಢಬುದ್ಧಿರ್ಜಿನಃ ಸ್ವಯಂ ।
ತತಃ ಸಂಮೋಹಯಾಮಾಸ ಜಿನಾದ್ಯಾನ ಸುರಾಂಶಕಾನ್ ।
ಭಗವಾನ್ ವಾಗ್ಭಿರುಗ್ರಾಭಿರಹಿಂಸಾವಾಚಿಭಿರ್ಹರಿಃ ।

ಕಲಿಯುಗದಲ್ಲಿ ಭಗವಂತನ ಅವತಾರವಾಗುವುದಿಲ್ಲ ಎನ್ನುತ್ತಾರೆ. ಹಾಗಿರುವಾಗ ಬುದ್ಧನ ಅವತಾರ ಈ ಕಲಿಯುಗದಲ್ಲಿ ಹೇಗಾಯಿತು ಎನ್ನುವುದು ಕೆಲವರ ಪ್ರಶ್ನೆ. ನಿಜ, ಕಲಿಯುಗದಲ್ಲಿ ಭಗವಂತನ ಅವತಾರವಿಲ್ಲ. ಆದರೆ ಈ ಅವತಾರವಾಗಿರುವುದು ದ್ವಾಪರ ಮತ್ತು ಕಲಿಯುಗದ ಸಂಧಿಕಾಲದಲ್ಲಿ. ಈಗ ನಡೆಯುತ್ತಿರುವುದು ಈ ಸಂಧಿಕಾಲ ಎನ್ನುವುದನ್ನು ನಾವಿಲ್ಲಿ ಜ್ಞಾಪಿಸಿಕೊಳ್ಳಬೇಕು. ಇನ್ನೊಂದು ಪ್ರಶ್ನೆ ಏನೆಂದರೆ: ಬುದ್ಧ ಶುದ್ಧೋದನನ ಮಗ ಮತ್ತು ಆತ ಹುಟ್ಟಿದ್ದು ನೇಪಾಳದಲ್ಲಿ. ಆದರೆ ಇಲ್ಲಿ ಬುದ್ಧ ಜಿನನ ಮಗ ಮತ್ತು ಆತ ಕೀಕಟ(ಈಗಿನ ಬಿಹಾರ) ದೇಶದಲ್ಲಿ ಹುಟ್ಟಿದ ಎಂದಿದ್ದಾರೆ. ಹೌದು, ಗೌತಮ ಬುದ್ಧ ಶುದ್ಧೋದನನ ಮಗ . ಆದರೆ ಶುದ್ಧೋದನನ ಇನ್ನೊಂದು ಹೆಸರು 'ಜಿನ'. ಜಿನನ ಮಗ 'ಸಿದ್ಧಾರ್ಥ' ಹುಟ್ಟಿದ್ದು ನೇಪಾಳದಲ್ಲಾದರೂ ಕೂಡಾ, ಆತ 'ಬುದ್ಧ'ನೆಂದು ಹೆಸರು ಪಡೆದದ್ದು ಕೀಕಟ ದೇಶದಲ್ಲಿ.

ಅಥಾಸೌ ಯುಗಸಂಧ್ಯಾಯಾಂ ದಸ್ಯುಪ್ರಾಯೇಷು ರಾಜಸು ।
ಜನಿತಾ ವಿಷ್ಣುಯಶಸೋ ನಾಮ್ನಾ ಕಲ್ಕೀ ಜಗತ್ಪತಿಃ ॥೨೫॥

ಕಲಿಯುಗ ಮುಗಿದು ತ್ರೇತಾಯುಗ ಸಂಧಿ ಬಂದಾಗ, ರಾಜರುಗಳೇ ದರೋಡೆಕೋರರಾದಾಗ, 'ವಿಷ್ಣುಯಶಸ್ಸು' ಎನ್ನುವ ಬ್ರಾಹ್ಮಣನ ಮಗನಾಗಿ ಭಗವಂತ ಕಲ್ಕಿ ರೂಪದಲ್ಲಿ ಅವತರಿಸುತ್ತಾನೆ. ಇದು ಭಗವಂತನ ಇಪ್ಪತ್ತೆರಡನೇ ಅವತಾರ.

ಹೀಗೆ ಇಲ್ಲಿ ಭಗವಂತನ 'ಪುರುಷ ' ಅವತಾರವನ್ನು ಸೇರಿಸಿ ನೋಡಿದರೆ ಒಟ್ಟು ಇಪ್ಪತ್ಮೂರು ಅವತಾರಗಳನ್ನು ಕಾಣುತ್ತೇವೆ. ಮೂಲ ಪದ್ಮನಾಭ ರೂಪ ಹಾಗೂ ಎರಡು ಆವೇಶಾವತಾರ(ಪ್ರಥುಚಕ್ರವರ್ತಿ ಮತ್ತು ಬಲರಾಮ)ವನ್ನು ಬಿಟ್ಟರೆ ಇಲ್ಲಿ ಒಟ್ಟು ಇಪ್ಪತ್ತು ಸ್ವರೂಪಾವತಾರವನ್ನು ಹೇಳಲಾಗಿದೆ. ಇದು ಒಂದು ರೀತಿಯಲ್ಲಿ ವಾಸುದೇವ ದ್ವಾದಶಾಕ್ಷರ ಮತ್ತು ಅಷ್ಟಾಕ್ಷರಗಳು(೧೨+೮=೨೦) ಹೇಳುವ ಭಗವಂತನ ಇಪ್ಪತ್ತು ಅವತಾರಗಳು.

ಅವತಾರಾ ಹ್ಯಸಂಖ್ಯೇಯಾ ಹರೇಃ ಸತ್ತ್ವನಿಧೇರ್ದ್ವಿಜಾಃ ।
ಯಥಾ ವಿದಾಸಿನಃ ಕುಲ್ಯಾಃ ಸರಸಃ ಸ್ಯುಃ ಸಹಸ್ರಶಃ ॥೨೬॥

ಭಗವಂತನ ಅವತಾರಗಳ ಕುರಿತು ವಿವರಿಸಿದ ಉಗ್ರಶ್ರವಸ್ ಹೇಳುತ್ತಾರೆ: "ಭಗವಂತನ ಅವತಾರಗಳನ್ನು 'ಇಷ್ಟು' ಎಂದು ಲೆಕ್ಕ ಹಿಡಿಯಲು ಸಾಧ್ಯವಿಲ್ಲ. ಆತನ ಅನುಸಂಧಾನಕ್ಕಾಗಿ ಕೆಲವು ಮುಖ್ಯ ಅವತಾರಗಳನ್ನು ಹೇಳುತ್ತೇವೆ ಹೊರತು, ನಾವು ಹೇಳಿದಷ್ಟೇ ಅವತಾರಗಳಲ್ಲ" ಎಂದು. ಭಗವಂತನ ಅವತಾರಗಳು ಅಸಂಖ್ಯ. ಅವುಗಳನ್ನು ನಮ್ಮಿಂದ ಎಣಿಸಲು ಸಾಧ್ಯವಿಲ್ಲ. ಲೋಕದಲ್ಲಿ ರಜಸ್ಸು-ತಮಸ್ಸು ವೃದ್ಧಿಯಾದಾಗ, ಸತ್ತ್ವವನ್ನು ಸ್ಥಾಪಿಸಲು ಭಗವಂತ ಅವತರಿಸಿ ಬರುತ್ತಾನೆ. ಹೀಗಾಗಿ ಆತ ರಜಸ್ಸು-ತಮಸ್ಸನ್ನು ಪರಿಹರಿಸುವ ಹರಿಯೂ ಹೌದು, ಸತ್ತ್ವನಿಧಿಯೂ ಹೌದು. ಇಂತಹ ಭಗವಂತನ ಅನಂತ ಅವತಾರಗಳನ್ನು ಊಹಿಸುವುದೂ ಕಷ್ಟ.

ಇಲ್ಲಿ "ಯಥಾ ವಿದಾಸಿನಃ ಕುಲ್ಯಾಃ ಸರಸಃ ಸ್ಯುಃ ಸಹಸ್ರಶಃ" ಎಂದರೆ: "ವಿದಾಸಿನವಾದ ಸರೋವರದಿಂದ ಸಾವಿರಾರು ಮುಖವಾಗಿ ನೀರು ಕೆಳಕ್ಕೆ ಹರಿದು ಬರುವಂತೆ ಭಗವಂತ ಅವತರಿಸಿ ಬರುತ್ತಾನೆ" ಎಂದರ್ಥ. ಇಲ್ಲಿ ಬಳಕೆಯಾದ 'ವಿದಾಸಿನಃ' ಎನ್ನುವ ಪದಕ್ಕೆ ಇಂದಿನ ಕೋಶಗಳಲ್ಲಿ ಅರ್ಥ ವಿವರಣೆ ಇಲ್ಲ. 'ವಿದಾಸಿ' ಎನ್ನುವುದಕ್ಕೆ 'ಉನ್ನತ' ಮತ್ತು 'ಒಡೆದು ಹೋಗಿರುವ' ಎನ್ನುವ ಅರ್ಥ ಕೊಡುವ ಎರಡು ಪೌರಾಣಿಕ ಪ್ರಯೋಗವನ್ನು ಆಚಾರ್ಯ ಮಧ್ವರು ಉಲ್ಲೇಖಿಸುತ್ತಾರೆ:

ವಿದಾಸಿನಃ ಉನ್ನತಾದ್ ಭಿನ್ನಾದ್ವಾ ।
ತ್ರಿವಿಧಾ ಪುರುಷಾ ಲೋಕೇ ನೀಚಮಧ್ಯವಿದಾಸಿನಃ । ಇತಿ ಬ್ರಾಹ್ಮೇ ।
ಚತುರ್ದಾ ವರ್ಣರೂಪೇಣ ಜಾಗದೇತದ್ ವಿದಾಸಿತಂ । ಇತಿ ಚ ।

ಹೀಗಾಗಿ ವಿದಾಸಿಯಾದ ಸರೋವರ ಎಂದರೆ ಎತ್ತರದಲ್ಲಿರುವ ಅಥವಾ ಒಡೆದುಹೋದ ಸರೋವರ ಎಂದರ್ಥ. ಭಗವಂತ ಎತ್ತರದಲ್ಲಿರುವ ತುಂಬಿದ ಕೊಡ. ಎಂದೂ ಬತ್ತದ ಆ ತುಂಬಿದ ಕೊಡ ಸಾವಿರಾರು ಮುಖವಾಗಿ ನಮ್ಮ ಉದ್ಧಾರಕ್ಕಾಗಿ ಕೆಳಕ್ಕೆ ಹರಿದು ಬರುತ್ತದೆ.

ಋಷಯೋ ಮನವೋ ದೇವಾ ಮನುಪುತ್ರಾ ಮಹೌಜಸಃ ।
ಕಲಾಃ ಸರ್ವೇ ಹರೇರೇವ ಸಪ್ರಜಾಪತಯಃ ಸ್ಮೃತಾಃ ॥೨೭॥

ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ ।
ಇಂದ್ರಾರಿವ್ಯಾಕುಲಂ ಲೋಕಂ ಮೃಡಯಂತಿ ಯುಗೇ ಯುಗೇ ॥೨೮॥

ಭಗವಂತನ ಅವತಾರಗಳ ಬಗ್ಗೆ ಹೆಚ್ಚಿನವರಲ್ಲಿ ಒಂದು ಸಂಶಯವಿದೆ. ಅದೇನೆಂದರೆ: ಭಗವಂತನ ಅವತಾರರೂಪಕ್ಕೂ ಹಾಗೂ ಮೂಲ ರೂಪಕ್ಕೂ ಏನಾದರೂ ವ್ಯತ್ಯಾಸವಿದೆಯೋ ಎನ್ನುವುದು. ಏಕೆಂದರೆ ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ ಅಲ್ಲಿ ಅವರಿಗೆ ಮೂಲ ರೂಪದ ಶಕ್ತಿ ಇರಬೇಕೆಂದೇನೂ ಇಲ್ಲ. ಇದೇ ರೀತಿ ಭಗವಂತನ ಅವತಾರ ಕೂಡಾ ಇರಬಹುದೇ ಎನ್ನುವುದು ಕೆಲವರ ಪ್ರಶ್ನೆ. ಈ ಸಂಶಯಕ್ಕೆ ಪೂರಕವಾಗಿ

ರಾಮಾಯಣದಲ್ಲಿನ ಶ್ರೀರಾಮಚಂದ್ರನ ನುಡಿ. ಅಲ್ಲಿ ರಾಮ ಹೇಳುತ್ತಾನೆ: "ಆತ್ಮಾನಮ್ ಮಾನುಷಮ್ ಮನ್ಯೇ" (ಯುದ್ಧಕಾಂಡ-೧೨೦-೧೧) ಎಂದು. ಅಂದರೆ 'ನಾನು ಒಬ್ಬ ಸಾಮಾನ್ಯ ಮನುಷ್ಯ' ಎಂದರ್ಥ. ಇದು ಹೆಚ್ಚಿನವರಿಗೆ ಗೊಂದಲವನ್ನುಂಟುಮಾಡುತ್ತದೆ. ಕೆಲವರು "ಶ್ರೀರಾಮನಿಗೆ ತನ್ನ ಮೂಲರೂಪದ ಅರಿವಿರಲಿಲ್ಲ" ಎಂದು ತಪ್ಪಾಗಿ ತಿಳಿದಿರುವುದೂ ಉಂಟು. ಹಾಗಾಗಿ ನಾವಿಲ್ಲಿ ತಿಳಿಯಬೇಕಾಗಿರುವುದು ಭಗವಂತನ ಅವತಾರ ಮತ್ತು ಮೂಲರೂಪ ಎರಡೂ ಸಮಾನವೋ ಅಥವಾ ಅಲ್ಲಿ ವ್ಯತ್ಯಾಸವಿದೆಯೋ ಎನ್ನುವ ವಿಚಾರವನ್ನು. ಇದನ್ನು ತಿಳಿಸುವುದಕ್ಕಾಗಿಯೇ ಮೇಲಿನ ಶ್ಲೋಕವಿದೆ. ಈ ಶ್ಲೋಕವನ್ನು ಎಚ್ಚರದಿಂದ ಗಮನಿಸದೇ ಇದ್ದರೆ, ಇಲ್ಲೂ ಕೂಡಾ, ಇನ್ನೊಂದು ಗೊಂದಲ ಹುಟ್ಟುವ ಸಾಧ್ಯತೆ ಇದೆ! ಇಲ್ಲಿ ಹೇಳುತ್ತಾರೆ: "**ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್**" ಎಂದು. ಇದನ್ನು ಮೇಲ್ನೋಟದಲ್ಲಿ ನೋಡಿದರೆ: "ಎಲ್ಲಾ ಅವತಾರಗಳು ಭಗವಂತನ ಒಂದು ಅಂಶ, ಕೃಷ್ಣ ಒಬ್ಬನೇ ಪೂರ್ಣಾವತಾರ" ಎಂದು ಹೇಳಿದಂತೆ ಕಾಣಿಸುತ್ತದೆ. ಆದರೆ ನಾವು ಇಲ್ಲಿ ಹೇಳಿರುವ ವಿಚಾರವನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು. "**ಏತೇ ಸ್ವಾಂಶಕಲಾಃ**" ಎಂದರೆ: "ಇವು ಭಗವಂತನ ಕಲೆಗಳು ಅಥವಾ ಭಗವಂತನ ಅಂಶ" ಎಂದರ್ಥ. ಆದರೆ ಭಗವಂತ ಒಂದು ಅಖಂಡವಾದ ಶಕ್ತಿಯಾಗಿರುವುದರಿಂದ, ಅಲ್ಲಿ ಒಂದು ತುಣುಕು ಎಂದೇನೂ ಇಲ್ಲ. ಆದ್ದರಿಂದ ಆತನ ಎಲ್ಲಾ ಅವತಾರಗಳೂ ಪೂರ್ಣಾವತಾರವೇ. ಇನ್ನು ಇಲ್ಲಿ ಬಳಕೆಯಾಗಿರುವ 'ಕೃಷ್ಣ' ಎನ್ನುವ ಪದ. ಈ ನಾಮ ಭಗವಂತನ ಮೂಲ ನಾಮ. ಕೃಷ್ಣಾವತಾರಕ್ಕೂ ಮೊದಲು ಭಗವಂತನನ್ನು 'ಕೃಷ್ಣ' ಎನ್ನುವ ನಾಮದಿಂದ ಸಂಬೋಧಿಸುವುದನ್ನು ನಾವು ಶಾಸ್ತ್ರದಲ್ಲಿ ಕಾಣಬಹುದು. 'ಕೃಷ್ಣ' ಎಂದರೆ 'ಕರ್ಷಣೆ ಮಾಡುವವ. ನಮ್ಮನ್ನು ಸಂಸಾರದಿಂದ ಕರ್ಷಣೆ ಮಾಡಿ ಮೋಕ್ಷ ಕರುಣಿಸುವವ ಎಂದರ್ಥ. ಭಗವಂತನ ಸ್ವರೂಪಾವತಾರದಲ್ಲಿ ಎಂದೂ ಭೇದವಿಲ್ಲ. ಇದನ್ನು ಸ್ಪಷ್ಟವಾಗಿ ಬ್ರಹ್ಮವೈವರ್ತ ಪುರಾಣದಲ್ಲಿ ಹೇಳಲಾಗಿದೆ:

> ಏತೇ ಪ್ರೋಕ್ತಾ ಅವತಾರಾ ಮೂಲರೂಪೀ ಕೃಷ್ಣಃ ಸ್ವಯಮೇವ ।
> ಜೀವಾಸ್ತತ್ಪ್ರತಿಬಿಂಬಾಂಶಾ ವರಾಹಾದ್ಯಾಃ ಸ್ವಯಂ ಹರಿಃ ।
> ದೃಶ್ಯತೇ ಬಹುಧಾ ವಿಷ್ಣುರೈಶ್ವರ್ಯಾದೇಕ ಏವ ತು । ಇತಿ ಬ್ರಹ್ಮವೈವರ್ತೇ ।

ಅಂದರೆ: "ಋಷಿಗಳು, ದೇವತೆಗಳು ಮುಂತಾದ ಜೀವರು ಭಗವಂತನ ಪ್ರತಿಬಿಂಬರೂಪ. ಆದರೆ ವರಾಹ ಮುಂತಾದ ಅವತಾರಗಳು ಸ್ವಯಂ ಭಗವಂತನಿಂದ ಅಭಿನ್ನ. ಒಬ್ಬನೇ ಒಬ್ಬ ವಿಷ್ಣುವು ತನ್ನ ಅನಂತ ಶಕ್ತಿಯಿಂದ ಅನೇಕ ರೂಪನಾಗಿ ಕಾಣಿಸಿಕೊಳ್ಳುತ್ತಾನೆ" ಎಂದರ್ಥ. ಭಗವಂತನ ಎಲ್ಲಾ ಅವತಾರಗಳೂ ಒಂದೇ. ಅಲ್ಲಿ ಒಂದು ಕಡಿಮೆ-ಇನ್ನೊಂದು ಹೆಚ್ಚು, ಒಂದು ಸಮಗ್ರ-ಇನ್ನೊಂದು ಅಸಮಗ್ರ; ಒಂದು ಪೂರ್ಣ-ಇನ್ನೊಂದು ಅಪೂರ್ಣ; ಒಂದರಲ್ಲಿ ಹೆಚ್ಚು ಶಕ್ತಿ-ಇನ್ನೊಂದರಲ್ಲಿ ಕಡಿಮೆ ಶಕ್ತಿ ಎನ್ನುವ ವಿಭಾಗಗಳಿಲ್ಲ. ಸರ್ವಶಕ್ತನಾದ ಭಗವಂತನ ಪೂರ್ಣವಾದ ಶಕ್ತಿಯಲ್ಲಿ ಅಪೂರ್ಣತೆ ಇಲ್ಲ. ಆದರೆ ಅದನ್ನು ಆತ ಅಭಿವ್ಯಕ್ತ ಮಾಡುವುದರಲ್ಲಿ ವ್ಯತ್ಯಾಸವಿರಬಹುದು. ಭಗವಂತನ ಶಕ್ತಿ ಬೇರೆ ಮತ್ತು ಅದರ ಅಭಿವ್ಯಕ್ತಿ ಬೇರೆ. ಗೀತೆಯಲ್ಲಿ ಹೇಳುವಂತೆ:

> ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
> ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥೫-೧೮॥

ಎಲ್ಲಾ ಕಡೆ ಇರುವ ಭಗವಂತ ಸಮಾನ. ಆದ್ದರಿಂದ ಅವನ ರೂಪದಲ್ಲಿ ನಾವು ತಾರತಮ್ಯ ಕಲ್ಪಿಸಬಾರದು.

ಏಕೆ ಭಗವಂತ ಭೂಮಿಗಿಳಿದು ಬರುತ್ತಾನೆ ಎಂದರೆ: ದೈತ್ಯರಿಂದ ಲೋಕಕ್ಕೆ ತೊಂದರೆಯುಂಟಾದಾಗ, ದೇವ-ದಾನವರ ಸಂಘರ್ಷದಲ್ಲಿ ಆಸುರೀ ಶಕ್ತಿ ಅಥವಾ ತಮೋಗುಣ ಗೆದ್ದಾಗ-ಭಗವಂತ ಅನೇಕ ರೂಪದಲ್ಲಿ, ಯುಗ-ಯುಗದಲ್ಲೂ ಭೂಮಿಗಿಳಿದು ಬರುತ್ತಾನೆ. "ಸತ್ತ್ವವನ್ನು ಸ್ಥಾಪಿಸಿ ಜಗತ್ತಿಗೆ ನೆಮ್ಮದಿಯನ್ನು ಕೊಡಲು ಭಗವಂತ ಅವತಾರ ರೂಪಿಯಾಗಿ ಬರುತ್ತಾನೆ" ಎನ್ನುತ್ತಾರೆ ಉಗ್ರಶ್ರವಸ್.

ಜನ್ಮ ಗುಹ್ಯಂ ಭಗವತೋ ಯ ಏವಂ ಪ್ರಯತೋ ನರಃ ।
ಸಾಯಂ ಪ್ರಾತರ್ಗೃಣನ್ ಭಕ್ತ್ಯಾ ದುಃಖಗ್ರಾಮಾದ್ ವಿಮುಚ್ಯತೇ ॥೨೯॥

ಏತದ್ರೂಪಂ ಭಗವತೋ ಹ್ಯರೂಪಸ್ಯ ಚಿದಾತ್ಮನಃ ।
ಮಾಯಾಗುಣೈರ್ವಿರಚಿತಂ ಮಹದಾದಿಭಿರಾತ್ಮನಿ ॥೩೦॥

ಭಗವಂತನ ಅವತಾರಗಳೆಂದರೆ ಅದು ಅವನ ಚಿನ್ಮಯವಾದ ಅಪ್ರಾಕೃತ ರೂಪ. ಇದನ್ನು ಎಲ್ಲರೂ ಕಾಣಲು ಸಾಧ್ಯವಿಲ್ಲ. ಭಗವಂತನ ಅವತಾರ ರೂಪವನ್ನು ಜನರು ಕಂಡರೂ, ಅದನ್ನು 'ಭಗವಂತ' ಎಂದಾಗಲೀ, 'ಜ್ಞಾನಾನಂದಮಯ' ಎಂದಾಗಲೀ ಕಾಣಲಿಲ್ಲ. ಉದಾಹರಣೆಗೆ: ಕೃಷ್ಣನನ್ನು ಅಥವಾ ರಾಮನನ್ನು ಆ ಕಾಲದ ಜನರು ನಮ್ಮಂತೆ ಪಾಂಚಭೌತಿಕ ಶರೀರವುಳ್ಳ ಒಬ್ಬ ಸಾಮಾನ್ಯ ಮನುಷ್ಯ ಎಂದೇ ತಿಳಿದಿದ್ದರು. ಜ್ಞಾನಿಗಳನ್ನು ಹೊರತುಪಡಿಸಿ, ಇತರರಿಗೆ ಅದು ಜ್ಞಾನಾನಂದಮಯವಾದ, ಅಪ್ರಾಕೃತವಾದ ಭಗವಂತ ಎಂದು ಅನ್ನಿಸಿರಲಿಲ್ಲ. ಹಾಗಾಗಿ ಎಲ್ಲರಿಗೂ ಭಗವಂತನ ದರ್ಶನ ಭಾಗ್ಯ ದೊರೆಯಲಿಲ್ಲ.

ಭಗವಂತ ತನ್ನ ಅವತಾರ ಕಾಲದಲ್ಲೂ ಕೂಡಾ, ಅಭೌತಿಕ ಅಪ್ರಾಕೃತ ಜ್ಞಾನಾನಂದಮಯ ಶರೀರಿಯಾಗಿರುತ್ತಾನೆ. ಆದರೆ ಆ ಅರಿವು ನಮಗಿಲ್ಲದಿದ್ದಾಗ, ಭಗವಂತನ ದರ್ಶನ ನಮಗಾಗುವುದಿಲ್ಲ. ಇಂದು ನಮಗೆ ಭಗವಂತನ ಅವತಾರ ರೂಪ ನೋಡಲು ಲಭ್ಯವಿಲ್ಲದಿದ್ದರೂ ಕೂಡಾ, ಆತನನ್ನು ನಾವು ಕಾಣಬಹುದು. ನಮಗೆ ತಿಳಿದಂತೆ ಭಗವಂತನಿಗೆ ಮೂರು ರೂಪಗಳು: ೧. ಆವೇಶರೂಪ ೨. ಅವತಾರರೂಪ ೩. ಪ್ರತೀಕರೂಪ. ಎಲ್ಲರೂ ಭಗವಂತನನ್ನು ಪ್ರತೀಕರೂಪದಲ್ಲಿ ಆವಾಹನೆ ಮಾಡಿ ಧ್ಯಾನದಲ್ಲಿ ಕಾಣಬಹುದು.

ಈ ವಿಶ್ವಕ್ಕೊಂದು ರೂಪಕೊಟ್ಟು, ತತ್ತದ್ ರೂಪನಾಗಿ, ವಿಶ್ವದಲ್ಲಿ ಭಗವಂತ ತುಂಬಿದ್ದಾನೆ. ಹಾಗಾಗಿ ಪ್ರತಿಯೊಂದು ವಸ್ತುವೂ ಆತನ ಪ್ರತಿಮೆ. ರೂಪವಿಲ್ಲದ ಭಗವಂತನ ರೂಪವಿದು. ಸತ್ತ್ವ, ರಜಸ್ಸು ಮತ್ತು ತಮೋಗುಣಗಳಿಂದಾದ ಈ ಪ್ರಪಂಚ, ಮಹತಾದಿ ತತ್ತ್ವಗಳಿಂದ ತುಂಬಿದೆ. ಕಾಣುವ ಈ ಪ್ರಪಂಚದಲ್ಲಿ, ಕಾಣುವ ವಸ್ತುವಿನೊಳಗೆ, ಕಾಣದ ಭಗವಂತನನ್ನು ಧ್ಯಾನದಲ್ಲಿ ಕಾಣಬೇಕು. ಇದನ್ನೇ ನಮಗೆ ಪ್ರಹ್ಲಾದ ಹೇಳಿರುವುದು. ಆತ ಕಂಬದಲ್ಲೂ ಭಗವಂತನನ್ನು ಕಂಡಿರುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕು. ಕಂಬವೂ ಒಂದು ಕಲ್ಲು, ದೇವರ ಪ್ರತಿಮೆಯೂ ಒಂದು ಕಲ್ಲು. ಆದರೆ ಕಲ್ಲಿನೊಳಗೂ ಭಗವಂತನಿದ್ದಾನೆ ಎಂದು ತಿಳಿದಾಗ, ಕಲ್ಲು ಪ್ರತಿಮೆಯಾಗುತ್ತದೆ. ಇಲ್ಲದಿದ್ದರೆ ಪ್ರತಿಮೆಯೂ ಕಲ್ಲೇ! ಹೀಗೆ ನಾವು ಜಡದಲ್ಲಿ ಪ್ರತೀಕರೂಪನಾದ ಭಗವಂತನನ್ನು ಕಾಣುವ ಪ್ರಯತ್ನ ಮಾಡಬೇಕು.

ಯಥಾ ನಭಸಿ ಮೇಘೌಘೋ ರೇಣುರ್ವಾ ಪಾರ್ಥಿವೋಽನಿಲೇ ।
ಏವಂ ದ್ರಷ್ಟರಿ ದೃಶ್ಯತ್ವಮಾರೋಪಿತಮಬುದ್ಧಿಭಿಃ ॥೩೧॥

ವಿಶ್ವದಲ್ಲಿ ಭಗವಂತ ತುಂಬಿದ್ದಾನೆ, ಪ್ರತಿಮೆಯಲ್ಲಿ ಭಗವಂತನನ್ನು ಕಾಣಬೇಕು, ಇತ್ಯಾದಿ ವಿಚಾರವನ್ನು ಕೆಲವು ತಿಳಿಗೇಡಿಗಳು ತಪ್ಪಾಗಿ ತಿಳಿದು, ಪ್ರತಿಮಾಪೂಜೆ ಬಗ್ಗೆ ಆರೋಪ ಮಾಡುತ್ತಾರೆ. ಆದರೆ ಇವರಿಗೆ 'ಪ್ರತಿಮೆಯಲ್ಲಿ ದೇವರ ಪೂಜೆ ಹೊರತು, ಪ್ರತಿಮೆಯೇ ದೇವರೆಂದು ಪೂಜೆ ಅಲ್ಲ' ಎನ್ನುವ ಸತ್ಯ ತಿಳಿದಿಲ್ಲ. ಭಾರತದಲ್ಲಿ ಶಾಸ್ತ್ರ ತಿಳಿದವರು ಯಾರೂ ಪ್ರತಿಮೆಯನ್ನು ದೇವರು ಎಂದು ಪೂಜಿಸುವುದಿಲ್ಲ. ಬದಲಿಗೆ ಪ್ರತಿಮೆಯಲ್ಲಿ ದೇವರನ್ನು ಆವಾಹನೆ ಮಾಡಿ ಪೂಜಿಸುತ್ತಾರೆ. ಈ ವಿಚಾರವನ್ನು ಸ್ವಯಂ ವೇದವ್ಯಾಸರು ಬ್ರಹ್ಮಸೂತ್ರದಲ್ಲೇ ಸ್ಪಷ್ಟವಾಗಿ ಹೇಳಿದ್ದಾರೆ. ಅಲ್ಲಿ ಹೇಳುತ್ತಾರೆ: "ನ ಪ್ರತೀಕೇ ನಹಿಸಃ" ಎಂದು. ಅಂದರೆ "ಪ್ರತಿಮೆಯನ್ನು ದೇವರೆಂದು ಕಾಣಬೇಡ, ಪ್ರತಿಮೆ ದೇವರಲ್ಲ, ಪ್ರತಿಮೆಯಲ್ಲಿ ದೇವರನ್ನು ಕಾಣು" ಎಂದರ್ಥ. ಗಾಳಿಯಲ್ಲಿ ಧೂಳು ತುಂಬಿಕೊಂಡಿದೆ ಹೊರತು, ಗಾಳಿಯೇ ದೂಳಲ್ಲ. ಮೋಡದಿಂದ ಆಕಾಶ ಕಪ್ಪಾಗಿ ಕಾಣುತ್ತದೆ ಹೊರತು, ಆಕಾಶವೇ ಕಪ್ಪಲ್ಲ. ಹಾಗೇ ಪ್ರತಿಮೆಯಲ್ಲಿ ಭಗವಂತ ಹೊರತು, ಪ್ರತಿಮೆಯೇ ಭಗವಂತನಲ್ಲ.

ಭಗವಂತ ಎಂದರೆ ಜ್ಞಾನಾನಂದಮಯನಾದ ಪರಿಪೂರ್ಣ ವಸ್ತು. ಆತನಿಗೆ ಅಧಿಷ್ಠಾನ-ಗುಣತ್ರಯಗಳಿಂದ ಆಶ್ರಯವಾದ, ಪಂಚಭೂತಗಳಿಂದಾದ, ಸ್ವತಃ ಚಲನೆ-ಬುದ್ಧಿಶಕ್ತಿ ಇಲ್ಲದ ಜಡ ಪ್ರಪಂಚ. ಈ ಭಗವಂತ ಮತ್ತು ಜಡ ಪ್ರಪಂಚದ ನಡುವೆ 'ಜೀವ' ಎಂದರೆ ಯಾರು? 'ಜೀವ' ಭಗವಂತನ ಒಂದು ತುಣುಕೇ ಅಥವಾ ಪಂಚಭೂತಗಳಿಂದ ಚೈತನ್ಯ ಸೃಷ್ಟಿಯಾಯಿತೇ? ಈ ಎಲ್ಲಾ ಪ್ರಶ್ನೆಗಳಿಗೆ ಸೂತರು ಮುಂದಿನ ಶ್ಲೋಕದಲ್ಲಿ ಉತ್ತರ ನೀಡಿದ್ದಾರೆ.

> ಅತಃ ಪರಂ ಯದವ್ಯಕ್ತಮವ್ಯೂಢಗುಣಬೃಂಹಿತಮ್ ।
> ಅದೃಷ್ಟಾಶ್ರುತವಸ್ತುತ್ವಾತ್ ಸ ಜೀವೋ ಯಃ ಪುನರ್ಭವಃ ॥೩೨॥

'ಜೀವ' ಜಡಕ್ಕಿಂತಲೂ ಭಿನ್ನ ಹಾಗೂ ಪರಮಾತ್ಮನಿಗಿಂತಲೂ ಭಿನ್ನ. ಜೀವ ಜಡದೊಳಗೇ ಇದ್ದರೂ ಕೂಡಾ, ಅದನ್ನು ಕಾಣಲು ಸಾಧ್ಯವಿಲ್ಲ. ಶಾಸ್ತ್ರದಲ್ಲಿ ಹೇಳುವಂತೆ: ಜೀವದ ಆಕಾರ ಸುಮಾರಾಗಿ ಒಂದು ಕುದುರೆಯ ಬಾಲದ ತುದಿಭಾಗದ ಹತ್ತುಸಾವಿರದ ಒಂದನೇ ಭಾಗದಷ್ಟಿರುತ್ತದೆ. ಹಾಗಾಗಿ ಜೀವ ಎನ್ನುವುದು ಕಣ್ಣಿಗೆ ಕಾಣದ ಆದರೆ ಅನುಭವಿಸಬಹುದಾದ ತತ್ತ್ವ.

ಇಲ್ಲಿ 'ಜೀವ'ನಿಗೆ ಸಂಬಂಧಿಸಿದ ಒಂದು ಅಪೂರ್ವವಾದ ವಿಚಾರವನ್ನು ಸೂತರು ಹೇಳಿರುವುದನ್ನು ಕಾಣುತ್ತೇವೆ. ಅವರು ಹೇಳುತ್ತಾರೆ: "ಜೀವ ನಿತ್ಯವಾದ ಸ್ವಭಾವದಿಂದ ತುಂಬಿದೆ" ಎಂದು. ಪ್ರತಿಯೊಂದು ಜೀವ ಕ್ಕೆ ಅದರದ್ದೇ ಆದ ಒಂದು ವಿಶೇಷ ಸ್ವಭಾವವಿದೆ. ಇದೇ ಆ ಜೀವದ ವ್ಯಕ್ತಿತ್ವ[Individuality]. ತನ್ನ ಸ್ವರೂಪ ವ್ಯಕ್ತಿತ್ತ್ವವನ್ನು ಬೆಳೆಸಿಕೊಳ್ಳುವುದೇ ಜೀವದ ಸಾಧನೆ. ಆ ವ್ಯಕ್ತಿತ್ವದ ಪೂರ್ಣತೆ ಸಾಧಿಸುವುದೇ ಜೀವದ ಸಿದ್ಧಿ. "ನಾನು-ನಾನಾಗಿ ನನ್ನ ಪೂರ್ಣ ವ್ಯಕ್ತಿತ್ತ್ವದ ವಿಕಸನವನ್ನು ಪಡೆಯುವುದು ನನ್ನ ಮೋಕ್ಷ. ನೀವು ನಿಮ್ಮ ವ್ಯಕ್ತಿತ್ತ್ವದ ಪೂರ್ಣತೆಯನ್ನು ಪಡೆಯುವುದು ನಿಮ್ಮ ಮೋಕ್ಷ. ಹೀಗೆ ಜೀವನಲ್ಲಿ ಎಂದೂ ನಾಶವಾಗದ 'ವ್ಯಯಕ್ತಿಕ ಸ್ವಭಾವ' ನಿತ್ಯವಾಗಿರುತ್ತದೆ. ಎಲ್ಲಾ ಜೀವರೊಳಗೂ ನೆಲೆಸಿ, ಎಲ್ಲಕ್ಕೂ ಒಂದು ರೂಪ ಕೊಟ್ಟ ವಿಶ್ವರೂಪನಾದ ಭಗವಂತನನ್ನು ತಿಳಿಯುವ ತನಕ-ಜೀವ ಸಂಸಾರದ ಹುಟ್ಟು-ಸಾವಿನ ಚಕ್ರದಲ್ಲಿ ಸುತ್ತುತ್ತಿರುತ್ತಾನೆ.

> ಯತ್ರೇಮೇ ಸದಸದ್ರೂಪೇ ಪ್ರತಿಷಿದ್ಧೇ ಸ್ವಸಂವಿದಾ ।
> ಅವಿದ್ಯಯಾಽಽತ್ಮನಿ ಕೃತೇ ಇತಿ ತದ್ ಬ್ರಹ್ಮದರ್ಶನಮ್ ॥೩೩॥

ಭಗವಂತನ ರೂಪ ಕಣ್ಣಿಗೆ ಕಾಣುವ ಮಣ್ಣು-ನೀರು-ಬೆಂಕಿಯಿಂದಾಗಲೀ, ಕಣ್ಣಿಗೆ ಕಾಣದ ಗಾಳಿ-ಆಕಾಶದಿಂದಾಗಲೀ ಆಗಿಲ್ಲ. ಜ್ಞಾನಸ್ವರೂಪನಾದ ಆತನಲ್ಲಿ ಈ ಪಾಂಚಭೌತಿಕತ್ವ ಇಲ್ಲ. ರಾಮ-ಕೃಷ್ಣಾದಿ ಅವತಾರ ರೂಪದಲ್ಲಿ ಭಗವಂತ ಪಾಂಚಭೌತಿಕ ಶರೀರ ತೊಟ್ಟು ಬಂದಿದ್ದ ಎನ್ನುವುದು ಕೇವಲ ಅಜ್ಞಾನಿಗಳ ಅರಿವು. "ಭಗವಂತ ಸತ್-ಅಸತ್ ರೂಪಗಳಿಂದ ಅತೀತನಾದ ಅಪ್ರಾಕೃತ ಜ್ಞಾನಸ್ವರೂಪ" ಎನ್ನುವ ಅರಿವೇ ಭಗವಂತನ ಬಗೆಗಿನ ನಿಜವಾದ ಅರಿವು.

**ಯದ್ಯೇಷೋಪರತಾ ದೇವೀ ಮಾಯಾ ವೈಶಾರದೀ ಮತಿಃ ।**
**ಸಂಪನ್ನ ಏವೇತಿ ವಿದುರ್ಮಹಿಮ್ನಿ ಸ್ವೇ ಮಹೀಯತೇ ॥೩೪॥**

ಭಗವಂತನನ್ನು ಪಡೆಯಬೇಕಾದರೆ ಮೊದಲು ನಾವು ನಮ್ಮ ಅಜ್ಞಾನದ ಪೊರೆ ಕಳಚಿ ಭಗವಂತನನ್ನು ಅರಿಯಬೇಕು. ಭಗವಂತನ ಅರಿವಿನಿಂದಾಗಿ ಬರುವ ಜ್ಞಾನ ಮತ್ತು ಭಕ್ತಿಯಿಂದ ಭಗವಂತನಿಗೆ ನಮ್ಮ ಮೇಲೆ ಅನುಗ್ರಹ ಮೂಡಬೇಕು. ಭಕ್ತಿ-ಜ್ಞಾನ ಪಕ್ವಗೊಂಡ ನಮ್ಮನ್ನು ಬಿಡುಗಡೆಗೊಳಿಸಬೇಕು ಎನ್ನುವ ಇಚ್ಛೆ ಭಗವಂತನಲ್ಲಿ ಮೂಡಿದಾಗ, ಜೀವ ಭಗವಂತನಲ್ಲಿ ಸಂಪನ್ನನಾಗುತ್ತಾನೆ. ಭಗವಂತನನ್ನು ಪಡೆದ ಜೀವ ತನ್ನ ಸ್ವ-ಸಾಮರ್ಥ್ಯದಲ್ಲಿ, ತನ್ನ ಜ್ಞಾನಾನಂದ-ಸ್ವರೂಪದಲ್ಲೇ ಬೆಳಗುತ್ತಾ ಇರಬಲ್ಲ.

**ಏವಂ ಚ ಜನ್ಮಾನಿ ಕರ್ಮಾಣಿ ಹ್ಯಕರ್ತುರಜನಸ್ಯ ಚ ।**
**ವರ್ಣಯಂತಿ ಸ್ಮ ಕವಯೋ ವೇದಗುಹ್ಯಾನಿ ಹೃತ್ಪತೇಃ ॥೩೫॥**

ಭಗವಂತನ ಅವತಾರದ ಕುರಿತಾದ ಶೌನಕಾದಿಗಳ ಪ್ರಶ್ನೆಗೆ ಸಂಕ್ಷಿಪ್ತ ಉತ್ತರ ಕೊಟ್ಟ ಸೂತರು, ಇಲ್ಲಿ ಉಪಸಂಹಾರ ರೂಪವಾಗಿ ಹೇಳುತ್ತಾರೆ: "ಇದು ಭಗವಂತನ ಅವತಾರಗಳು ಮತ್ತು ಆ ಅವತಾರಗಳಲ್ಲಿ ಅವನು ಮಾಡಿದ ಲೀಲೆಗಳು. ಇವು ಹುಟ್ಟದವನ ಜನ್ಮಗಳು ಹಾಗೂ ಮಾಡದವನ ಕರ್ಮಗಳು. ಇದು ಜ್ಞಾನಿಗಳು ಹೇಳುವ ವೇದ ರಹಸ್ಯ" ಎಂದು.

ವೇದದಲ್ಲಿ ಹೇಳುವಂತೆ: **"ಅಜಾಯಮಾನೋ ಬಹುಧಾ ವಿಜಾಯತೇ"**. ಅಂದರೆ ಎಂದೂ ಹುಟ್ಟದವನು ಎಂದೆಂದೂ ಹುಟ್ಟುತ್ತಿರುತ್ತಾನೆ ಎಂದರ್ಥ. ನಮ್ಮ ಹುಟ್ಟು ಒಂದು ಬದ್ಧತೆ. ಆದರೆ ಭಗವಂತನ ಹುಟ್ಟು ಬದ್ಧತೆಯಲ್ಲ. ಮಾಡಿದ ಪ್ರಾರಾಬ್ಧಕರ್ಮಕ್ಕಾಗಿ ನಾವು ಹುಟ್ಟಿದರೆ, ಭಗವಂತ ಕೇವಲ ನಮಗಾಗಿ ನಮ್ಮ ಹೃತ್ಕಮಲದಲ್ಲಿ ನೆಲೆಸಿ ನಮ್ಮೊಂದಿಗೆ ಹುಟ್ಟುತ್ತಾನೆ. ಇಂತಹ ಭಗವಂತನಿಗೆ ಪ್ರಯತ್ನ-ಪ್ರಾಯಾಸವಿಲ್ಲ. ಸುಖ-ದುಃಖದ ಲೇಪವಿಲ್ಲ. ಹಾಗಾಗಿ ಇಲ್ಲಿ "ಹುಟ್ಟದವನ ಜನ್ಮಗಳು-ಮಾಡದವನ ಕರ್ಮಗಳು" ಎಂದು ವಿಶೇಷವಾಗಿ ಉಲ್ಲೇಖಿಸಲಾಗಿದೆ. ಇದು ವೇದ ಗುಹ್ಯ.

## ಧರ್ಮಕ್ಕೆ ಯಾವುದು ನೆಲೆ?

ಈ ಹಿಂದೆ ಹೇಳಿದಂತೆ ಶೌನಕಾದಿಗಳು "ಕೃಷ್ಣ ಭೂಮಿಯಲ್ಲಿ ಅವತಾರ ಸಮಾಪ್ತಿ ಮಾಡಿದ ಮೇಲೆ ಭೂಮಿಯಲ್ಲಿ ಧರ್ಮಕ್ಕೆ ನೆಲೆ ಯಾವುದು?" ಎನ್ನುವ ಪ್ರಶ್ನೆ ಹಾಕಿದ್ದರು. ಈ ಪ್ರಶ್ನೆಗೆ ಉಗ್ರಶ್ರವಸ್ ಇಲ್ಲಿ ಉತ್ತರ ನೀಡಿದ್ದಾರೆ.

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।
ಉತ್ತಮಶ್ಲೋಕಚರಿತಂ ಚಕಾರ ಭಗವಾನೃಷಿಃ ॥೪೦॥

ಭಗವಂತನ ಜನ್ಮ-ಕರ್ಮಗಳನ್ನು, ವೇದದ ಮರ್ಮವನ್ನು ಜನಾಂಗಕ್ಕೆ ತಿಳಿಸುವುದಕ್ಕೋಸ್ಕರ ವ್ಯಾಸರು ಭಾಗವತ ರಚನೆ ಮಾಡಿದರು. ಭಾಗವತ ವೇದಕ್ಕೆ ಸಮಾನವಾದುದು. ಅದಕ್ಕಾಗಿ ಇದನ್ನು ಪಂಚಮವೇದ ಎಂದೂ ಕರೆಯುತ್ತಾರೆ. ಭಾಗವತ-ಎಲ್ಲರಿಂದಲೂ ಸ್ತುತ್ಯನಾದ, ಎಲ್ಲಾ ಶಬ್ದಗಳಿಂದ ವರ್ಣನೀಯನಾದ 'ಉತ್ತಮಶ್ಲೋಕ' ಭಗವಂತನ ಚರಿತೆ. ಸ್ವತಃ ಭಗವಂತನೇ ವ್ಯಾಸ ಋಷಿಯಾಗಿ ಬಂದು ಈ ಗ್ರಂಥವನ್ನು ರಚಿಸಿದ.

ಕೃಷ್ಣೇ ಸ್ವಧಾಮೋಪಗತೇ ಧರ್ಮಜ್ಞಾನಾದಿಭಿಃ ಸಹ ।
ಕಲೌ ನಷ್ಟದೃಶಾಂ ಪುಂಸಾಂ ಪುರಾಣಾರ್ಕೋಽಸಮುನೋದಿತಃ ॥೪೫॥

ವ್ಯಾಸಾವತಾರ ಮತ್ತು ಕೃಷ್ಣಾವತಾರದ ನಡುವಿನ ಅಂತರ ಸುಮಾರು ೬೫೦ ವರ್ಷಗಳು. ಕೃಷ್ಣಾವತಾರಕ್ಕೆ ಮೊದಲು ಧರ್ಮದ ಹೊರೆಯನ್ನು ಭಗವಂತ ವ್ಯಾಸ ರೂಪದಲ್ಲಿ ಹೊತ್ತಿದ್ದ. ನಂತರ ಕೃಷ್ಣಾವತಾರವಾದಾಗ ಆ ಹೊರೆಯನ್ನು ಕೃಷ್ಣ ರೂಪದಲ್ಲಿ ಭಗವಂತ ಧರಿಸಿದ. ಕೃಷ್ಣ ಲೋಕದಲ್ಲಿ ತನ್ನ ಜ್ಞಾನದ ಹಿರಿಮೆ, ಆನಂದದ ವೈಭವ, ಎಲ್ಲವನ್ನೂ ಸಂಕ್ಷೇಪಗೊಳಿಸಿ ಹೊರಟುಹೋದಾಗ, ಲೋಕದ ಜನರಿಗೆ ಕಣ್ಣು ಕಟ್ಟಿದಂತಾಯಿತು. ಇಂತಹ ಸಮಯದಲ್ಲಿ ಮರಳಿ ಭಗವಂತ ವ್ಯಾಸ ರೂಪದಲ್ಲಿ 'ಭಾಗವತ' ಎನ್ನುವ ಸೂರ್ಯನ ಮೂಲಕ ತನ್ನ ಬೆಳಕನ್ನು ಹಾಯಿಸಿ, ಜನರ ಕಣ್ಣು ತೆರೆಸಿದ.

ವ್ಯಾಸರು ಇಂತಹ ಅಪೂರ್ವ ಗ್ರಂಥವನ್ನು ತನ್ನ ಮಗನಾದ ಶುಕಾಚಾರ್ಯರಿಗೆ ಉಪದೇಶ ಮಾಡಿದರು. ಅಂತಹ ಭಾಗವತವನ್ನು ಶುಕಾಚಾರ್ಯರು ಪರೀಕ್ಷಿತ ರಾಜನಿಗೆ ಉಪದೇಶ ಮಾಡಿದರು. "ಆ ಉಪದೇಶವನ್ನು ನಾನು ಪರೀಕ್ಷಿತ ರಾಜನೊಂದಿಗೆ ಕುಳಿತು ಕೇಳಿ ತಿಳಿದು, ಇಂದು ನಿಮಗೆ ಹೇಳುತ್ತಿದ್ದೇನೆ" ಎಂದು ಶೌನಕಾದಿಗಳಿಗೆ ಸೂತರು ಭಾಗವತದ ಹಿನ್ನೆಲೆಯನ್ನು ವಿವರಿಸಿದರು ಎನ್ನುವಲ್ಲಿಗೆ-ಈ ಅಧ್ಯಾಯ ಕೊನೆಗೊಳ್ಳುತ್ತದೆ.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ತೃತೀಯೋಽಧ್ಯಾಯಃ॥

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಮೂರನೇ ಅಧ್ಯಾಯ ಮುಗಿಯಿತು.

*********

# ಚತುರ್ಥೋಽಧ್ಯಾಯಃ

## ವ್ಯಾಸಾವತಾರ ಮತ್ತು ಭಾಗವತ ರಚನೆಯ ಹಿನ್ನೆಲೆ

ಉಗ್ರಶ್ರವಸ್ಸರ ವಿವರಣೆ ಕೇಳಿದ ಶೌನಕಾದಿಗಳು ಕೇಳುತ್ತಾರೆ: "ವೇದವ್ಯಾಸರು ಏಂದು, ಏತಕ್ಕಾಗಿ ಭಾಗವತವನ್ನು ರಚಿಸಿದರು? ಇತರ ಎಲ್ಲಾ ಪುರಾಣಗಳನ್ನು ರೋಮಹರ್ಷಣರಿಗೆ ಹೇಳಿದ ವೇದವ್ಯಾಸರು, ವಿಶೇಷವಾಗಿ ಭಾಗವತವನ್ನು, ಎಲ್ಲವನ್ನೂ ತೊರೆದ ವಿರಕ್ತ ಶುಕಾಚಾರ್ಯರಿಗೇಕೆ ಹೇಳಿದರು?" ಎಂದು.

ತಸ್ಯ ಪುತ್ರೋ ಮಹಾಯೋಗೀ ಸಮದೃಙ್ ನಿರ್ವಿಕಲ್ಪಕಃ ।
ಏಕಾಂತಗತಿರುನ್ನಿದ್ರೋ ಗೂಢೋ ಮೂಢ ಇವೇಯತೇ ॥೪॥

ಶುಕಾಚಾರ್ಯರು ಎಲ್ಲವನ್ನೂ ತೊರೆದು ಭಗವಂತನಲ್ಲೇ ಮನಸ್ಸು ನೆಟ್ಟವರು. ಪ್ರಪಂಚದಲ್ಲಿ ಅವರಿಗೆ 'ನನ್ನದು-ನಿನ್ನದು' ಎನ್ನುವ ಭೇದವಿರಲಿಲ್ಲ. ಎಲ್ಲವೂ ಭಗವಂತನದು ಎಂದು ನಿರ್ವಿಕಲ್ಪವಾಗಿ, ಎಲ್ಲಾ ಕಡೆಯೂ ಭಗವಂತನನ್ನು ಕಂಡು, ಎಲ್ಲವನ್ನೂ ಸಮನಾಗಿ ಕಾಣುತ್ತಾ ಬದುಕುತ್ತಿದ್ದವರು. ಸುಖ-ದುಃಖವನ್ನು ಮೀರಿನಿಂತ ಅವರು ಯಾವುದೇ ಪ್ರಾಪಂಚಿಕ ಆಕರ್ಷಣೆಗೆ ಒಳಗಾಗುತ್ತಿರಲಿಲ್ಲ. ಮಹಾಜ್ಞಾನಿಯಾದ ಶುಕಾಚಾರ್ಯರು ಎಂದೂ ತನ್ನೊಳಗಿನ ಆತ್ಮಶಕ್ತಿಯನ್ನು ತೋರಗೊಟ್ಟವರಲ್ಲ. ಮೇಲ್ನೋಟಕ್ಕೆ ನೋಡಿದರೆ ಅವರು ಒಬ್ಬ ಮೂಢನಂತೆ ಕಾಣಿಸಿಕೊಳ್ಳುತ್ತಿದ್ದರು. ಇಂತಹ 'ನಿದ್ದೆಯನ್ನು ಗೆದ್ದ ನಿರ್ವಿಕಲ್ಪ ಯೋಗಿ' ಶುಕಾಚಾರ್ಯರಿಗೆ ಹೇಗೆ ವ್ಯಾಸರು ಭಾಗವತ ಉಪದೇಶ ಮಾಡಿದರು ಎನ್ನುವುದು ಶೌನಕರ ಪ್ರಶ್ನೆ.

ಇಲ್ಲಿ 'ಉನ್ನಿದ್ರ ಮಹಾಯೋಗಿ' ಎಂದು ಶುಕಾಚಾರ್ಯರನ್ನು ಸಂಬೋಧಿಸಲಾಗಿದೆ. ಇದರ ಅರ್ಥ: ರಾತ್ರಿ ಮಲಗದವ ಎಂದರ್ಥವಲ್ಲ. ಈ ಸಂಬೋಧನೆಯ ಅರ್ಥವನ್ನು ಆಚಾರ್ಯರು ಪ್ರಮಾಣಶ್ಲೋಕದೊಂದಿಗೆ ಈ ರೀತಿ ವಿವರಿಸಿದ್ದಾರೆ:

ಸಾಮ್ಯಮೀಶ್ವರ ರೂಪೇಷು ಸರ್ವತ್ರ ತದಧೀನತಾಂ ।
ಪಶ್ಯತಿ ಜ್ಞಾನಸಂಪತ್ಯಾ ವಿನಿದ್ರೋ ಯಃ ಸ ಯೋಗವಿತ್ ॥ ಇತಿ ಬ್ರಾಹ್ಮೇ ॥

ಯಾರು ಅಜ್ಞಾನದ ನಿದ್ರೆಯನ್ನು ಗೆದ್ದು ಎಚ್ಚರವಾಗಿದ್ದಾನೋ ಅವನು ಉನ್ನಿದ್ರ. ಭಗವಂತನ ರೂಪಗಳಲ್ಲಿ ತಾರತಮ್ಯ ಕಾಣದೆ, ಭಗವಂತನ ಎಲ್ಲಾ ರೂಪಗಳಲ್ಲಿ ಪೂರ್ಣತೆಯನ್ನು ಕಂಡು, ಪ್ರಪಂಚದಲ್ಲಿರುವ ಒಂದೊಂದು ವಸ್ತುವೂ ಭಗವಂತನ ಅಧೀನವಾಗಿ, ಭಗವಂತನ ನಿಯಂತ್ರಣದಲ್ಲಿದೆ ಎಂದು ಯಾರು ಸಾಕ್ಷಾತ್ಕರಿಸಿಕೊಂಡಿದ್ದಾರೋ, ಅವರು ನಿದ್ರೆ ಗೆದ್ದ ಯೋಗಿಗಳು.

ಇಂತಹ ಶುಕಾಚಾರ್ಯರು ಏಕೆ ಭಾಗವತ ಕೇಳಿದರು? ಏಕೆ ಅವರು ಅದನ್ನು ಪರೀಕ್ಷಿತರಾಜನಿಗೆ ಹೇಳಿದರು? ಭಗವಂತನ ಅನುಗ್ರಹದಿಂದ ಬದುಕುಳಿದ ಮಹಾತ್ಮನಾದ ಪರೀಕ್ಷಿತ ರಾಜನಿಗೆ ಭಾಗವತ ಕೇಳುವ ಪ್ರಸಂಗ ಹೇಗೆ ಬಂತು? ಇವೆಲ್ಲವನ್ನೂ ವಿವರವಾಗಿ ಹೇಳಬೇಕು ಎಂದು ಶೌನಕರು ಪ್ರಾರ್ಥಿಸುವುದರೊಂದಿಗೆ, ಈ ಅಧ್ಯಾಯ ಪ್ರಾರಂಭವಾಗುತ್ತದೆ. ಇಲ್ಲಿ ಸೂತರು ವೇದವ್ಯಾಸರು ಭೂಮಿಯಲ್ಲಿ ಅವತರಿಸಿದ ಹಿನ್ನೆಲೆಯ ವಿವರಣೆಯೊಂದಿಗೆ ತಮ್ಮ ಮಾತನ್ನು ಮುಂದುವರಿಸುತ್ತಾರೆ.

## ವೇದವಿಭಾಗ ಮತ್ತು ಹದಿನೇಳು ಪುರಾಣಗಳ ರಚನೆ

**ಸೂತ ಉವಾಚ**

**ದ್ವಾಪರೇ ಸಮನುಪ್ರಾಪ್ತೇ ತೃತೀಯೇ ಯುಗಪರ್ಯಯೇ ।**
**ಜಾತಃ ಪರಾಶರಾದ್ ಯೋಗೀ ವಾಸವ್ಯಾಂ ಕಲಯಾ ಹರೇಃ ॥೧೪॥**

ಈ ಶ್ಲೋಕವನ್ನು ಮೇಲ್ನೋಟದಲ್ಲಿ ನೋಡಿದರೆ ಗೊಂದಲವಾಗುತ್ತದೆ. ಇಲ್ಲಿ ದ್ವಾಪರ ಪ್ರಾರಂಭವಾದಾಗ ಹಾಗೂ ಯುಗ ಪರ್ಯಾವಸಾನದಲ್ಲಿ ವ್ಯಾಸರ ಅವತಾರವಾಯಿತು ಎಂದು ಹೇಳಿದಂತೆ ಕಾಣುತ್ತದೆ. ಆದರೆ ಇಲ್ಲಿ 'ಯುಗಪರ್ಯಯೇ' ಎಂಬಲ್ಲಿ ಯುಗ ಶಬ್ದದಲ್ಲಿ 'ಸುಪಾಂಸುಲುಕ್' ಎಂಬ ವ್ಯಾಕರಣ ನಿಯಮದಂತೆ-ಸಪ್ತಮವಿಭಕ್ತಿ ಲೋಪ. 'ದ್ವಾಪರೇ ಯುಗೇ ಪರ್ಯಯೇ'-ದ್ವಾಪರ ಯುಗದಲ್ಲಿ ತತ್ರಾಪಿ ಅದರ ಪರ್ಯಾವಸಾನ ಭಾಗದಲ್ಲಿ ವ್ಯಾಸಾವತಾರವಾಯಿತು. ತೃತೀಯೇ ಎನ್ನುವುದು ದ್ವಾಪರೇ ಎಂಬುದಕ್ಕೆ ವಿಶೇಷಣ. ಆದ್ದರಿಂದ : **"ತೃತೀಯೇ ದ್ವಾಪರೇ ಯುಗೇ ಪರ್ಯಾವಸಾನೇ ಪ್ರಾಪ್ತೇ ಸತಿ ।** ಅಂದರೆ : ಮೂರನೇ ದ್ವಾಪರಯುಗದಲ್ಲಿ ಅದರ ಕೊನೆಯ ಭಾಗ ಬಂದಾಗ, ವೇದವ್ಯಾಸರ ಜನನವಾಯಿತು ಎನ್ನುವುದು ಇಲ್ಲಿರುವ ಒಳಾರ್ಥ.

ವೇದವ್ಯಾಸರು ಭೂಮಿಯಲ್ಲಿ ವಾಸವಿಯ ಮಗನಾಗಿ ಪರಾಶರ ಮುನಿಯಿಂದ ಜನಿಸಿದರು. ಅವರ ಜನನವಾದಾಗ ದ್ವಾಪರದ ಕೊನೆಯ ೬೨೦ ವರ್ಷ ಬಾಕಿ ಇತ್ತು. ವೇದವ್ಯಾಸರ ತಾಯಿ ವಾಸವಿ-ವಸುಪುತ್ರಿ. ಉಪಾರಿಚರ ಎನ್ನುವ ವಸುವಿನ ರೇತಸ್ಸನ್ನು ಮೀನು ನುಂಗಿ, ಆ ಮೀನಿನ ಗರ್ಭದಲ್ಲಿ ಬೆಸ್ತನೊಬ್ಬನಿಗೆ ಆಕೆ ಮಗಳಾಗಿ ಸಿಕ್ಕಿ, ಸತ್ಯವತಿ ಎನ್ನುವ ಹೆಸರು ಪಡೆದ ವಾಸವಿ, ದೋಣಿ ದಾಟಿಸುವ ಅಂಬಿಗನ ಕೆಲಸ ಮಾಡುತ್ತಿದ್ದಳು. ಈ ಕಾಯಕ ಮಾಡುತ್ತಿದ್ದಾಗ ಒಮ್ಮೆ ಪರಾಶರ ಮುನಿಯ ಸಂದರ್ಶನ ಆಕೆಗಾಗುತ್ತದೆ. "ಭಗವಂತ ನಿನ್ನಲ್ಲಿ ಅವತರಿಸಲು ಇಚ್ಛೆಪಡುತ್ತಿದ್ದಾನೆ" ಎಂದು ಪರಾಶರರು ಆಕೆಗೆ ಹೇಳುತ್ತಾರೆ. ಅದರಿಂದಾಗಿ ಆಕೆ ಮದುವೆಗೆ ಮೊದಲು, ಪರಾಶರರಿಂದ, ವೇದವ್ಯಾಸ ಎನ್ನುವ ಪುತ್ರನನ್ನು ಪಡೆಯುತ್ತಾಳೆ. ಹೀಗೆ ಭಗವಂತನ ಅವತಾರಕ್ಕೆ ಕಾರಣಳಾದ ಮಹಾಮಹಿಳೆ ಸತ್ಯವತಿ.

ಸತ್ಯವತಿಯನ್ನು ಮುಂದೆ ಶಂತನು ಚಕ್ರವರ್ತಿ ಇಷ್ಟಪಟ್ಟು ಮದುವೆಯಾಗುತ್ತಾನೆ. ಇವರ ದಾಂಪತ್ಯದಲ್ಲಿ ಚಿತ್ರಾಂಗದ ಮತ್ತು ವಿಚಿತ್ರವೀರ್ಯರ ಜನನವಾಗುತ್ತದೆ. ಆದರೆ ಅವರಿಬ್ಬರೂ ಅಕಾಲದಲ್ಲಿ ಮರಣಹೊಂದಿದಾಗ, ಸತ್ಯವತಿಯ ಮಗನಾದ ವ್ಯಾಸರಿಂದಲೇ ಪಾಂಡು-ಧೃತರಾಷ್ಟ್ರ ಸಂತತಿ ಬೆಳೆಯುತ್ತದೆ.

ಹಿಂದೆ ಹೇಳಿದಂತೆ: 'ವಾಸವಿ' ವಸುವಿನ ಮಗಳಾಗಿದ್ದುದರಿಂದ-ಆಕೆ ದೇವಗಣ ಪ್ರವಿಷ್ಟಳು. ಅವಳನ್ನು ಭಗವಂತ ತನ್ನ ಅವತಾರಕ್ಕೆ ಮಾಧ್ಯಮವಾಗಿ ಬಳಸಿದ. ನಂತರ ವಂಶವಿಲ್ಲದೇ ನಿಂತು ಹೋಗಿದ್ದ ಕುರುವಂಶಕ್ಕೆ ಸಂತತಿಯ ಚಾಲನೆ ಕೊಟ್ಟು, ಅದರಿಂದ ಕೌರವ-ಪಾಂಡವ ಸಂತತಿಗೆ ಆಕೆ ಕಾರಣಳಾದಳು. ಹೀಗೆ ಯುಗಾಂತದಲ್ಲಿ ನಡೆದ ಘೋರ ಯುದ್ಧಕ್ಕೆ ಕಾರಣರಾದ ಸಂತತಿಯ ಮೂಲ ಸತ್ಯವತಿ. ಅಷ್ಟೇ ಅಲ್ಲ, ಪಾಂಡವರಂತಹ ಮಹಾಪುರುಷರು ಹಾಗೂ ಅವರ ಸಂತತಿ ಈ ದೇಶವನ್ನು ಸುಮಾರು ಎರಡು ಸಾವಿರ ವರ್ಷಗಳ ಕಾಲ ಆಳಲು ಕಾರಣಳಾಗಿ, ಆ ಸಂತತಿಯನ್ನು ಬೆಳೆಸಿದ ಮೂಲವ್ಯಕ್ತಿ 'ವಾಸವಿ'. ಇಂತಹ ಮಹಾಮಹಿಳೆಯಲ್ಲಿ ಭಗವಂತ ವ್ಯಾಸರೂಪದಲ್ಲಿ ಅವತರಿಸಿದ.

**ತತ್ರರ್ಗ್ವೇದಧರಃ ಪೈಲಃ ಸಾಮಗೋ ಜೈಮಿನಿಃ ಕವಿಃ ।**
**ವೈಶಂಪಾಯನ ಏವೈಕೋ ನಿಷ್ಣಾತೋ ಯಜುಷಾಂ ತತಃ ॥೨೦॥**

**ಅಥರ್ವಾಂಗಿರಸಾಮಾಸೀತ್ ಸುಮಂತುರ್ದಾರುಣೋ ಮುನಿಃ ।**
**ಇತಿಹಾಸಪುರಾಣಾನಾಂ ಪಿತಾ ಮೇ ರೋಮಹರ್ಷಣಃ ॥೨೧॥**

ಋಗ್ವೇದವನ್ನು ಪೈಲಃ ಎನ್ನುವ ಮುನಿಗೆ, ಸಾಮವೇದವನ್ನು ಜೈಮಿನಿಗೆ ಹಾಗೂ ಯಜುರ್ವೇದವನ್ನು ವೈಶಂಪಾಯನನಿಗೆ ಉಪದೇಶಿಸಿದ ವ್ಯಾಸರು, ಅಥರ್ವವೇದವನ್ನು ವರುಣಪುತ್ರನಾದ ಸುಮಂತು ಎನ್ನುವ ಮುನಿಗೆ ಉಪದೇಶಿಸಿದರು. ಹದಿನೇಳು ಪುರಾಣಗಳು ಉಗ್ರಶ್ರವಸ್ಸಿನ ತಂದೆ ರೋಮಹರ್ಷಣರಿಗೆ ವ್ಯಾಸರಿಂದ ಉಪದೇಶಿಸಲ್ಪಟ್ಟಿತು.

ಇಲ್ಲಿ ಹೇಳಲಾದ ಋಷಿಗಳ ಹೆಸರು ಮೇಲ್ನೋಟಕ್ಕೆ ನಮಗೆ ವಿಚಿತ್ರವಾಗಿ ಕಾಣುತ್ತದೆ. ಆದರೆ ಈ ಹೆಸರಿನ ಹಿಂದಿನ ಅರ್ಥವನ್ನು ನೋಡಿದಾಗ, ಆ ಹೆಸರಿನ ಮಹತ್ವ ತಿಳಿಯುತ್ತದೆ. ಇಲ್ಲಿ ಪೈಲಃ ಎಂದರೆ 'ಪೀಲ' ನ ಮಗ. ಪೀಲ ಎಂದರೆ ಜ್ಞಾನಿ ಎಂದರ್ಥ. ಅದೇ ರೀತಿ ಜೈಮಿನಿ ಎಂದರೆ ಜಿಮಿನನ ಮಗ. ಜಿಮಿನಃ ಎಂದರೆ ಜ್ಞಾನದ ಸಾಧನೆಗಾಗಿ ತನ್ನ ಬದುಕನ್ನು ಅರ್ಪಿಸಿಕೊಂಡವ ಎಂದರ್ಥ. ವೈಶಂಪಾಯನ-ವಿಶಂಪನನ ಮಗ. ವಿಶಿಷ್ಟವಾದ ಭಗವದನುಭೂತಿಯಿಂದ ಭಗವದನುಭವದ ಆನಂದವನ್ನು ಕಂಡವರು ವಿಶಂಪನರು. ಸುಮಂತು ಎಂದರೆ ಆನಂದಮಯನಾದ ಭಗವಂತನನ್ನು ಮನನ ಮಾಡುವವರು ಎಂದರ್ಥ.

ಪೈಲ ಹಾಗೂ ಆತನ ಶಿಷ್ಯವೃಂದದಿಂದ ಋಗ್ವೇದ ೨೪ ಶಾಖೆಗಳಾಗಿ ಬೆಳೆಯಿತು. ವೈಶಂಪಾಯನನ ಶಿಷ್ಯರಿಂದ ಯಜುರ್ವೇದ ೧೦೧ ಶಾಖೆಗಳಾದರೆ, ಜೈಮಿನಿ ಶಿಷ್ಯರಿಂದ ಸಾಮವೇದ ಸಾವಿರ ಶಾಖೆಗಳಾಗಿ ಬೆಳೆಯಿತು. ಅಥರ್ವವೇದ ಸುಮಂತುವಿನ ಶಿಷ್ಯರಿಂದ ೧೨ ಶಾಖೆಯನ್ನು ಕಂಡಿತು. ಹೀಗೆ ಶಾಖೋಪಶಾಖೆಗಳಾಗಿ ವೇದಗಳು, ಆರಣ್ಯಕಗಳು, ಬ್ರಾಹ್ಮಣ-ಉಪನಿಷತ್ತುಗಳು ಹುಟ್ಟಿದವು. ವೇದಗಳ ಅರ್ಥನಿರ್ಣಯಕ್ಕೋಸ್ಕರ ಹದಿನೇಳು ಪುರಾಣ ರಚನೆಯಾಯಿತು. ಈ ಎಲ್ಲಾ ರಚನೆಯ ನಂತರವೂ ಕೂಡಾ ವ್ಯಾಸರಿಗೆ ತೃಪ್ತಿಯಾಗಲಿಲ್ಲ. ಅದಕ್ಕಾಗಿ ಅವರು ಮಹಾಭಾರತವನ್ನು ರಚನೆ ಮಾಡಿದರು.

## ಮಹಾಭಾರತ ರಚನೆ

ವೇದವಿಭಾಗ ಮಾಡಿ ತೃಪ್ತಿಯಾಗದೇ ವ್ಯಾಸರು ಭಾರತ ರಚನೆ ಮಾಡಿದರು ಎಂದು ಹೇಳಿದಾಗ ಸಾಮಾನ್ಯವಾಗಿ ನಮಗೊಂದು ಪ್ರಶ್ನೆ ಬರುತ್ತದೆ. ಅದೇನೆಂದರೆ: "ವೇದದಲ್ಲಿ ಹೇಳದೇ ಇರುವ ವಿಚಾರ ಮಹಾಭಾರತದಲ್ಲಿ ಅಡಗಿದೆಯೋ" ಎನ್ನುವ ಪ್ರಶ್ನೆ. ಈ ಪ್ರಶ್ನೆಗೆ ಉತ್ತರವನ್ನು ವ್ಯಾಸರೇ ನೀಡಿರುವುದನ್ನು ಮುಂದಿನ ಶ್ಲೋಕದಲ್ಲಿ ಕಾಣಬಹುದು.

**ಸ್ತ್ರೀ ಶೂದ್ರ ಬ್ರಹ್ಮ(/ದ್ವಿಜ)ಬಂಧೂನಾಂ ತ್ರಯೀ ನ ಶ್ರುತಿಗೋಚರಾ ।**
**ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ ।**
**ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥೨೫॥**

ಈ ಶ್ಲೋಕವನ್ನು ಆಳವಾಗಿ ವಿಶ್ಲೇಷಿಸದೇ ಇದ್ದರೆ, ಇಲ್ಲಿ ಬರಿಯ ಗೊಂದಲ ಹಾಗೂ ವಿವಾದ ಹುಟ್ಟುವ ಸಾಧ್ಯತೆ ಇದೆ. ಇಲ್ಲಿ: "ಸ್ತ್ರೀಯರಿಗೆ, ಶೂದ್ರರಿಗೆ ಮತ್ತು ಬ್ರಹ್ಮಬಂಧುಗಳಿಗೆ ವೇದ ಮುಟ್ಟುವುದಿಲ್ಲ, ಅದಕ್ಕಾಗಿ ಅವರಿಗೆ ಮುಟ್ಟುವಂತೆ

ಒಂದು ಅಧ್ಯಾತ್ಮ ಸಾಹಿತ್ಯ ಕೊಡಬೇಕು ಎಂದು ಬಯಸಿ, ವ್ಯಾಸರು ಮಹಾಭಾರತ ರಚನೆ ಮಾಡಿದರು" ಎನ್ನಲಾಗಿದೆ. ಇದನ್ನು ನಾವು ಆಳವಾಗಿ ಚಿಂತನೆ ಮಾಡಿ, ಶ್ಲೋಕದಲ್ಲಿ ಹೇಳಿರುವ ಸತ್ಯ ಸಂದೇಶವನ್ನು ತಿಳಿಯಬೇಕು.

ಅಧ್ಯಾತ್ಮ ಜ್ಞಾನ ಎಲ್ಲರಿಗೂ ಮುಟ್ಟಬೇಕು. ಆದರೆ ಇಲ್ಲಿ ಕೆಲವರಿಗೆ ಅಧಿಕಾರ ಇಲ್ಲಾ ಎಂದು ಏಕೆ ಹೇಳಿದರು ಎನ್ನುವುದನ್ನು ನಾವು ಮೊದಲು ಅರಿಯಬೇಕು. ಯಾವುದೇ ಒಂದು ಅಧ್ಯಯನಕ್ಕೆ ಲಿಂಗ-ಜಾತಿ ಮಾನದಂಡವಲ್ಲ. ಜ್ಞಾನಕ್ಕೆ ಮಾನದಂಡ ಅರ್ಹತೆ. ವಿದ್ಯೆಯನ್ನು ಅರ್ಹತೆ ಇಲ್ಲದವರಿಗೆ ಹೇಳಿದರೆ ಅದು ದುರುಪಯೋಗ ಅಥವಾ ನಿರುಪಯೋಗವಾಗುತ್ತದೆ. ಹೀಗಾಗಿ ಅರ್ಹತೆಯನ್ನು ಪರೀಕ್ಷಿಸದೇ ಯಾವುದೇ ವಿದ್ಯೆಯನ್ನು ಕೊಡುವ ಕ್ರಮವಿಲ್ಲ. ವೇದ ಕೂಡಾ ಅಷ್ಟೇ. ಗ್ರಹಣ ಮಾಡುವ ಸಾಮರ್ಥ್ಯ ಇದ್ದವರಷ್ಟೇ ವೇದದ ಅಧಿಕಾರಿಗಳು.

ಇಲ್ಲಿ ಸ್ತ್ರೀಯರಿಗೆ ವೇದವನ್ನು ಗ್ರಹಣ ಮಾಡುವ ಸಾಮರ್ಥ್ಯ ಇಲ್ಲವೇ? ಎನ್ನುವ  ಪ್ರಶ್ನೆ ಎಲ್ಲರಿಗೂ ಬರುತ್ತದೆ. ಇದನ್ನು ಅರ್ಥಮಾಡಿಕೊಳ್ಳಲು ನಾವು ಇತಿಹಾಸವನ್ನು ನೋಡಬೇಕಾಗುತ್ತದೆ. ಹಿಂದೆ ಸ್ತ್ರೀಯರಲ್ಲಿ ಎರಡು ವರ್ಗವಿತ್ತು. ೧. ವೇದಾಧ್ಯಯನಕ್ಕೋಸ್ಕರ ಮದುವೆಯಾಗದೇ ಇರುತ್ತಿದ್ದ 'ಬ್ರಹ್ಮವಾದಿನಿ'ಯರು ಹಾಗೂ ೨. ಪ್ರಾರ್ಥಮಿಕ ಅಧ್ಯಯನದ ನಂತರ ಮದುವೆಯಾಗುತ್ತಿದ್ದ 'ಸತ್ಯವಧು'ಗಳು.  ಬ್ರಹ್ಮವಾದಿನಿಯರು ಸಾಮಾಜಿಕವಾಗಿ ಅತಂತ್ರರಾಗಿರುತ್ತಿದ್ದರು. ರಕ್ಷಣೆ ಇಲ್ಲದ ಹೆಣ್ಣನ್ನು ಸಮಾಜ ಕೆಟ್ಟದೃಷ್ಟಿಯಿಂದ ಕಾಣುವ ಅಪಾಯ ಅಲ್ಲಿತ್ತು. ವೇದವ್ಯಾಸರೇ ಭಾರತದಲ್ಲಿ ಹೇಳುವಂತೆ: "ಹೇಗೆ ಮಾರ್ಗದಲ್ಲಿ ಬಿದ್ದಿರುವ ಮಾಂಸದ ತುಂಡನ್ನು ಹದ್ದು-ನಾಯಿಗಳು ನೋಡುತ್ತಾವೋ ಹಾಗೇ, ರಕ್ಷಣೆ ಇಲ್ಲದ ಹೆಣ್ಣನ್ನು ಸಮಾಜ ಕಾಣುತ್ತದೆ" ಎಂದು. ಇದಕ್ಕಾಗಿ ಸ್ತ್ರೀಯರು ಮದುವೆಯಾಗುವುದೇ ಉತ್ತಮ ಎನ್ನುವ ಸಾಮಾಜಿಕ ಪದ್ಧತಿ ಜಾರಿಗೆ ಬಂತು.

ಇಲ್ಲಿ ನಮಗೆ ಕಾಡುವ ಇನ್ನೊಂದು  ಪ್ರಶ್ನೆ ಏನೆಂದರೆ: "ಮದುವೆಯಾದ ಹೆಣ್ಣು ಏಕೆ ವೇದಾಧ್ಯಯನ ಮಾಡಬಾರದು" ಎನ್ನುವುದು. ಸೂಕ್ಷ್ಮವಾಗಿ ಈ ವಿಚಾರವನ್ನು ನಾವು ವಿಶ್ಲೇಷಿಸಿದರೆ ನಮಗೆ ತಿಳಿಯುವುದೇನೆಂದರೆ: "ಗರ್ಭಕೋಶ" ಎನ್ನುವ ವಿಶೇಷ ಭಾಗ ಪ್ರಕೃತಿ ಕೇವಲ ಹೆಣ್ಣಿಗೆ ನೀಡಿದೆ. ಆದ್ದರಿಂದ ಸಮಾಜಕ್ಕೆ ಒಂದು ಉತ್ತಮ ಸಂತಾನವನ್ನು ಹೆತ್ತು ಕೊಡುವ ಜವಾಬ್ಧಾರಿ ಹೆಣ್ಣಿನಲ್ಲಿದೆ. ಅತಿಯಾದ ಮಾನಸಿಕ ಒತ್ತಡಕ್ಕೊಳಗಾದ ಹೆಣ್ಣಿನ ಗರ್ಭಕೋಶ ದುರ್ಬಲವಾಗುವ ಅಪಾಯವಿದೆ ಎಂದು ಇಂದಿನ ವೈದ್ಯಶಾಸ್ತ್ರ ಹೇಳುತ್ತದೆ. ವೇದಾಧ್ಯಯನ ಹಾಗೂ ಮಗುವಿನ ಪಾಲನೆ ಹೆಣ್ಣಿಗೆ ಎರಡು ದೋಣಿಯಲ್ಲಿ ಕಾಲಿಟ್ಟ ಪಯಣ. ಇದು ಆಕೆಯಲ್ಲಿ ಜನಿಸುವ ಮಗುವಿನ ಮೇಲೆ ಪ್ರಭಾವಬೀರಬಹುದು. "ಸಮಾಜಕ್ಕೆ ಉತ್ತಮ ಸಂತಾನ ಕೊಡುವುದು ಹೆಣ್ಣಿನ ಕರ್ತವ್ಯ ಹಾಗೂ ಅದು ವೇದಾಧ್ಯಯನ ಮಾಡುವುದಕ್ಕಿಂತ ಹೆಚ್ಚಿನ ಪುಣ್ಯದ ಕೆಲಸ" ಎಂದು ಶಾಸ್ತ್ರಕಾರರು ಹೇಳುತ್ತಾರೆ. ಇದು ಪ್ರಕೃತಿಯ ಕೊಡುಗೆಯನ್ನು ನಾವು ಜೀವನದಲ್ಲಿ ಹೊಂದಾಣಿಕೆ ಮಾಡಿಕೊಂಡು ಬದುಕುವ ವಿಧಾನ. ಇದನ್ನು ಬಿಟ್ಟು ಇಲ್ಲಿ ಭೇದಭಾವ, ಮೇಲು-ಕೀಳು ಯಾವುದೂ ಇಲ್ಲ.

ಹೆಣ್ಣಿಗೆ ವೇದಾಧಿಕಾರ ಇಲ್ಲ ಎಂದಿಲ್ಲ. ಏಕೆಂದರೆ ಅವರು  "ಧರ್ಮೇಚ ಅರ್ಥೇಚ ಕಾಮೇಚ ನಾತಿಚರಾಮಿ" ಎಂದು ಪ್ರತಿಜ್ಞೆ ಮಾಡುವವರು. ಗಂಡ ಮಾಡುವ ಧರ್ಮ ಕಾರ್ಯದಲ್ಲಿ ಸ್ತ್ರೀಗೆ ಸಹಭಾಗವಿದೆ. ಇವೆಲ್ಲವೂ ವೈದಿಕವಾಗಿಯೇ ನಡೆಯುತ್ತದೆ ಮತ್ತು ಅಲ್ಲಿ ಸ್ತ್ರೀ ಕುಳಿತು ಸಂಕಲ್ಪ ಮಾಡುತ್ತಾಳೆ. ಆದರೆ "ವೇದಾಧ್ಯಯನಕ್ಕೆ ಬದುಕನ್ನು ಮೀಸಲಿಟ್ಟು ಸಾಂಸಾರಿಕ ಜೀವನವನ್ನು ನೀರಸ ಮಾಡಿಕೊಳ್ಳಬೇಡಿ" ಎನ್ನುವುದು ಹಿಂದಿನವರ ಕಿವಿಮಾತು. ಕೆಲವು ಅಸಾಧಾರಣ ವ್ಯಕ್ತಿತ್ವವುಳ್ಳ ಸ್ತ್ರೀಯರಿದ್ದಾರೆ. ವೇದ ಮಂತ್ರವನ್ನು ಕಂಡ ಋಷಿಕೆಯರೂ ಇದ್ದಾರೆ. ಆದರೆ ಸ್ತ್ರೀಯರ ಮೇಲೆ ವೇದಾಧ್ಯಯನದ ಒತ್ತಡ/ಹೇರಿಕೆ ನಿಷಿದ್ಧ.

ಭಗವಂತನ ಸೃಷ್ಟಿಕ್ರಿಯೆಯ ಮೂಲಸಾಧನ ಹೆಣ್ಣು. ಆತ ತನ್ನ ಸೃಷ್ಟಿಕ್ರಿಯೆಗೆ ನಮ್ಮನ್ನು ಮಾಧ್ಯಮವಾಗಿ ಬಳಸುತ್ತಾನೆ ಎನ್ನುವುದು ಹೆಣ್ಣಿಗೆ ಹೆಮ್ಮೆಪಡುವ ಸಂಗತಿ. ಅಂತಹ ಶ್ರೇಷ್ಠ ಕಾರ್ಯ ಮಾಡಲು ಇಂತಹ ಕೆಲವು ನಿಯಮಗಳನ್ನು ಶಾಸ್ತ್ರ ಹೇಳುತ್ತದೆ. ದುರ್ಬಲವಾದ ಮಗುವನ್ನು ಕೊಡುವ ತಾಯಿಯಾಗಬಾರದು ಎನ್ನುವ ಉದ್ದೇಶದಿಂದ, ಸ್ತ್ರೀಯರಿಗೆ ಬಲವಂತದ ಉಚ್ಛಶಿಕ್ಷಣವನ್ನು ಶಾಸ್ತ್ರ ನಿಷೇಧಿಸುತ್ತದೆ. ಎರಡು ದೋಣಿಯಲ್ಲಿ ಕಾಲಿಟ್ಟು ಮಾಡುವ ಪಯಣ ಎಂದೂ ಶ್ರೇಯಸ್ಕರವಲ್ಲ. ಅಲ್ಲಿ ಒಂದೇ ನಮ್ಮ ಸಂತಾನಕ್ಕೆ ಅಥವಾ ನಮಗೇ ಅನ್ಯಾಯವಾಗುವ ಸಾಧ್ಯತೆ ಹೆಚ್ಚು. ಇವು ಜೀವನದ ಅನುಭವದ ಮಾತೇ ಹೊರತು, ಪಕ್ಷಪಾತದ ಹೇಳಿಕೆಗಳಲ್ಲ.

ವೇದಸಂಸ್ಕೃತ ಅತ್ಯಂತ ಭಿನ್ನ. ಸಂಸ್ಕೃತ ಭಾಷೆಯನ್ನು ಚೆನ್ನಾಗಿ ಬಲ್ಲ ಪಂಡಿತರಿಗೇ ವೇದ ಅರ್ಥವಾಗುವುದಿಲ್ಲ. ವೇದದ ಅಂತರಂಗ, ಅದರಲ್ಲಿರುವ ಅಧ್ಯಾತ್ಮ ರಹಸ್ಯ ಅತ್ಯಂತ ಗುಹ್ಯ. ಹೀಗಾಗಿ ವೇದದ ಮೇಲ್ನೋಟದ ಅರ್ಥ ತಿಳಿಯಲಿಕ್ಕೇ ಒಂದು ಜನ್ಮ ಸಾಲದು. ಆದ್ದರಿಂದ ಇಡೀ ಜೀವನವನ್ನು ವೇದಾಧ್ಯಯನಕ್ಕೆ ಮುಡಿಪಾಗಿಡಲು ಬದ್ಧರಾದವರು ಮಾತ್ರ ವೇದಾಧ್ಯಯನಕ್ಕೆ ಕೈಹಾಕಬೇಕು. ಹಾಗೆ ಅಧ್ಯಯನ ಮಾಡಲು ಬ್ರಾಹ್ಮಣ್ಯದ ಅರ್ಹತೆ ಬಹಳ ಮುಖ್ಯ. ಗೀತೆಯಲ್ಲಿ ಹೇಳುವಂತೆ: **ಶಮಃ ದಮಃ ತಪಃ ಶೌಚಂ ಕ್ಷಾಂತಿ ಆರ್ಜವಮ್ ಏವ ಚ । ಜ್ಞಾನಂ ವಿಜ್ಞಾನಮ್ ಆಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥೧೮-೪೨॥** -- ಭಗವಂತನಲ್ಲಿ ನಿಷ್ಠೆ, ಇಂದ್ರಿಯಗಳಲ್ಲಿ ಹಿಡಿತ, ಉಪವಾಸಾದಿ ನೇಮಗಳು, ನೈರ್ಮಲ್ಯ, ಅಪಕಾರಿಯನ್ನೂ ಮನ್ನಿಸುವ ಸೈರಣೆ, ನೇರ ನಡೆ-ನುಡಿ, ತಿಳಿವು, ಆಳವಾದ ಸಂಶೋಧನಾ ದೃಷ್ಟಿ ಮತ್ತು ಆಸ್ತಿಕತೆ- ಇವು ಬ್ರಾಹ್ಮಣ ಸ್ವಭಾವದ ಸಹಜ ಕರ್ಮಗಳು. ಈ ಎಲ್ಲಾ ಅರ್ಹತೆಗಳು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ ಎಲ್ಲರಿಗೂ ಬರಬೇಕೆಂದೇನೂ ಇಲ್ಲ. ಆ ರೀತಿ ಬ್ರಾಹ್ಮಣ್ಯದ ಅರ್ಹತೆ ಇಲ್ಲದ, ಆದರೆ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ 'ಬ್ರಹ್ಮಬಂಧು'ಗಳಿಗಾಗಿ, ಸದಾ ಸೇವಾ ಮಾರ್ಗದಲ್ಲಿ ನಿರತರಾಗಿರುವ ಶೂದ್ರವರ್ಣದವರಿಗಾಗಿ ಮತ್ತು ಸ್ತ್ರೀಯರಿಗಾಗಿ ವ್ಯಾಸರು ಮಹಾಭಾರತ ರಚನೆ ಮಾಡಿದರು. ಏನು ಮಾಡಬೇಕು-ಏನು ಮಾಡಬಾರದು ಎಂದು ಅರಿಯದೇ ತೊಳಲಾಡುತ್ತಿರುವ ಜನರಿಗೆ, ಒಂದು ಶ್ರೇಯಸ್ಸಿನ ಮಾರ್ಗ ತೋರಿಸುವುದು ವ್ಯಾಸರ ಭಾರತ ರಚನೆಯ ಮೂಲ ಉದ್ದೇಶವಾಗಿತ್ತು.

ಇಲ್ಲಿ ನಮಗೆ ಸ್ಪಷ್ಟವಾಗಿ ತಿಳಿಯುವುದೇನೆಂದರೆ: ವೇದದಲ್ಲಿ ಹೇಳಿದ ಅಧ್ಯಾತ್ಮ ಸಾರವನ್ನು ಮನುಷ್ಯಮಾತ್ರಕ್ಕೆ ಮುಟ್ಟಿಸುವ ಉದ್ದೇಶದಿಂದ ವ್ಯಾಸರು ಮಹಾಭಾರತ ರಚನೆ ಮಾಡಿದರು. ಹಾಗಾಗಿ ಬ್ರಹ್ಮಜ್ಞಾನಿಗೆ ವೇದಾರ್ಥ ನಿರ್ಣಯಕ್ಕಾಗಿ ಭಾರತವಾದರೆ, ಉಳಿದವರಿಗೆ ಮಹಾಭಾರತವೇ ವೇದ. ಹೀಗಿರುವಾಗ ಮಹಾಭಾರತದ ಅಂಗವಾದ ಭಗವದ್ಗೀತೆ ಮತ್ತು ವಿಷ್ಣುಸಹಸ್ರನಾಮವನ್ನು ಸ್ತ್ರೀಯರು ಓದಬಾರದು ಎಂದು ಹೇಳುವುದು ಅಸಂಗತ. ಭಾರತಕ್ಕೆ ಗಂಡಸು-ಹೆಂಗಸು-ಶೂದ್ರ-ಬ್ರಾಹ್ಮಣ ಎನ್ನುವ ಭೇದವಿಲ್ಲ. ಅದು ಎಲ್ಲಾ ವರ್ಣಾಶ್ರಮದವರಿಗೆ ಭಗವಂತ ನೀಡಿದ ಪಂಚಮ ವೇದ.

**ಏವಂ ಪ್ರವೃತ್ತಸ್ಯ ಸದಾ ಭೂತಾನಾಂ ಶ್ರೇಯಸಿ ದ್ವಿಜಾಃ ।**
**ಸರ್ವಾತ್ಮಕೇನಾಪಿ ಯದಾ ನಾತುಷ್ಯದ್ ಹೃದಯಂ ತತಃ ॥೨೫॥**

**ನಾತಿಪ್ರಸನ್ನ ಹೃದಯಃ ಸರಸ್ವತ್ಯಾಸ್ತಟೇ ಶುಚೌ ।**
**ವಿತರ್ಕಯನ್ ವಿವಿಕ್ತಸ್ಥ ಇದಂ ಚೋವಾಚ ಧರ್ಮವಿತ್ ॥೨೬॥**

ಪ್ರಾಣಿಮಾತ್ರದ ಶ್ರೇಯಸ್ಸಿಗಾಗಿ ವೇದವಿಭಾಗ, ಹದಿನೇಳು ಪುರಾಣಗಳು ಮತ್ತು ಭಾರತ ರಚಿಸಿದ ವ್ಯಾಸರಿಗೆ ತೃಪ್ತಿಯಾಗಲಿಲ್ಲವಂತೆ. ಅವರು ತಾನು ಸಮಾಜಕ್ಕೆ ಕೊಟ್ಟಿದ್ದು ಸಾಲದು, ಇನ್ನೂ ಏನಾದರೂ ಕೊಡಬೇಕು ಎಂದು ಯೋಚಿಸುತ್ತಿರುವವರಂತೆ ಧ್ಯಾನ ಮಾಡುತ್ತಾ ಸರಸ್ವತೀ ನದಿ ತೀರದಲ್ಲಿ ಏಕಾಂತದಲ್ಲಿ ಕುಳಿತರಂತೆ.

ಧೃತವ್ರತೇನ ಹಿ ಮಯಾ ಛಂದಾಂಸಿ ಗುರವೋಽಗ್ನಯಃ ।
ಮಾನಿತಾ ನಿರ್ವ್ಯಳೀಕೇನ ಗೃಹೀತಂ ಚಾನುಶಾಸನಮ್ ॥೨೭॥

"ತಾನು ವ್ರತನಿಷ್ಠನಾಗಿ ವೇದಗಳನ್ನೂ, ಗುರುಗಳನ್ನೂ ಹಾಗೂ ಅಗ್ನಿಯನ್ನೂ ಸತ್ಕರಿಸಿದೆ. ಗುರುಗಳ ಆಜ್ಞೆಗನುಗುಣವಾಗಿ ನಡೆದಿದ್ದೇನೆ. ನಾನಿನ್ನೂ ಮಾಡಬೇಕಾದ ಕೆಲಸ ಬಾಕಿ ಇದೆ; ಅದು ಪೂರ್ಣವಾಗಿಲ್ಲ ಎಂದು ನನಗನಿಸುತ್ತಿದೆ" ಎಂದುಕೊಳ್ಳುತ್ತಾರೆ ವ್ಯಾಸರು. ಭಗವಂತನ ಅವತಾರವಾದ ವ್ಯಾಸರು ಏಕೆ ಹೀಗೆ ಹೇಳುತ್ತಿದ್ದಾರೆ ಎಂದು ನಿಮಗನಿಸಬಹುದು. ಇದಕ್ಕೆ ಕಾರಣ-ಭಗವಂತ ತನ್ನ ಅವತಾರದಲ್ಲಿ ತಾನು ಯಾವ ರೂಪದಲ್ಲಿ ಭೂಮಿಯ ಮೇಲೆ ಕಾಣಿಸಿಕೊಳ್ಳುತ್ತಾನೋ, ಆ ರೂಪದ ಧರ್ಮಕ್ಕನುಗುಣವಾಗಿ ನಡೆದುಕೊಳ್ಳುತ್ತಾನೆ. ಆ ಪಾತ್ರಕ್ಕನುಗುಣವಾದ ಕರ್ಮವನ್ನು ಮಾಡಿ ಜನರಿಗೆ ಮಾರ್ಗದರ್ಶನ ಮಾಡುತ್ತಾನೆ. ಶ್ರೀಕೃಷ್ಣ ಪ್ರತಿನಿತ್ಯ ಸಂಧ್ಯಾವಂದನೆ ಮಾಡುತ್ತಿದ್ದುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. ಇಲ್ಲಿ ವ್ಯಾಸರು ತಾವು ಅತೃಪ್ತರಾದವರಂತೆ ಕಾಣಿಸಿಕೊಳ್ಳುತ್ತಿದ್ದಾರೆ. ಇದು ಭಗವಂತನ ಲೀಲೆ.

ಭಾರತವ್ಯಪದೇಶೇನ ಹ್ಯಾಮ್ನಾಯಾರ್ಥಃ ಪ್ರದರ್ಶಿತಃ ।
ದೃಶ್ಯತೇ ಯತ್ರ ಧರ್ಮೋ ಹಿ ಸ್ತ್ರೀಶೂದ್ರಾದಿಭಿರಪ್ಯುತ ॥೨೮॥

ಭಾರತ ಎನ್ನುವ ಗ್ರಂಥ ರಚನೆಯಿಂದ ಇಡೀ ವೇದ ಸಾರವನ್ನು ಜಗತ್ತಿಗೆ ಕೊಟ್ಟಂತಾಗಿದೆ. ಆದರೂ ಕೂಡಾ ಇನ್ನೂ ಏನನ್ನೋ ಕೊಡಬೇಕು ಅನಿಸುತ್ತಿದೆ ವ್ಯಾಸರಿಗೆ.

ಅಥಾಪಿ ಬತ ಮೇ ದೈಹ್ಯೋ ಹ್ಯಾತ್ಮಾ ಚೈವಾತ್ಮನಾ ವಿಭುಃ ।
ಅಸಂಪನ್ನ ಇವಾಭಾತಿ ಬ್ರಹ್ಮವರ್ಚಸ್ವಿಸತ್ತಮಃ ॥೨೯॥

ಸ್ವಸಾಮರ್ಥ್ಯದಿಂದಲೇ ಎಲ್ಲವನ್ನೂ ತಿಳಿಯಬಲ್ಲ ಶಕ್ತಿಯುಳ್ಳ ವ್ಯಾಸರಿಗೆ ಬ್ರಹ್ಮವರ್ಚಸ್ವಿಗಳಲ್ಲಿ ಉತ್ತಮವಾದ, ಸ್ವತಃ ಪೂರ್ಣವಾದ ದೇಹರೂಪವಾದ ತನ್ನ ಆತ್ಮ ಕೃತಕೃತ್ಯವಾಗಿಲ್ಲದಂತೆ ಕಾಣುತ್ತದೆ!

ಕಿಂ ವಾ ಭಾಗವತಾ ಧರ್ಮಾ ನ ಪ್ರಾಯೇಣ ನಿರೂಪಿತಾಃ ।
ಪ್ರಿಯಾಃ ಪರಮಹಂಸಾನಾಂ ತ ಏವ ಹ್ಯಚ್ಯುತಪ್ರಿಯಾಃ ॥೩೦॥

ಎಲ್ಲವನ್ನೂ ಕೊಟ್ಟ ಮೇಲೆ ಏಕೀ ಕೊರತೆ? ಪ್ರಾಯಃ ಹೀಗಿರಬಹುದು: ಭಗವಂತನ ಮಹಿಮೆಯ ಬಿತ್ತರಕ್ಕೋಸ್ಕರ ಅನೇಕ ಗ್ರಂಥ ರಚನೆ ನನ್ನಿಂದಾಯಿತು. ಆದರೆ ಕೇವಲ ಭಗವಂತನ ಮಹಿಮೆಯನ್ನು ನೇರವಾಗಿ ಎತ್ತಿ ತೋರುವ ಒಂದು ಗ್ರಂಥವನ್ನು ನಾನು ಕೊಟ್ಟಿಲ್ಲ. ಭಗವಂತನ ಮಹಾಮಹಿಮೆಯನ್ನು ಬಿತ್ತರಿಸುವ ಒಂದು ವಿಶಿಷ್ಠ ಗ್ರಂಥವನ್ನು ನಾನು ಜನರಿಗೆ ಕೊಡಬೇಕು. "ಸರ್ವಸ್ವವನ್ನೂ ತ್ಯಾಗಮಾಡಿದ ಪರಮಹಂಸರಿಗೂ ಪ್ರಿಯವಾಗುವ ಒಂದು ಗ್ರಂಥ ರಚನೆ ನನ್ನಿಂದಾಗಿಲ್ಲ" ಎನ್ನುವ ಅತೃಪ್ತಿಯನ್ನು ವ್ಯಾಸರು ವ್ಯಕ್ತಪಡಿಸಿದರು ಎನ್ನುತ್ತಾರೆ ಉಗ್ರಶ್ರವಸ್.

ತಸ್ಯೈವಂ ಖಿಲಮಾತ್ಮಾನಂ ಮನ್ಯಮಾನಸ್ಯ ಖಿದ್ಯತಃ ।
ಕೃಷ್ಣಸ್ಯ ನಾರದೋಽಭ್ಯಾಗಾದಾಶ್ರಮಂ ಪ್ರಾಗುದಾಹೃತಮ್ ॥೩೦॥

ತಮಭಿಜ್ಞಾಯ ಸಹಸಾ ಪ್ರತ್ಯುತ್ಥಾಯಾಗತಂ ಮುನಿಮ್ ।
ಪೂಜಯಾಮಾಸ ವಿಧಿವನ್ನಾರದಂ ಸುರಪೂಜಿತಮ್ ॥೩೧॥

ಈ ರೀತಿ ವ್ಯಾಸರು ಅತೃಪ್ತರಾಗಿ ಯೋಚಿಸುತ್ತಾ ಕುಳಿತಿರುವಂತೆ ತೋರಿಕೊಂಡಾಗ, ಅಲ್ಲಿಗೆ ಬ್ರಹ್ಮಪುತ್ರ ನಾರದರ ಆಗಮನವಾಗುತ್ತದೆ ಮತ್ತು ವ್ಯಾಸರು ನಾರದರನ್ನು ಸತ್ಕರಿಸುತ್ತಾರೆ ಎನ್ನುವಲ್ಲಿಗೆ ಈ ಅಧ್ಯಾಯ ಕೊನೆಗೊಳ್ಳುತ್ತದೆ.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಚತುರ್ಥೋಽಧ್ಯಾಯಃ ॥

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ನಾಲ್ಕನೇ ಅಧ್ಯಾಯ ಮುಗಿಯಿತು.

# ಪಂಚಮೋಽಧ್ಯಾಯಃ

## ಭಾಗವತ ರಚನೆಯ ಹಿನ್ನೆಲೆ-ದೇವರ್ಷಿ ನಾರದರ ಆಗಮನ

**ಸೂತ ಉವಾಚ-**

**ಅಥ ತಂ ಸುಖಮಾಸೀನ ಉಪಾಸೀನಂ ಬೃಹಚ್ಛ್ರವಾಃ ।**
**ದೇವರ್ಷಿಃ ಪ್ರಾಹ ವಿಪ್ರರ್ಷಿಂ ವೀಣಾಪಾಣಿಃ ಸ್ಮಯನ್ನಿವ ॥೧॥**

ಇಲ್ಲಿ ಸೂತರು ಶೌನಕಾದಿಗಳಿಗೆ ಭಾಗವತ ರಚನೆಯ ಹಿನ್ನೆಲೆಯನ್ನು ವಿವರವಾಗಿ ವಿವರಿಸುವುದನ್ನು ಕಾಣುತ್ತೇವೆ. ಹಿಂದೆ ಹೇಳಿದಂತೆ: ವ್ಯಾಸರು ಸರಸ್ವತೀ ನದಿ ತೀರದಲ್ಲಿ ಅತೃಪ್ತರಾದವರಂತೆ ಕುಳಿತಿರುವಾಗ, ಅಲ್ಲಿಗೆ ನಾರದರ ಆಗಮನವಾಗುತ್ತದೆ. ವ್ಯಾಸರು ದೇವರ್ಷಿ ನಾರದರನ್ನು ಆದರಪೂರ್ವಕವಾಗಿ ಆಸನದಲ್ಲಿ ಕುಳ್ಳಿರಿಸುತ್ತಾರೆ. ಉಭಯ ಕುಶಲೋಪರಿ ಸಂಭಾಷಣೆಯ ನಂತರ ನಾರದರು ವೇದವ್ಯಾಸರನ್ನು ಆತ್ಮೀಯವಾಗಿ ಪ್ರಶ್ನಿಸುತ್ತಾರೆ.

## ವ್ಯಾಸ-ನಾರದ ಸಂಭಾಷಣೆ

**ಶ್ರೀನಾರದ ಉವಾಚ-**

**ಪಾರಾಶರ್ಯ ಮಹಾಭಾಗ ಭವತಃ ಕಚ್ಚಿದಾತ್ಮನಾ ।**
**ಪರಿತುಷ್ಯತಿ ಶಾರೀರ ಆತ್ಮಾ ಮಾನಸ ಏವ ವಾ ॥೨॥**

ನಾರದರು ಕೇಳುತ್ತಾರೆ: "ನಿಮ್ಮ ಶರೀರರೂಪವಾದ ಆತ್ಮ ಮತ್ತು ಮಾನಸವಾದ ಆತ್ಮ ಸಂತೋಷವಾಗಿದೆಯೋ?" ಎಂದು. ಮೇಲ್ನೋಟಕ್ಕೆ ಈ ಪ್ರಶ್ನೆ ವಿಚಿತ್ರವಾಗಿದೆ. ಲೌಕಿಕವಾಗಿ ನೋಡಿದರೆ ಚೆನ್ನಾಗಿದ್ದೀರ? ಆರೋಗ್ಯವೇ? ಎಂದು ಕೇಳಿದ ಪ್ರಶ್ನೆ ಇದು. ಆದರೆ ಭಗವಂತನ ವಿಚಾರವಾಗಿ ನೋಡಿದಾಗ ಆತನ ಶರೀರ ಮನಸ್ಸುಗಳೆರಡೂ ಆತ್ಮರೂಪವೇ ಆಗಿರುವುದರಿಂದ ನಾರದರು ಈ ರೀತಿ ವಿಶೇಷವಾಗಿ ಪ್ರಶ್ನೆ ಮಾಡಿದ್ದಾರೆ.

**ಜಿಜ್ಞಾಸಿತಂ ಸುಸಂಪನ್ನಮಪಿ ತೇ ಮಹದದ್ಭುತಮ್ ।**
**ಕೃತವಾನ್ ಭಾರತಂ ಯಸ್ತ್ವಂ ಸರ್ವಾರ್ಥಪರಿಬೃಂಹಿತಮ್ ॥೩॥**

"ಜ್ಞಾನ ಶಿಖರವನ್ನು ಏರಿದ ನೀವು, ಸಮರ್ಥ ಅರ್ಥವನ್ನೊಳಗೊಂಡ ಮಹಾಭಾರತವನ್ನು ರಚಿಸಿದಿರಿ. ಅದು ಅತ್ಯದ್ಭುತವಾದ, ಮನುಷ್ಯನ ಪ್ರಜ್ಞೆಗೆ ಮೀರಿದ ಜ್ಞಾನಶಕ್ತಿ. ಅಂತಹ ಪ್ರಜ್ಞಾಶಕ್ತಿಯ ಶಿಖರವನ್ನೇರಿದ ತಮಗೇನು ಕೊರಗು?"

**ಜಿಜ್ಞಾಸಿತಮಧೀತಂ ಚ ಬ್ರಹ್ಮ ಯತ್ತತ್ ಸನಾತನಮ್ ।**
**ತಥಾಪಿ ಶೋಚಸ್ಯಾತ್ಮಾನಮಕೃತಾರ್ಥ ಇವ ಪ್ರಭೋ ॥೪॥**

"ನೀವು ಸನಾತನವಾದ ಬ್ರಹ್ಮತತ್ತ್ವ ಏನು ಎನ್ನುವುದನ್ನು ತಿಳಿದಿದ್ದೀರಿ. ಎಲ್ಲವನ್ನೂ ತಿಳಿದ ನಿಮ್ಮಲ್ಲಿ ತೃಪ್ತಿ ಕಾಣುತ್ತಿಲ್ಲ. ಯಾವುದೋ ಒಂದು ಮಾಡಬೇಕಾದ ಕೆಲಸವನ್ನು ಮಾಡದೇ ಅತೃಪ್ತರಾಗಿರುವಂತೆ ತೋರಿಸಿಕೊಳ್ಳುತ್ತಿದ್ದೀರಿ" ಎಂದು ನಾರದರು ವ್ಯಾಸರಲ್ಲಿ ಪ್ರಶ್ನಿಸುತ್ತಾರೆ. ಹಿಂದೆ ಹೇಳಿದಂತೆ ಈ ಸಂಭಾಷಣೆ ದೇವ-ದೇವತೆಯರ ಒಂದು ಲೀಲೆ.

ಶ್ರೀವ್ಯಾಸ ಉವಾಚ-

ಅಸ್ತ್ಯೇವ ಮೇ ಸರ್ವಮಿದಂ ತ್ವಯೋಕ್ತಂ ತಥಾಪಿ ನಾತ್ಮಾ ಪರಿತುಷ್ಯತೇ ಮೇ ।
ತನ್ಮೂಲಮವ್ಯಕ್ತಮಗಾಧಬೋಧಂ ಪೃಚ್ಛಾಮಹೇ ತ್ವಾऽऽತ್ಮಭವಾತ್ಮಭೂತಮ್ ॥೫॥

ವ್ಯಾಸರು ನಾರದರಲ್ಲಿ ಹೇಳುತ್ತಾರೆ: "ನೀವು ಹೇಳಿದಂತೆ ವೇದವಿಭಾಗ, ಮಹಾಭಾರತ ರಚನೆಯೊಂದಿಗೆ ಬ್ರಹ್ಮತತ್ತ್ವದ ಸಮಗ್ರ ಪರಿಜ್ಞಾನ ನನಗಿದೆ. ಆದರೂ ಕೂಡಾ ನನಗೆ ತೃಪ್ತಿ ಇಲ್ಲ. ಚತುರ್ಮುಖನ ಮಾನಸ ಪುತ್ರರಾದ ತಾವು ಬಹಳ ಬುದ್ಧಿವಂತರು. ನೀವೇ ನನ್ನ ಅತೃಪ್ತಿಗೆ ಕಾರಣವೇನೆಂದು ಹೇಳಿರಿ" ಎಂದು.
ಭಕ್ತವತ್ಸಲನಾದ ಭಗವಂತ ಯಾವಾಗಲೂ ತನ್ನ ಭಕ್ತರಿಂದ ಹೇಳಿಸಿಕೊಂಡು ಮಾಡಲು ಇಷ್ಟಪಡುತ್ತಾನೆ. ಅದಕ್ಕಾಗಿ ವ್ಯಾಸ ರೂಪದಲ್ಲಿ ಈ ಲೀಲೆ.

ಶ್ರೀನಾರದ ಉವಾಚ-

ಯಥಾ ಧರ್ಮಾದಯೋ ಹ್ಯರ್ಥಾ ಮುನಿವರ್ಯಾನುವರ್ಣಿತಾಃ ।
ನ ತಥಾ ವಾಸುದೇವಸ್ಯ ಮಹಿಮಾ ಹ್ಯನುವರ್ಣಿತಃ ॥೯॥

ಈ ಶ್ಲೋಕದಲ್ಲಿ ನಾರದರು ಕೊಡುವ ಉತ್ತರವನ್ನು ಮೇಲ್ನೋಟದ ಅರ್ಥದಲ್ಲಿ ನೋಡಿದರೆ ನಮಗೆ ಗೊಂದಲವಾಗುತ್ತದೆ. ಶ್ಲೋಕದ ಮೇಲ್ನೋಟದ ಅರ್ಥದಂತೆ ನಾರದರ ಮಾತು: "ಧರ್ಮಾರ್ಥ-ಕಾಮಗಳ ಕುರಿತು ಬೇಕಾದಷ್ಟನ್ನು ಬರೆದಿರಬಹುದು, ಆದರೆ ಆ ಐತಿಹಾಸಿಕ ಘಟನೆಗಳ ನಡುವೆ ವಾಸುದೇವನನ್ನು ವರ್ಣಿಸಿರುವುದು ಸಾಕಾಗಲಿಲ್ಲ" ಎಂದು ಹೇಳಿದಂತೆ ಕಾಣುತ್ತದೆ. ಆದರೆ ಈ ರೀತಿ ಈ ಶ್ಲೋಕವನ್ನು ಅರ್ಥ ಮಾಡಬಾರದು. ಏಕೆಂದರೆ ಹಾಗೆ ಅರ್ಥ ಮಾಡಿದರೆ ಮಹಾಭಾರತದಲ್ಲಿ ಭಗವಂತನ ಮಹಿಮೆ ಹೇಳಿಲ್ಲ ಎಂದಂತಾಗುತ್ತದೆ. ಆದರೆ ಅದು ಸರಿಯಲ್ಲ. ನಾರದರು ಇಲ್ಲಿ ಹೇಳಿರುವ ಮಾತೇ ಬೇರೆ. "ಮಹಾಭಾರತದಲ್ಲಿ ಧರ್ಮಾರ್ಥ-ಕಾಮಗಳ ಬಗ್ಗೆ ವಿವರವಾಗಿ ಹೇಳಲಾಗಿದೆ. ಆದರೆ ಧರ್ಮಾರ್ಥ-ಕಾಮಗಳನ್ನು ಹೇಳಿ ಮುಗಿಸಿದಂತೆ ಭಗವಂತನ ಮಹಿಮೆಯನ್ನು ಹೇಳಿ ಮುಗಿಸಲು ಸಾಧ್ಯವಿಲ್ಲ. ಭಗವಂತನ ಮಹಿಮೆ ಅನಂತವಾದುದರಿಂದ ಅದರ ಕುರಿತು ಇನ್ನೂ ಹೇಳಬೇಕು" ಎನ್ನುವುದು ನಾರದರ ಮಾತಿನ ತಾತ್ಪರ್ಯ.
ಮಹಾಭಾರತದಲ್ಲಿ ಭಗವಂತನ ವರ್ಣನೆ ಇದೆ. ಆದರೆ ಇನ್ನೂ ಒಂದು ಗ್ರಂಥದಲ್ಲಿ ಆತನ ಮಹಿಮೆಯನ್ನು ನೀವು ಹೇಳಬೇಕು ಎಂದು ನಾರದರು ವ್ಯಾಸರಿಗೆ ತಿಳಿಸುತ್ತಾರೆ.

ನ ತದ್ವಚಶ್ಚಿತ್ರಪದಂ ಹರೇರ್ಯಶೋ ಜಗತ್ಪವಿತ್ರಂ ನ ಗೃಣೀತ ಕರ್ಹಿಚಿತ್ ।
ತದ್ ವಾಯಸಂ ತೀರ್ಥಮುಶಂತಿ ಮಾನಸಾ ನ ಯತ್ರ ಹಂಸಾ ನ್ಯಪತನ್ ಮಿಮಂಕ್ಷಯಾ ॥೧೦॥

ಒಂದು ಸಾಹಿತ್ಯದಲ್ಲಿ ಭಗವಂತನ ಗುಣಗಾನದ ಮಹತ್ವ ಏನೆಂಬುದನ್ನು ನಾರದರು ಇಲ್ಲಿ ವಿವರಿಸಿದ್ದಾರೆ. ಭಗವಂತನ ಗುಣದ ಅನುಸಂಧಾನ ಇಲ್ಲದ, ಭಗವಂತನ ಅರಿವು ಇಲ್ಲದ ಸಾಹಿತ್ಯ ಒಂದು ಸಾಹಿತ್ಯ ಎನಿಸಲಾರದು. ಅಲ್ಲಿ ಎಷ್ಟೇ ಶಬ್ದ ಚಮತ್ಕಾರವಿರಲೀ, ಶೃಂಗಾರವಿರಲೀ; ಜಗತ್ತನ್ನು ಪಾವನಗೊಳಿಸುವ ಭಗವಂತನ ಸ್ಪರ್ಶವಿಲ್ಲದ ಸಾಹಿತ್ಯ- 'ವಾಙ್ಮಯ' ಎನಿಸಲಾರದು. ಈ ಪ್ರಪಂಚದಲ್ಲಿರುವ ಎಲ್ಲಾ ಶಬ್ದಗಳೂ ಭಗವಂತನನ್ನೇ ಹೇಳಿದರೂ ಕೂಡಾ, ನಮಗೆ ಅದು ಭಗವಂತನ ನಾಮ ಎನ್ನುವುದು ಹೊಳೆಯಬೇಕು ಮತ್ತು ಆ ಭಕ್ತಿ ಭಾವದಿಂದ ಸಾಹಿತ್ಯ ರಚನೆಯಾಗಬೇಕು. ಇದು ಅಧ್ಯಾತ್ಮ ಸಾಹಿತ್ಯ ರಚನೆಯಲ್ಲಿ ಅತ್ಯಂತ ಮುಖ್ಯವಾದ ಅಂಶ.

ಶೃಂಗಾರಮಯವಾದ ಅನೇಕ ಸಾಹಿತ್ಯಗಳಿವೆ. ಅವೆಲ್ಲವೂ ನಮ್ಮನ್ನು ವಯಸ್ಸಿಗೆ ತಕ್ಕಂತೆ ಮರಳು ಮಾಡುವ ಶಾಸ್ತ್ರಗಳೇ ಹೊರತು, ನಮ್ಮನ್ನು ಸತ್ಯದತ್ತ ಕೊಂಡೊಯ್ಯುವ ಕೃತಿಗಳಲ್ಲ. ಇಲ್ಲಿ ನಾರದರು ಭಗವಂತನ ಪ್ರಜ್ಞೆ ಇಲ್ಲದ ಕೃತಿಗಳನ್ನು ಕಾಗೆಗಳು ಮೀಯುವ ನೀರಿಗೆ ಹಾಗೂ ಭಗವದ್ ವಿಷಯಿಕವಾದ ಕೃತಿಯನ್ನು ಹಂಸಗಳು ಮೀಯುವ ಮಾನಸ ಸರೋವರಕ್ಕೆ ಹೋಲಿಸಿರುವುದನ್ನು ಕಾಣುತ್ತೇವೆ. ಕಾಗೆಗಳು ಕೊಳಚೆ ನೀರನ್ನು ಕಂಡು ಮೋಹಗೊಂಡು ಅದರಲ್ಲಿ ಸ್ನಾನಮಾಡುವಂತೆ, ಪ್ರಾಯದ ಅಮಲಿನಲ್ಲಿ ಜನ ಮೋಹಕ ಕಾವ್ಯವನ್ನು ಇಷ್ಟಪಡುತ್ತಾರೆ. ಆದರೆ ಜ್ಞಾನಿಗಳು ಮಾನಸತೀರ್ಥವನ್ನು ಅರಸಿ ಹೋಗುವ ಹಂಸಗಳಂತೆ ಕೇವಲ ಭಗವದ್ ಪರವಾದ ಗ್ರಂಥಗಳನ್ನು ಇಷ್ಟಪಡುತ್ತಾರೆ. ಹಾಗಾಗಿ ಸಮಾಜಕ್ಕೆ ಭಗವದ್ ಪರವಾಗಿ ರಚಿಸಿದ ಸಾಹಿತ್ಯವನ್ನು ಕೊಡಬೇಕು. ಇಷ್ಟೇ ಅಲ್ಲ, ನಾವು ಮಾತನಾಡುವಾಗಲೂ ಕೂಡಾ ಭಗವದ್ ಪರವಾಗಿ ಮಾತನಾಡುವುದನ್ನು ಕಲಿತುಕೊಳ್ಳಬೇಕು.

ಸ ವಾಗ್ವಿಸರ್ಗೋ ಜನತಾಘವಿಪ್ಲವೋ ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ ।
ನಾಮಾನ್ಯನಂತಸ್ಯ ಯಶೋಽಙ್ಕಿತಾನಿ ಯತ್ ಶೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥೧೧॥

ಅಲಂಕಾರ, ಛಂದಸ್ಸು, ವ್ಯಾಕರಣ ಸರಿ ಇಲ್ಲದೇ ಇರುವ ಕೃತಿ ಕೂಡಾ ಭಗವಂತನ ಎಚ್ಚರದಿಂದ ಭಕ್ತಿಪೂರ್ವಕವಾಗಿ ಬರೆದ ಕೃತಿಯಾಗಿದ್ದರೆ, ಅದು ಮಾನ್ಯತೆಯನ್ನು ಪಡೆಯುತ್ತದೆ. ಒಬ್ಬ ಭಗವಂತನ ಗುಣಗಾನ ಮಾಡುವಾಗ ವ್ಯಾಕರಣದಲ್ಲಿ ತಪ್ಪಿದರೂ ಕೂಡಾ, ಅದು ಆ ಗುಣಗಾನವನ್ನು ಕೇಳಿದವನ ಪಾಪವನ್ನು ಪರಿಹರಿಸಬಲ್ಲದು. ಶ್ಲೋಕ ತಪ್ಪಾಗಿದ್ದರೂ ಕೂಡಾ, ಅನಂತಶಕ್ತಿಯಾದ ಭಗವಂತನ ಯಶಸ್ಸನ್ನು ಆ ಶ್ಲೋಕ ಹೇಳಿದರೆ, ಅದು ಗ್ರಾಹ್ಯ ಮತ್ತು ಜ್ಞಾನಿಗಳ ಮೆಚ್ಚುಗೆ ಪಡೆಯಬಲ್ಲದು. ಜ್ಞಾನಿಗಳು ಅಂತಹ ಶ್ಲೋಕದಲ್ಲಿರುವ ಅಲಂಕಾರದೋಷ, ವ್ಯಾಕರಣದೋಷ, ಸಾಹಿತ್ಯದೋಷವನ್ನು ನಿರ್ಲಕ್ಷಿಸಿ, ಅಲ್ಲಿರುವ ಭಗವಂತನ ಗುಣಗಾನವನ್ನು ಸ್ವೀಕರಿಸುತ್ತಾರೆ. ಅಪೂರ್ವವಾದ ಭಗವಂತನ ಗುಣಗಾನದ ನಡುವೆ ಬೇರೆ ಯಾವ ಕಾಳಜಿಯೂ ಜ್ಞಾನಿಗಳಿಗಿರುವುದಿಲ್ಲ.

ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ ನ ಶೋಭತೇ ಜ್ಞಾನಮಲಂ ನಿರಂಜನಮ್ ।
ಕುತಃ ಪುನಃ ಶಶ್ವದಭದ್ರಮೀಶ್ವರೇ ನ ಚಾರ್ಪಿತಂ ಕರ್ಮ ಯದಪ್ಯಕಾರಣಮ್ ॥೧೨॥

ಭಗವಂತನ ಗುಣದ ಅರಿವು ಇಲ್ಲದಾಗ ನಮ್ಮ ಸಾಧನೆ ಹೇಗೆ ವ್ಯರ್ಥ ಎನ್ನುವುದನ್ನು ನಾರದರು ಇಲ್ಲಿ ಬಹಳ ಸುಂದರವಾಗಿ ವರ್ಣಿಸಿದ್ದಾರೆ. ಭಗವಂತನ ಭಕ್ತಿ ಇಲ್ಲದ ಕಾವ್ಯ-ಕಾವ್ಯವಲ್ಲ, ಭಗವಂತನ ಭಕ್ತಿ ಇಲ್ಲದ ಸಂನ್ಯಾಸ-

ಸಂನ್ಯಾಸವಲ್ಲ, ಭಗವಂತನ ಜ್ಞಾನವಿಲ್ಲದ ಜ್ಞಾನ-ಜ್ಞಾನವಲ್ಲ, ಭಗವಂತನ ಭಕ್ತಿ ಇಲ್ಲದ ನಿತ್ಯ ಕರ್ಮಾನುಷ್ಠಾನ ಕರ್ಮವೇ ಅಲ್ಲ ಎನ್ನುತ್ತಾರೆ ನಾರದರು!

ಸರ್ವಸ್ವವನ್ನೂ ತ್ಯಾಗಮಾಡಿ ಭಗವಂತನಿಗೋಸ್ಕರ ಬದುಕುವ ಆಶ್ರಮ-ಸಂನ್ಯಾಸಾಶ್ರಮ. ಇತರ ಆಶ್ರಮದಲ್ಲಿ ಸಾಮಾಜಿಕ ಹೊಣೆಗಾರಿಕೆ ಇದ್ದರೆ, ಸಂನ್ಯಾಸಾಶ್ರಮದಲ್ಲಿ ಅಂತಹ ಹೊಣೆಗಾರಿಕೆ ಇಲ್ಲ. ಸಂನ್ಯಾಸದಲ್ಲಿ ಕೇವಲ ಭಗವಂತನ ಚಿಂತನೆ, ಧ್ಯಾನ ಮತ್ತು ಭಗವಂತನನ್ನು ಬಯಸುವವರಿಗೆ ಭಗವಂತನ ಅರಿವಿನ ದಾನವೇ ಮೂಲಕರ್ತವ್ಯ. ಇಲ್ಲಿ ನಾರದರು ಹೇಳುತ್ತಾರೆ: "ಇಂತಹ ನೈಷ್ಕರ್ಮ್ಯಮತಿಗಳಿಗೆ 'ಅಚ್ಯುತನಲ್ಲಿ' ಭಕ್ತಿ ಇಲ್ಲದಿದ್ದರೆ ಅವರ ಸಂನ್ಯಾಸ ವ್ಯರ್ಥ" ಎಂದು. ಯಾವ ವಿರಕ್ತಿ ನಮ್ಮನ್ನು ಭಗವಂತನತ್ತ ಒಯ್ಯುವುದಿಲ್ಲವೋ ಆ ವಿರಕ್ತಿ ಅರ್ಥಶೂನ್ಯವಾಗುತ್ತದೆ. ನಾವು ಭಕ್ತಿ ಮಾಡಬೇಕಾಗಿರುವುದು ಯಾವುದೋ ದೆವ್ವ-ಪಿಶಾಚಿಯನ್ನಲ್ಲ, ಬದಲಿಗೆ ಯಾವುದೇ ಚ್ಯುತಿ ಇಲ್ಲದ ಭಗವದ್ ತತ್ತ್ವ ಅಚ್ಯುತನನ್ನು.

ನೈಷ್ಕರ್ಮ್ಯಜ್ಞಾನ ಎಂದರೆ ಕರ್ಮದ ಬಂಧನವನ್ನು ಕಳಚಲು ಸಾಧನವಾದ ಜ್ಞಾನ. ಶಾಸ್ತ್ರದ ಯಥಾರ್ಥ ಜ್ಞಾನ ಇದ್ದೂ ಕೂಡಾ, ಭಕ್ತಿ ಇಲ್ಲದಿದ್ದರೆ ಆ ಜ್ಞಾನ ವ್ಯರ್ಥ. ಅದೇ ರೀತಿ-ಕರ್ಮ. ಸಾಮಾನ್ಯವಾಗಿ ಕರ್ಮ ನಮ್ಮನ್ನು ಸೆಳೆಯುವುದು ಪ್ರಾಪಂಚಿಕ ವಿಷಯದತ್ತ. ಹಾಗಾಗಿ ಅಲ್ಲಿ ಭಗವದ್ ಭಕ್ತಿ ಬಹಳ ಮುಖ್ಯ. ಫಲಾಪೇಕ್ಷೆ ಇಲ್ಲದೆ, ಭಗವಂತನ ಸೇವೆ ಎಂದು ಕರ್ಮ ಮಾಡಿದಾಗ ಮಾತ್ರ ಆ ಕರ್ಮ ಸಾರ್ಥಕವಾಗುತ್ತದೆ. ಹೀಗೆ ಭಗವಂತನ ಭಕ್ತಿ ಇಲ್ಲದ ಜ್ಞಾನ-ವೈರಾಗ್ಯ-ಕರ್ಮ ಎಲ್ಲವೂ ವ್ಯರ್ಥ ಎನ್ನುವುದನ್ನು ನಾರದರು ಇಲ್ಲಿ ಬಹಳ ಸುಂದರವಾಗಿ ವರ್ಣಿಸಿದ್ದಾರೆ. ಇಷ್ಟು ಹೇಳಿ ನಾರದರು ವೇದವ್ಯಾಸರಲ್ಲಿ ಭಾಗವತ ಗ್ರಂಥ ರಚನೆ ಮಾಡುವಂತೆ ಪ್ರಾರ್ಥಿಸಿಕೊಳ್ಳುವುದನ್ನು ಮುಂದಿನ ಶ್ಲೋಕದಲ್ಲಿ ನೋಡೋಣ.

ಅತೋ ಮಹಾಭಾಗ ಭವಾನಮೋಘದೃಕ್ ಶುಚಿಶ್ರವಾಃ ಸತ್ಯರತೋ ಧೃತವ್ರತಃ ।
ಉರುಕ್ರಮಸ್ಯಾಖಿಲಬಂಧಮುಕ್ತಯೇ ಸಮಾಧಿನಾಽನುಸ್ಮರ ಯದ್ ವಿಚೇಷ್ಟಿತಮ್ ॥೧೩॥

ನಾರದರು ಹೇಳುತ್ತಾರೆ: "ನೀವು ಮಹಾಭಾಗರು; ನಿಮ್ಮ ಜ್ಞಾನದೃಷ್ಟಿ ಅಮೋಘವಾದುದು. ಅದೆಂದೂ ಹುಸಿಯಾಗದು" ಎಂದು. ಇಲ್ಲಿ 'ಮಹಾಭಾಗ' ಎನ್ನುವಲ್ಲಿ 'ಭಾಗ' ಎಂದರೆ ಸಮುದಾಯ ಎಂದರ್ಥ. ಆದ್ದರಿಂದ ಮಹಾಭಾಗ ಎಂದರೆ 'ಷಡ್ಗುಣಸಂಪನ್ನ'. ಈ ಶ್ಲೋಕದಲ್ಲಿ ನಾರದರು ವೇದವ್ಯಾಸರನ್ನು 'ಶುಚಿಶ್ರವಾಃ, ಸತ್ಯರತಃ, ಧೃತವ್ರತಃ, ಇತ್ಯಾದಿಯಾಗಿ ಸಂಬೋಧಿಸುವುದನ್ನು ಕಾಣುತ್ತೇವೆ. ಇವು ಭಗವಂತನ ಗುಣವಾಚಕ ನಾಮಗಳು.

(೧) ಶುಚಿಶ್ರವಾಃ : ಯಾರ ಗುಣಗಳ ಶ್ರವಣ ನಮ್ಮನ್ನು ಪವಿತ್ರಗೊಳಿಸುತ್ತದೋ ಅವನು 'ಶುಚಿಶ್ರವಾಃ'.

(೨) ಸತ್ಯರತಃ: ಸತ್ಯರತಃ ಎಂದರೆ ಜ್ಞಾನಪೂರ್ವಕ ಕೃತಿ. ಯಥಾವತ್ತಾಗಿ ಎಲ್ಲವನ್ನೂ ತಿಳಿದು ಮಾಡುವವ ಸತ್ಯರತಃ. ಇದು ಸಾಧ್ಯವಾಗುವುದು ಕೇವಲ ಭಗವಂತನಿಗೆ ಮಾತ್ರ. ನಮಗೆ ನಾವು ಮಾಡುವ ಯಾವುದೇ ಕೆಲಸದಲ್ಲಿ ಪೂರ್ಣ ಅರಿವು ಇರುವುದಿಲ್ಲ. ಪ್ರತಿಯೊಂದು ಕರ್ಮದ ಸಮಗ್ರ ಪೂರ್ವೋತ್ತರ ತಿಳಿದು, ಜ್ಞಾನಪೂರ್ವಕವಾಗಿ ಕರ್ಮವನ್ನು ಮಾಡಬಲ್ಲ ಭಗವಂತ ಸತ್ಯರತಃ.

(೩) ಧೃತವ್ರತಃ : ಧೃತವ್ರತಃ ಎಂದರೆ ವ್ರತವನ್ನು ತೊಟ್ಟವ ಎಂದರ್ಥ. ತನ್ನಲ್ಲಿ ಶರಣಾದ ಭಕ್ತರನ್ನು ರಕ್ಷಿಸುವುದೇ ಭಗವಂತನ ವ್ರತ. ಗೀತೆಯಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ಹೇಳಲಾಗಿದೆ. ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥೯-೨೨॥ "ನನ್ನನ್ನೇ

ನೆನೆಯುತ್ತಾ, ಪರಿಪರಿಯಿಂದ ಪೂಜಿಸುವ ಜನರು ಎಲ್ಲೆಲ್ಲೂ ನನ್ನ ಸೇವೆಗೆ ಮುಡಿಪಾದವರು. ಅವರ ಯೋಗ-ಕ್ಷೇಮದ ಹೊಣೆ ನನ್ನದು" ಎಂದಿದ್ದಾನೆ ಕೃಷ್ಣ. ರಾಮಾಯಣದಲ್ಲಿ ಕೂಡಾ ಈ ಮಾತು ಬರುತ್ತದೆ. **"ಅಭಯಂ ಸರ್ವ ಭೂತೇಭ್ಯೋ ದದಾಮಿ ಏತದ್ ವ್ರತಂ ಮಮ"**: "ನಾನು ನಿನ್ನವ, ನನ್ನನ್ನು ರಕ್ಷಿಸು ಎಂದು ಯಾರು ಶರಣಾಗುತ್ತಾರೋ, ಅವರನ್ನು ರಕ್ಷಿಸುವುದು ನನ್ನ ವ್ರತ" ಎಂದಿದ್ದಾನೆ ಶ್ರೀರಾಮ. ಇಂತಹ ವಿಶಿಷ್ಠ ವ್ರತವುಳ್ಳ 'ಶರಣಾಗತವತ್ಸಲ' ಭಗವಂತ ಧೃತವ್ರತಃ.

ಮುಂದುವರಿದು ನಾರದರು ಹೇಳುತ್ತಾರೆ: "ಯಾರು ಮೂರು ಹೆಜ್ಜೆಯಿಂದ ಮೂರು ಲೋಕವನ್ನು ವ್ಯಾಪಿಸಿದನೋ, ಯಾರ ನಿಯಮ(ಕ್ರಮ)ದಂತೆ ಇಡೀ ಪ್ರಪಂಚ ನಡೆಯುತ್ತಿದೆಯೋ, ಅಂತಹ ಉರುಕ್ರಮ ನಾರಾಯಣನ ಅನೇಕ ಅವತಾರಗಳನ್ನು ನೀವು 'ಅನುಸ್ಮರ' ಮಾಡಬೇಕು" ಎಂದು. ಇಲ್ಲಿ ಅನುಸ್ಮರ ಎಂದರೆ ಮಾನಸಿಕ ಗ್ರಂಥ ರಚನೆ. ಹಿಂದಿನಕಾಲದಲ್ಲಿ ಬರೆದಿಟ್ಟುಕೊಳ್ಳುವ ಪದ್ಧತಿ ಇರಲಿಲ್ಲ. ಎಲ್ಲಾ ರಚನೆ ಮಾನಸಿಕವಾಗಿದ್ದು, ಅದು ಅನುಗಾಲವೂ ಅವರಿಗೆ ಸ್ಮರಣೆಯಲ್ಲಿರುತ್ತಿತ್ತು. "ಭಗವಂತನನ್ನು ತಿಳಿದು, ಸಾಧನೆಯ ಪೂರ್ಣತೆಯನ್ನು ಪಡೆಯುವ ಯೋಗ್ಯತೆಯುಳ್ಳವರಿಗಾಗಿ(ಅ-ಖಿಲ), ಸಮಾಧಿಭಾಷೆಯಲ್ಲಿ ನೀವು ಒಂದು ಗ್ರಂಥ ರಚನೆ ಮಾಡಬೇಕು" ಎಂದು ನಾರದರು ವ್ಯಾಸರಲ್ಲಿ ಪ್ರಾರ್ಥಿಸುತ್ತಾರೆ.

ಈ ಹಿಂದೆ ನಾವು ಸಮಾಧಿ, ಗುಹ್ಯ ಮತ್ತು ದರ್ಶನ ಭಾಷೆಗಳ ಬಗ್ಗೆ ಚರ್ಚಿಸಿದ್ದೇವೆ. ಇಲ್ಲಿ ನಾರದರು ವಿಶೇಷವಾಗಿ ಸಮಾಧಿ ಭಾಷೆಯಲ್ಲಿ ಭಾಗವತ ನಿರ್ಮಾಣ ಮಾಡಬೇಕು ಎಂದು ವ್ಯಾಸರಲ್ಲಿ ಪ್ರಾರ್ಥಿಸಿದ್ದಾರೆ. ಸಮಾಧಿ ಭಾಷೆ ಎಂದರೆ ಇದ್ದದ್ದನ್ನು ಇದ್ದಂತೆ ಹೇಳುವುದು. ಈ ಮಾತನ್ನು ಕೇಳಿದಾಗ ನಮಗೆ ಒಂದು ಸಂಶಯ ಬರುತ್ತದೆ. ಭಾಗವತ ಸಮಾಧಿ ಭಾಷೆಯಲ್ಲಿದ್ದರೆ ಅದಕ್ಕೆ ಏತಕ್ಕೆ ಭಾಷ್ಯ ಎಂದು. ನಿಜ, ಸಮಾಧಿ ಭಾಷೆ ಎಂದರೆ ನೇರ ಭಾಷೆ. ಆದರೆ ಅದರಲ್ಲಿ ಮೂರು ವಿಧ. ಅವುಗಳೆಂದರೆ: ಸಮಾಧಿ-ದರ್ಶನ ಭಾಷೆ, ಸಮಾಧಿ-ಗುಹ್ಯ ಭಾಷೆ ಮತ್ತು ಸಮಾಧಿ-ಸಮಾಧಿ ಭಾಷೆ.

ಸಂಸಾರ ಬಂಧದಲ್ಲಿ ತೊಳಲಾಡುತ್ತಿರುವ ಜನರ ಬವಬಂಧನದ ಬಿಡುಗಡೆಗಾಗಿ, ಜನರಿಗೆ ಅರ್ಥವಾಗುವಂತಹ ಸಮಾಧಿ ಭಾಷೆಯಲ್ಲಿ, ಭಗವಂತನ ಮಹಿಮೆಯನ್ನು ಹೇಳತಕ್ಕಂತಹ ಒಂದು ಅಪೂರ್ವ ಗ್ರಂಥ ರಚನೆ ನಿಮ್ಮಿಂದಾಗಬೇಕು ಎಂದು ನಾರದರು ವ್ಯಾಸರಲ್ಲಿ ಪ್ರಾರ್ಥಿಸುತ್ತಾರೆ.

ಜುಗುಪ್ಸಿತಂ ಧರ್ಮಕೃತೇಽನುಶಾಸನಂ ಸ್ವಭಾವರಕ್ತಸ್ಯ ಮಹಾನ್ ವ್ಯತಿಕ್ರಮಃ ।
ಯದ್ವಾಕ್ಯತೋ ಧರ್ಮ ಇತೀತರಃ ಸ್ಥಿತೋ ನ ಮನ್ಯತೇ ತಸ್ಯ ನಿವಾರಣಂ ಜನಃ ॥೧೫॥

ಈ ಹಿಂದೆ ಹೇಳಿದಂತೆ: ಪುರಾಣಗಳೆಲ್ಲವೂ ಶ್ರೇಷ್ಠ. ಅದರಲ್ಲಿ ಮೇಲು-ಕೀಳು ಎಂಬುದಿಲ್ಲ. ಆದರೆ ಅದನ್ನು ಸ್ವೀಕರಿಸುವ ನಮ್ಮ ಗ್ರಹಣ ಪಾತ್ರೆಯಲ್ಲಿ ವ್ಯತ್ಯಾಸವಿದೆ! ಅನೇಕ ಪುರಾಣಗಳು ನಾವು ಸಾತ್ವಿಕರಲ್ಲದಿದ್ದರೆ ನಮ್ಮನ್ನು ರಾಜಸದತ್ತ ಅಥವಾ ತಾಮಸದತ್ತ ಒಯ್ಯಬಲ್ಲವು! ಅಲ್ಲಿ ಪುರಾಣ ರಾಜಸ ಅಥವಾ ತಾಮಸ ಅಲ್ಲ. ನಾವು ತಾಮಸರಾಗಿ ಅಥವಾ ರಾಜಸರಾಗಿ ಆ ಪುರಾಣ ಓದಿದರೆ, ಅಲ್ಲಿ ನಮಗೆ ತಾಮಸ ಅಥವಾ ರಾಜಸದ ಒತ್ತು ಕಾಣುವ ಅಪಾಯವಿದೆ ಅಷ್ಟೇ. ವೇದವ್ಯಾಸರು ರಚಿಸಿರುವ ಹದಿನೇಳು ಪುರಾಣಗಳನ್ನು ಮೇಲ್ನೋಟದಲ್ಲಿ ನೋಡಿದಾಗ ಅಲ್ಲಿ ಅನೇಕ ಕಾಮ್ಯಕರ್ಮ-ವ್ರತ-ನಿಯಮಗಳನ್ನು ಕಾಣಬಹುದು. ಇವು ಸಾತ್ವಿಕರಲ್ಲದವರನ್ನು ದಾರಿ ತಪ್ಪಿಸಲು ಹೇಳಿರುವ ವ್ರತಗಳು! ಇವು ಕೇವಲ ಪ್ರವೃತ್ತಿಧರ್ಮವನ್ನು ಹೇಳುವ ವ್ರತಗಳು.

ಸಾತ್ವಿಕರಿಗೆ ಭಗವಂತ ಜ್ಞಾನಪ್ರದನಾದರೆ, ಅಯೋಗ್ಯರಿಗೆ ಆತನೇ ಅಜ್ಞಾನಪ್ರದ! ಆದ್ದರಿಂದ ವ್ಯಾಸ ರೂಪದಲ್ಲಿ ಭಗವಂತನೇ ರಚಿಸಿರುವ ಪುರಾಣಗಳು ಸಾತ್ವಿಕರಿಗೆ ಒಂದು ರೀತಿ ತೆರೆದುಕೊಂಡರೆ, ತಾಮಸಿಗಳಿಗೆ ಇನ್ನೊಂದು ಮುಖದಲ್ಲಿ ಕಾಣಿಸಿಕೊಳ್ಳುತ್ತವೆ. ಹೀಗಾಗಿ ಪುರಾಣಗಳನ್ನು ಎಚ್ಚರದಿಂದ ಯೋಗ್ಯ ಗುರುವಿನ ಸಮ್ಮುಖದಲ್ಲಿ ಅಧ್ಯಯನ ಮಾಡಬೇಕು. 'ಪುರಾಣದಲ್ಲಿ ಹೇಳಲಾಗಿದೆ' ಎಂದು ನಾವು ನಮ್ಮ ಜೀವಮಾನವೆಲ್ಲಾ ಕೇವಲ ಕಾಮ್ಯಕರ್ಮವನ್ನು ಹೇಳುವ ವ್ರತದಲ್ಲಿ ಬಿದ್ದಿದ್ದರೆ ಅಧೋಗತಿಯನ್ನು ಹೊಂದುತ್ತೇವೆ. ಅದಕ್ಕಾಗಿ ಅಂತಹ ಕಾಮ್ಯವ್ರತಗಳ ಬೆನ್ನುಹತ್ತದೇ, ಧೃತವ್ರತಃನಾದ ಭಗವಂತನ ಭಕ್ತಿ ಮಾಡಬೇಕು.

ಸಾಮಾನ್ಯವಾಗಿ ಮನುಷ್ಯಸ್ವಭಾವದ ಆಸಕ್ತಿ 'ಪ್ರವೃತ್ತಿಮಾರ್ಗ'. ಆದರೆ ಭಗವಂತನನ್ನು ಸೇರಲು ನಾವು ಪ್ರವೃತ್ತಿಮಾರ್ಗ ಬಿಟ್ಟು ನಿವೃತ್ತಿಮಾರ್ಗ ಹಿಡಿಯಬೇಕು. ಇಲ್ಲಿ ನಾರದರು ಹೇಳುತ್ತಾರೆ: "ಅಯೋಗ್ಯರನ್ನು ಮೋಹಗೊಳಿಸುವ ಅನೇಕ ಕಾಮ್ಯವ್ರತವನ್ನು ನೀವು ಹದಿನೇಳು ಪುರಾಣಗಳಲ್ಲಿ ಹೇಳಿದಿರಿ. ಜನರು ಈ ವ್ರತಗಳ ಬೆನ್ನುಹತ್ತಿ ಭಗವಂತನನ್ನೇ ಮರೆಯುತ್ತಿದ್ದಾರೆ. ಅದಕ್ಕಾಗಿ ಸಾತ್ವಿಕರಿಗೆ ಇಂತಹ ಕಾಮ್ಯವ್ರತಗಳ ಮೇಲೆ ಜಿಗುಪ್ಸೆ ಹುಟ್ಟುವ, ಭಗವಂತನನ್ನು ನೇರವಾಗಿ ಹೇಳುವ ಒಂದು ಗ್ರಂಥವನ್ನು ನೀವು ಪ್ರಪಂಚಕ್ಕೆ ಕೊಡಬೇಕು" ಎಂದು.

ಇಂದು ನಾವು ಪ್ರಪಂಚದಲ್ಲಿ ಕಾಮ್ಯವ್ರತದ ಬೆನ್ನು ಹತ್ತಿದ ಜನಸಮುದಾಯವನ್ನು ನೋಡುತ್ತೇವೆ. ಅವರು ಅಲ್ಲಿ ಭಗವಂತನ ನೆನಪೊಂದನ್ನು ಬಿಟ್ಟು, ಉಳಿದಿದ್ದೆಲ್ಲವನ್ನೂ ಮಾಡುವುದನ್ನು ಕಾಣುತ್ತೇವೆ. ಪುರಾಣದಲ್ಲಿ ಹೇಳಿದ ವ್ರತನಿಯಮಗಳ ನಿಜಕಾರಣ ಗೊತ್ತಿಲ್ಲದೇ, "ಈ ರೀತಿ ಪುರಾಣದಲ್ಲಿ ಹೇಳಿದ್ದಾರೆ" ಎಂದು ವ್ರತ ಮಾಡುವವರಿದ್ದಾರೆ. ಇದು ಪುರಾಣದ ತಿರುಳು ಅರ್ಥವಾಗದೇ ಇರುವುದರಿಂದ ಆಗುವ ದುರಂತ. ಅದಕ್ಕಾಗಿ ಇಲ್ಲಿ ನಾರದರು: "ಎಲ್ಲಾ ವ್ರತಾನುಷ್ಠಾನಗಳಿಗೆ ಮೀರಿದ, ಕೇವಲ ಭಗವದ್ ವ್ರತವನ್ನು ಹೇಳುವ ಒಂದು ಗ್ರಂಥವನ್ನು ನೀವು ಕೊಡಬೇಕು" ಎಂದು ವ್ಯಾಸರಲ್ಲಿ ಪ್ರಾರ್ಥಿಸುತ್ತಾರೆ.

ನಾರದರು ಹೇಳುತ್ತಾರೆ: "**ವಾಕ್ಯತಃ ಧರ್ಮ ಇತಿ ಇತರಃ ಸ್ಥಿತಃ**" ಎಂದು. ಅಂದರೆ: "ಸಾಮಾನ್ಯರು ಪುರಾಣದಲ್ಲಿ ಹೇಳಿದ 'ಕಾಮ್ಯವ್ರತ'ವೇ ತಾವು ಜೀವಮಾನವಿಡೀ ಮಾಡಬೇಕಾದ ಧರ್ಮ ಎಂದು ತಿಳಿದರು. ಆದರೆ ಭಗವಂತನ ಉಪಾಸನೆಯ ಮುಂದೆ ಈ ಫಲಾಪೇಕ್ಷೆಯಿಂದ ಮಾಡುವ ಕ್ಷುದ್ರ ವ್ರತಾನುಷ್ಠಾನ ಧರ್ಮವಲ್ಲ ಎನ್ನುವ ವಿಚಾರ ಅವರಿಗೆ ತಿಳಿಯಲಿಲ್ಲ".

ನಾರದರ ಈ ಮಾತನ್ನು ಇನ್ನೊಂದು ರೀತಿಯಲ್ಲಿ ಪದಛೇದ ಮಾಡಿದರೆ: "**ವಾಕ್ಯತಃ ಅಧರ್ಮಃ ಇತಿ ಇತರಸ್ಥಿತಃ**" ಎಂದಾಗುತ್ತದೆ. ಅಂದರೆ: "ಜನರು ಆಚರಿಸುವ ಇಂತಹ ಕಾಮ್ಯವ್ರತ ಜ್ಞಾನಿಗೆ ಅಸಹ್ಯವಾಗಿ ಕಾಣುತ್ತದೆ. ಭಗವಂತನ ಭಕ್ತಿಯನ್ನು ಪ್ರಚೋದನೆ ಮಾಡುವ ಸತ್ಕರ್ಮವೇ ಧರ್ಮ ಹೊರತು, ಇತರ ಕಾಮ್ಯವ್ರತವಲ್ಲ ಎನ್ನುವುದನ್ನು ಜ್ಞಾನಿ ತಿಳಿದಿರುತ್ತಾನೆ".

ಜನರು ಅಧರ್ಮವನ್ನೇ ಧರ್ಮವೆಂದುಕೊಂಡು ಕ್ಷುದ್ರ ವ್ರತೋಪಾಸನೆಯಲ್ಲಿ ತೊಡಗಿದ್ದಾರೆ ಮತ್ತು ಅದನ್ನೇ ಮಹಾ ಪುರುಷಾರ್ಥ ಎಂದು ತಿಳಿದಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ತಿಳಿದವರು ಸಮಾಜವನ್ನು ತಿದ್ದದಿದ್ದರೆ ಅನ್ಯಾಯವಾಗುತ್ತದೆ. ಧರ್ಮವು ಭಗವದ್ ಭಕ್ತಿಯ ಪೋಷಣೆಗೆ ಸಹಾಯವಾಗಿರದಿದ್ದರೆ ಆ ಧರ್ಮಕ್ಕೆ ಯಾವ ಅರ್ಥವೂ ಇರುವುದಿಲ್ಲ. ಆದ್ದರಿಂದ ತಾವು ಭಗವದ್ ಭಕ್ತಿರೂಪವಾದ ಧರ್ಮವನ್ನು ಜನರಿಗೆ ತಿಳಿಯಪಡಿಸುವ ಗ್ರಂಥ ರಚನೆ ಮಾಡಬೇಕೆಂದು ನಾರದರು ವೇದವ್ಯಾಸರಲ್ಲಿ ಪ್ರಾರ್ಥಿಸುತ್ತಾರೆ.

ವಿಚಕ್ಷಣೋಽಸ್ಯಾರ್ಹತಿ ವೇದಿತುಂ ವಿಭೋರನಂತಪಾರಸ್ಯ ನಿವೃತ್ತಿತಃ ಸುಖಮ್ ।
ಪ್ರವರ್ತಮಾನಸ್ಯ ಗುಣೈರನಾತ್ಮನಸ್ತತೋ ಭವಾನ್ ದರ್ಶಯ ಚೇಷ್ಟಿತಂ ವಿಭೋಃ ॥೧೬॥

"ನಿವೃತ್ತಿಮಾರ್ಗದ ವಾಸ್ತವಿಕತೆಯನ್ನು ಅರಿಯದ ಜನ ಕೇವಲ ಪ್ರವೃತ್ತಿಮಾರ್ಗದ ಬೆನ್ನುಹತ್ತಿ ಅದರಲ್ಲೇ ಮುಳುಗಿಹೋಗುತ್ತಿದ್ದಾರೆ. ನೀವು ಬಲ್ಲವರು; ಪ್ರವೃತ್ತಿಮಾರ್ಗದಲ್ಲಿ ಸುಖವಿಲ್ಲ, ನಿಜವಾದ ಸುಖ ನಿವೃತ್ತಿಮಾರ್ಗ ಎನ್ನುವ ಸತ್ಯ ನಿಮಗೆ ತಿಳಿದಿದೆ. ಆ ಸತ್ಯವನ್ನು ಸಮಾಜಕ್ಕೆ ನೀಡಬೇಕು" ಎಂದು ನಾರದರು ವ್ಯಾಸರಲ್ಲಿ ಕೇಳಿಕೊಳ್ಳುತ್ತಾರೆ. ಭಗವಂತನ ಅನುಗ್ರಹದಿಂದ ಪಡೆಯುವ ಸುಖ ಅನಂತಪಾರವಾದದ್ದು. ಅದನ್ನು ಜನಕ್ಕೆ ತಿಳಿಯಪಡಿಸಬೇಕು. ಇಲ್ಲದಿದ್ದರೆ ಎಲ್ಲರೂ ಕ್ಷುದ್ರ ವ್ರತದ ಹಿಂದೆ ಬಿದ್ದು ಹಾಳಾಗುತ್ತಾರೆ ಎನ್ನುವುದು ನಾರದರ ಕಳಕಳಿ. "ತ್ರಿಗುಣದ ಪ್ರಭಾವಕ್ಕೊಳಗಾಗಿ ದಾರಿತಪ್ಪುವ ಜೀವನಿಗೆ, ಪ್ರಕೃತಿಯ ತ್ರಿಗುಣಗಳಿಂದಲೇ ಸೃಷ್ಟಿ-ಸ್ಥಿತಿ-ಸಂಹಾರ ಮಾಡುವ, ತ್ರೈಗುಣ್ಯವರ್ಜಿತ ಭಗವಂತನ ಮಹಿಮೆಯನ್ನು ತಿಳಿಹೇಳಬೇಕು" ಎಂದು ನಾರದರು ಕೇಳಿಕೊಳ್ಳುತ್ತಾರೆ.

ಈ ಶ್ಲೋಕದಲ್ಲಿ "ಭವಾನ್ ದರ್ಶಯ" ಎಂದಿದ್ದಾರೆ. ಈಗ ಬಳಕೆಯಲ್ಲಿರುವ ಸಂಸ್ಕೃತ ಭಾಷಾ ನಿಯಮದಂತೆ ಇದು ಸರಿ ಹೊಂದುವ ಶಬ್ದ ಬಳಕೆ ಅಲ್ಲ. ಏಕೆಂದರೆ: ಭವಾನ್ ಎಂದರೆ 'ತಾವು' ಎಂದರ್ಥ. ಇದು ಗುಣವಾಚಕ. ದರ್ಶಯ ಎಂದರೆ 'ತೋರಿಸು' ಎಂದರ್ಥ. ಇದು ಸ್ನೇಹವಾಚಕ. ಆದ್ದರಿಂದ "ತಾವು ತೋರಿಸು" ಎನ್ನುವುದು ವ್ಯಾಕರಣದ ಪ್ರಕಾರ ಸರಿಹೊಂದುವುದಿಲ್ಲ. ಆದರೆ ಇಲ್ಲಿ ವ್ಯಾಕರಣ ಮುರಿದು ಪ್ರಯೋಗ ಮಾಡಿರುವುದರಿಂದಲೇ ಒಂದು ವಿಶಿಷ್ಟಾರ್ಥ ಸೃಷ್ಟಿಯಾಗಿದೆ. ಉದಾಹರಣೆಗೆ ನಾವು "ದೇವನು ದೊಡ್ಡವನು" ಎಂದು ಹೇಳದೇ, "ದೇವರು ದೊಡ್ಡವನು" ಎನ್ನುತ್ತೇವೆ. ಇಲ್ಲಿ 'ದೇವರು' ಎನ್ನುವಲ್ಲಿ ಭಕ್ತಿ ಮತ್ತು ಗೌರವವಿದೆ. 'ದೊಡ್ಡವನು' ಎನ್ನುವಲ್ಲಿ ಸ್ನೇಹ ಮತ್ತು ಪ್ರೀತಿ ಇದೆ. ಇದು ಭಕ್ತಿ-ಗೌರವ-ಸ್ನೇಹ ಮತ್ತು ಪ್ರೀತಿಯ ಸಮ್ಮಿಲನದ ಸಂಬೋಧನೆ. ಆದ್ದರಿಂದ 'ಭವಾನ್ ದರ್ಶಯ' ಎನ್ನುವುದು ಮಹಾತ್ಮ್ಯಜ್ಞಾನಪೂರ್ವಕ-ಭಕ್ತಿ ಮತ್ತು ಸ್ನೇಹವಾಚಕ ಸಂಬೋಧನೆ.

ಮೇಲಿನ ಶ್ಲೋಕಗಳಲ್ಲಿ ನಾರದರು ವ್ರತದ ಬಗ್ಗೆ ಹೇಳಿರುವ ಮಾತಿನಿಂದ ನಮಗೆ: ನಾವು ಮಾಡುವ ಎಲ್ಲಾ ವ್ರತಗಳು ವ್ಯರ್ಥವೋ? ಯಾವ ವ್ರತ ವಿಹಿತ, ಯಾವುದು ವಿಹಿತವಲ್ಲ? ಯಾವ ವ್ರತ ಮಾಡಬೇಕು, ಯಾವುದನ್ನು ಮಾಡಬಾರದು? ಎಲ್ಲಾ ವ್ರತಗಳನ್ನೂ ಬಿಟ್ಟುಬಿಡಬೇಕೋ? ಇತ್ಯಾದಿ ಪ್ರಶ್ನೆಗಳು ಬರುತ್ತದೆ. ಈ ಪ್ರಶ್ನೆಗಳಿಗೆ ಉತ್ತರ ಸಿಗಬೇಕಾದರೆ ನಾವು ನಾರದರ ಮಾತನ್ನು ಎಚ್ಚರಿಕೆಯಿಂದ ವಿಶ್ಲೇಷಿಸಬೇಕು. ಇಲ್ಲಿ ನಾರದರು ಮುಖ್ಯವಾಗಿ ಹೇಳಿರುವುದು: ಲೌಕಿಕ ಫಲಕಾಮನೆಯಿಂದ ಮಾಡುವ ಕಾಮ್ಯವ್ರತ ಅಸಹ್ಯ ಎಂದೇ ಹೊರತು, ಭಗವಂತನ ಮೇಲೆ ಭಕ್ತಿ ವೃದ್ಧಿಯಾಗುವ ವ್ರತ ಅಸಹ್ಯ ಎಂದಲ್ಲ. ಹಾಗಾಗಿ ಭಕ್ತಿ-ಜ್ಞಾನ-ವೈರಾಗ್ಯ ವೃದ್ಧಿಗಾಗಿ ನಾವು ಯಾವ ವ್ರತವನ್ನಾದರೂ ಮಾಡಬಹುದು. ಉದಾಹರಣೆಗೆ: ಏಕಾದಶಿ, ಚಾತುರ್ಮಾಸ್ಯ, ಕೃಷ್ಣಜನ್ಮಾಷ್ಟಮಿ, ಇತ್ಯಾದಿ ವ್ರತಗಳು ಭಗವದ್ ಪ್ರೀತ್ಯರ್ಥ ನಾವು ಮಾಡಲೇ ಬೇಕಾದ ಕೆಲವು ವ್ರತಗಳು. ಇದರಿಂದ ಇಂದ್ರಿಯ ನಿಗ್ರಹ, ಆರೋಗ್ಯವೃದ್ಧಿ ಮತ್ತು ಮುಖ್ಯವಾಗಿ ಭಗವಂತನ ಅನುಗ್ರಹ ಸಾಧ್ಯ.

ಇದಂ ಹಿ ವಿಶ್ವಂ ಭಗವಾನಿವೇತರೋ ಯತೋ ಜಗತ್ ಸ್ಥಾನನಿರೋಧಸಂಭವಃ ।
ತದ್ಧಿ ಸ್ವಯಂ ವೇದ ಭವಾಂಸ್ತಥಾಪಿ ಪ್ರಾದೇಶಮಾತ್ರಂ ಭವತಃ ಪ್ರದರ್ಶಿತಮ್ ॥೨೦॥

ಈ ಜಗತ್ತು ಅಂದರೇನು? ಜಗತ್ತೇ ಭಗವಂತ-ಭಗವಂತನೇ ಜಗತ್ತೇ? "ಸರ್ವಂ ಖಲ್ವಿದಂ ಬ್ರಹ್ಮ" ಎಂದು ವೇದದಲ್ಲಿ ಹೇಳಿದ ಮಾತಿನ ಅರ್ಥವೇನು? ದರ್ಶನ ಭಾಷೆಯಲ್ಲಿರುವ ಈ ಶ್ಲೋಕ ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರರೂಪದಲ್ಲಿದೆ. ಮೇಲ್ನೋಟಕ್ಕೆ 'ಭಗವಂತನೇ ವಿಶ್ವ' ಎಂದು ಶಾಸ್ತ್ರಗಳು ಹೇಳಿದಂತೆ ಕಾಣುತ್ತದೆ. ಆದರೆ ಭಗವಂತನೇ ವಿಶ್ವವಲ್ಲ. ಅವನು 'ಇತರಃ' ಎನ್ನುತ್ತಾರೆ ನಾರದರು. ವೇದಗಳಲ್ಲಿ 'ಭಗವಂತನೇ ಜಗತ್ತು' ಎಂದು ಹೇಳಿದ್ದಾರೆ. ಭಗವಂತನನ್ನು ಬಿಟ್ಟು ಈ ಜಗತ್ತಿಗೆ ಸ್ವತಂತ್ರ ಅಸ್ತಿತ್ವವಿಲ್ಲ ಎನ್ನುವುದು ಆ ಮಾತಿನ ಅರ್ಥ. ಭಗವಂತನಿಂದ ಈ ವಿಶ್ವ ಸೃಷ್ಟಿಯಾಗಿರುವುದರಿಂದ, ಕಾರ್ಯ-ಕಾರಣ ಭಾವದಿಂದ 'ವಿಶ್ವವೇ ಭಗವಂತ' ಎನ್ನುತ್ತಾರೆ. ಇದೇ ಮಾತು ಗೀತೆಯಲ್ಲಿ ಬರುತ್ತದೆ. ಅಲ್ಲಿ ಕೃಷ್ಣ ಹೇಳುತ್ತಾನೆ: "ನ ತದಸ್ತಿ ವಿನಾ ಯತ್ ಸ್ಯಾನ್ಮಯಾ ಭೂತಂ ಚರಾಚರಮ್" ಎಂದು. ॥೧೦-೩೯॥ ಅಂದರೆ: ನನ್ನನ್ನು ಬಿಟ್ಟು ಈ ಚರಾಚಾರಾತ್ಮಕ ಪ್ರಪಂಚಕ್ಕೆ ಅಸ್ತಿತ್ವವಿಲ್ಲ ಎಂದರ್ಥ. ಭಾಷೆಯನ್ನು ಈ ರೀತಿಯಾಗಿ ಬಳಸುವುದು ಸರ್ವೇಸಾಮಾನ್ಯ. ಉದಾಹರಣೆಗೆ ನಾವು ಕೆಲವೊಮ್ಮೆ "ನೀವೇ ಎಲ್ಲಾ" ಎಂದು ಹೇಳುತ್ತೇವೆ. ಇದರರ್ಥ "ಎಲ್ಲಾ ಜಡ-ಚೇತನ ವಸ್ತುಗಳು ನೀವೇ" ಎಂದಲ್ಲ. ಬದಲಿಗೆ, "ನಿಮ್ಮನ್ನು ಬಿಟ್ಟರೆ ಅದಕ್ಕೆ ಅಸ್ತಿತ್ವವಿಲ್ಲ" ಎಂದರ್ಥ. ಹೀಗಾಗಿ ಎಲ್ಲವೂ ಭಗವಂತನಲ್ಲ, ಭಗವಂತ ಬೇರೆಯೇ ಇದ್ದಾನೆ. ಎಲ್ಲವೂ ಭಗವಂತನ ಅಧೀನವಾಗಿದೆ ಮತ್ತು ಆತನಿಂದಲೇ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರ ನಿರಂತರ ನಡೆಯುತ್ತಿರುತ್ತದೆ.

ಇಲ್ಲಿ ನಾರದರು ವ್ಯಾಸರಲ್ಲಿ ಹೇಳುತ್ತಾರೆ: "ಭಗವಂತನ ಅವತಾರರೂಪಿಯಾದ ನಿಮಗೆ ಎಲ್ಲವೂ ತಿಳಿದಿದೆ. ನಿಮಗೆ ತಿಳಿದಿರುವುದು ಅನಂತ ಆಕಾಶವಾದರೆ, ನಾನು ಇಲ್ಲಿ ಹೇಳಿರುವುದು ಒಂದು ಅಂಗುಲದಷ್ಟು. ನಿಮ್ಮ ಶಿಷ್ಯನಾದ ನನ್ನಲ್ಲಿ ಕೇಳಬೇಕೆಂದು ನೀವು ಅಪೇಕ್ಷೆಪಟ್ಟಿರುವುದರಿಂದ, ನಾನು ಈ ವಿವರಣೆ ಕೊಟ್ಟೆ" ಎಂದು. ಇಷ್ಟು ಹೇಳಿ ನಾರದರು ಭಗವಂತನ ಗುಣಗಳ ಮಹಿಮೆಯನ್ನು ನಿರೂಪಣೆ ಮಾಡತಕ್ಕಂತಹ ಅವಶ್ಯಕತೆ ಏನು ಎನ್ನುವುದಕ್ಕೆ, ತನ್ನದೇ ಕಥೆಯನ್ನು ದೃಷ್ಟಾಂತವಾಗಿ ಹೇಳುತ್ತಾರೆ. "ಭಗವಂತನ ಮಹಿಮೆಯನ್ನು ಕೇಳಿರುವುದರಿಂದಲೇ ಈ ಕಲ್ಪದಲ್ಲಿ ನಾನು ನಾರದ ಪದವಿಗೆ ಬಂದೆ" ಎಂದು ತಮ್ಮ ಕಥೆಯನ್ನು ಪ್ರಾರಂಭಿಸುತ್ತಾರೆ ನಾರದರು.

## ನಾರದರ ಪೂರ್ವ ಕಥೆ

ನಾರದರು ಹೇಳುತ್ತಾರೆ: ಹಿಂದಿನ ಬ್ರಹ್ಮಕಲ್ಪದಲ್ಲಿ ನಾನು ಒಬ್ಬಳು ದಾಸಿಯ ಮಗನಾಗಿದ್ದೆ. ನನ್ನ ತಾಯಿ ಹಸು ಸಾಕಿಕೊಂಡು, ಇನ್ನೊಬ್ಬರ ಮನೆಯ ಕೆಲಸ ಮಾಡಿಕೊಂಡು ಜೀವನ ನಿರ್ವಹಣೆ ಮಾಡುತ್ತಿದ್ದಳು. ಆಗ ನನಗೆ ಐದು ವರ್ಷ ವಯಸ್ಸು. ಹೊಟ್ಟೆಯ ಹಿಟ್ಟಿಗಾಗಿ ಪರದಾಡುವ ಬಡತನ ನಮ್ಮದು. ಹೀಗಿರುವಾಗ ನಮ್ಮ ಊರಿಗೆ ಚಾತುರ್ಮಾಸ್ಯ ಆಚರಣೆಗಾಗಿ ಋಷಿಗಳ ಸಮುದಾಯವೊಂದು ಬಂದು ಬೀಡುಬಿಟ್ಟಿತು. ಅವರು ನನ್ನ ತಾಯಿಯನ್ನು ಪರಿಚಾರಿಕೆಯಾಗಿ ಕೆಲಸಕ್ಕೆ ಸೇರಿಸಿಕೊಂಡರು. ಅಲ್ಲಿ ನಾನು ಋಷಿಗಳು ಊಟಮಾಡಿದ ಎಲೆಯನ್ನು ಎತ್ತುವ ಕೆಲಸ ಮಾಡುತ್ತಿದ್ದೆ. ಅಡುಗೆ ಪಾತ್ರೆಯಲ್ಲಿ ಉಳಿದ ಆಹಾರವನ್ನು ಸೇವಿಸುತ್ತಾ, ಬಹಳ ಸಂತೋಷದಿಂದ ಋಷಿಗಳ ಚಾಕರಿ ಮಾಡಿಕೊಂಡಿದ್ದೆ. ಇದರಿಂದ ನನಗೆ ಆ ಋಷಿಗಳಲ್ಲಿ ಆತ್ಮೀಯತೆ ಬೆಳೆಯಿತು. ಅವರು ಸದಾ ಭಗವಂತನ ಬಗೆಗೆ ಮಾತನಾಡುತ್ತಿದ್ದರು. ನನ್ನನ್ನು ಕರೆದು ಕುಳ್ಳಿರಿಸಿಕೊಂಡು ಭಗವಂತನ ಮಹಿಮೆಯನ್ನು ಹೇಳುತ್ತಿದ್ದರು. ಇದರಿಂದಾಗಿ ನನಗೆ ಭಗವಂತನಲ್ಲಿ ಆಸಕ್ತಿ ಹುಟ್ಟಿತು.

[ನಾರದರ ಈ ಕಥಾಭಾಗವನ್ನು ಕೇಳಿದಾಗ ನಮಗೆ ಒಂದು ವಿಷಯ ಸ್ಪಷ್ಟವಾಗುತ್ತದೆ. ಅದೇನೆಂದರೆ: ನಾವೆಂದೂ ನಮ್ಮ ಗುರುವನ್ನು ಹುಡುಕಿಕೊಂಡು ಹೋಗಬೇಕಾಗಿಲ್ಲ. ನಾವು ನಮ್ಮ ಹೃದಯದ ಬಾಗಿಲನ್ನು ತೆರೆದು ನಿರೀಕ್ಷಿಸುತ್ತಿರಬೇಕು ಅಷ್ಟೇ. ಜ್ಞಾನಿಗಳು ಸಿಕ್ಕಿದ ತಕ್ಷಣ ನಮಗೆ ಮಾರ್ಗದರ್ಶನ ಸಿಗುತ್ತದೆ ಎಂದು ಹೇಳಲು

ಬರುವುದಿಲ್ಲ. ನಮ್ಮ ಜೀವಸ್ವರೂಪಕ್ಕನುಗುಣವಾಗಿ, ಸ್ವರೂಪೋದ್ಧಾರಕ ಗುರು ಮಾತ್ರ ನಮ್ಮ ಮಾರ್ಗದರ್ಶನ ಮಾಡಬಲ್ಲ. ಕಾಲ ಪಕ್ವವಾದಾಗ ಅಂತಹ ಗುರುವನ್ನು ಭಗವಂತನೇ ನಮಗೆ ಪರಿಚಯಿಸುತ್ತಾನೆ].

ಮುಂದುವರಿದು ನಾರದರು ಹೇಳುತ್ತಾರೆ: ಋಷಿಗಳು ಕೊಟ್ಟ ಈ ಎಲ್ಲಾ ಜ್ಞಾನದಿಂದ ನನಗೆ ಭಗವಂತನನ್ನು ಬಿಟ್ಟು ಇನ್ನೇನೂ ಬೇಡ ಅನಿಸಲಾರಂಭಿಸಿತು. ಭಗವಂತನ ಸ್ಮರಣೆಯೊಂದೇ ಸರ್ವಸ್ವ ಎನ್ನುವ ಧೃಡ ನಂಬಿಕೆ ನನಗೆ ಬಂತು. ಕಣ್ಮುಚ್ಚಿ ಕುಳಿತರೆ ಇಡೀ ಜಗತ್ತು ನನ್ನೊಳಗಿರುವ ಆ ಭಗವಂತನೊಳಗಿದೆ ಎನ್ನುವ ಅನುಭವ. ನನ್ನೊಳಗೆ ಅಣುವಿಗಿಂತ ಅಣುವಾಗಿ ಆ ಭಗವಂತ, ಹಾಗೂ ಅವನೊಳಗೆ ಅನಂತ ಬ್ರಹ್ಮಾಂಡವಿರುವುದು ನನಗೆ ಕಲ್ಪಿತವಾಗುತ್ತಿತ್ತು. [ಇಲ್ಲಿ ಬಳಕೆಯಾಗಿರುವ 'ಕಲ್ಪಿತ' ಎನ್ನುವ ಪದದ ಅರ್ಥ 'ಭ್ರಾಂತಿ' ಎಂದಲ್ಲ. ಸಂಸ್ಕೃತದ 'ಕಲ್ಪಿತ' ಎನ್ನುವ ಪದ 'ಕ್ಲಪ' ಎನ್ನುವ ಧಾತುವಿನಿಂದ ಬಂದಿದೆ. ಇದರರ್ಥ- ಭಾವಿಸುವುದು ಅಥವಾ ಮನಸ್ಸಿನ ಅನುಸಂಧಾನ. "ನನ್ನ ಭಾವನೆಯಲ್ಲಿ ಹಾಗೆ ಕಂಡಿತು" ಎನ್ನುವುದನ್ನು ಕಲ್ಪಿತಾಃ ಎನ್ನುವ ಪದದಿಂದ ವಿವರಿಸಲಾಗಿದೆ]

ಭಗವಂತನ ಉಪಾಸನೆಯಲ್ಲಿ ಅತ್ಯಂತ ಶ್ರೇಷ್ಠ ಉಪಾಸನೆ ಚತುರ್ಮೂರ್ತಿ ಉಪಾಸನೆ. ಇದು ಬಹಳ ಪುರಾತನವಾದ ಉಪಾಸನೆ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ರೂಪದಲ್ಲಿ ಭಗವಂತನ ಉಪಾಸನೆಯನ್ನು ಪಂಚರಾತ್ರದಲ್ಲಿ ಕೂಡಾ ಹೇಳಲಾಗಿದೆ. ಭಗವಂತನ ಈ ನಾಲ್ಕು ರೂಪದಲ್ಲಿ ಎಲ್ಲವೂ ಅಡಗಿದೆ. ಸೃಷ್ಟಿ-ಸ್ಥಿತಿ-ಸಂಹಾರ ಕ್ರಿಯೆಯನ್ನು ಭಗವಂತ ಕ್ರಮವಾಗಿ ಪ್ರದ್ಯುಮ್ನ-ಅನಿರುದ್ಧ-ಸಂಕರ್ಷಣ ರೂಪದಲ್ಲಿ ಮಾಡುತ್ತಾನೆ. ನಮಗೆ ತಿಳಿದಂತೆ ಸೃಷ್ಟಿ-ಸ್ಥಿತಿ-ಸಂಹಾರ ಎನ್ನುವುದು ಸಂಸಾರ ಬಂಧನ. ಈ ಬಂಧನದಲ್ಲಿ ಸಿಕ್ಕಿಹಾಕಿಕೊಂಡಿರುವ 'ಜೀವ'ನನ್ನು ಬಿಡುಗಡೆ ಮಾಡಿ ಮೋಕ್ಷ ಕೊಡುವ ಭಗವಂತನ ವಿಶೇಷ ರೂಪ-ವಾಸುದೇವ ರೂಪ. "ಇಂತಹ ಭಗವಂತನ ಚತುರ್ಮೂರ್ತಿ ಉಪಾಸನೆ ಮಾಡಿದರೆ, ಎಲ್ಲವೂ ಮರೆತುಹೋಗಿ ಕೇವಲ ಆನಂದ ನಮ್ಮದಾಗುತ್ತದೆ" ಎಂದ ನಾರದರು, ಬಾಲ್ಯದಲ್ಲಿ ತಾನು ಪಡೆದ ಚತುರ್ಮೂರ್ತಿ ಉಪಾಸನೆಯ ಜ್ಞಾನೋಪದೇಶವನ್ನು ವಿವರಿಸುತ್ತಾರೆ.

**ಓಂ ನಮೋ ಭಗವತೇ ತುಭ್ಯಂ ವಾಸುದೇವಾಯ ಧೀಮಹಿ ।**
**ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ ॥೩೭॥**

ಈ ಮಂತ್ರ ವಾಸುದೇವ ದ್ವಾದಶಾಕ್ಷರ ಪ್ರತೀಕವಾಗಿದೆ. ಇಲ್ಲಿ 'ತುಭ್ಯಂ' ಮತ್ತು 'ಧೀಮಹಿ' ಎನ್ನುವ ಎರಡು ಪದಗಳನ್ನು ಸೇರಿಸಲಾಗಿದೆ. ಭಗವಂತನ ವಾಸುದೇವ ರೂಪ-ಮೋಕ್ಷಪ್ರದರೂಪ. ನಮ್ಮೊಳಗೆ ಸದಾ ಇದ್ದರೂ ಕೂಡಾ, ಮೋಕ್ಷಪ್ರಾಪ್ತಿಯಾಗುವ ತನಕ ಗೋಚರವಾಗದ ರೂಪವಿದು. ತನ್ನನ್ನು ತಾನು ಮುಚ್ಚಿಕೊಂಡು(ವಾಸುವಾಗಿ), ಕೊನೆಗೆ ಮೋಕ್ಷದಲ್ಲಿ ಬೆಳಕಾಗಿ(ದೇವಯತಿ) ಕಾಣಿಸಿಕೊಳ್ಳುವ ಭಗವಂತ ವಾಸುದೇವ. 'ವಸುದೇವ' ಎಂದರೆ ಶುದ್ಧವಾದ ಮನಸ್ಸು. [ಇದನ್ನು ಮುಂದೆ ಭಾಗವತದಲ್ಲೇ ಹೇಳುತ್ತಾರೆ. **ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ**(೦೧-೦೩-೨೩)]. ಬಾಳಿಗೆ ಬೆಳಕು ನೀಡುವ ಅತಿದೊಡ್ಡ ಸಂಪತ್ತು ಈ 'ಶುದ್ಧವಾದ ಮನಸ್ಸು'. ಇಂತಹ ಶುದ್ಧವಾದ ಮನಸ್ಸಿಗೆ ಗೋಚರನಾಗುವ ಭಗವಂತ 'ವಾಸುದೇವ'.

'ದ್ಯುಮ್ನ' ಎಂದರೆ ಸಂಪತ್ತು. ಈ ವಿಶ್ವ ಎನ್ನುವುದು ದೇವತೆಗಳಿಗೆ ಸುವರ್ಣ ಕೊಪ್ಪರಿಗೆಯಂತೆ. ಇಂತಹ ಸಮೃದ್ಧವಾದ ಈ ವಿಶ್ವವನ್ನು ನಿರ್ಮಿಸಿದ ಭಗವಂತ ಪ್ರದ್ಯುಮ್ನ. ಸೃಷ್ಟಿ ನಿರ್ಮಾಣದ ನಂತರ ಯಾವ ನಿರೋಧವೂ ಇಲ್ಲದೆ, ಪ್ರತಿಯೊಂದು ವಸ್ತುವಿನೊಳಗೂ ಪ್ರವೇಶಿಸಿ, ರಕ್ಷಣೆ ಮಾಡುವ ಭಗವಂತ ಅನಿರುದ್ಧ. ಕೊನೆಗೆ ಎಲ್ಲವನ್ನೂ

ಕರ್ಷಣೆಮಾಡಿ, ಸಂಹಾರ ಮಾಡುವವನು ಸಂಕರ್ಷಣ. "ಹೀಗೆ 'ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣನಾಗಿರುವ, ಮೋಕ್ಷಪ್ರದ ಭಗವಂತ-ವಾಸುದೇವನನ್ನು ಧ್ಯಾನ ಮಾಡು' ಎಂದು ಋಷಿಗಳು ನನಗೆ ಉಪದೇಶಿಸಿದರು. ನಾನು ಋಷಿಗಳು ಹೇಳಿದ ಮಾತನ್ನು ಚಾಚೂತಪ್ಪದೆ ಪಾಲಿಸಿದೆ. ಮೈಮರೆತು ಧ್ಯಾನ ಮಾಡಿದೆ. ಹಾಗಾಗಿ ಅಂದು ಋಷಿಗಳು ಮೂಡಿಸಿದ ಜಾಗೃತಿಯಿಂದ, ಇಂದು ಬ್ರಹ್ಮದೇವರ ಮಾನಸಪುತ್ರನಾಗಿ ಹುಟ್ಟಿ, ನಾರದ ಪದವಿಯನ್ನು ಪಡೆಯುವ ಭಾಗ್ಯ ನನಗೆ ದೊರೆಯಿತು" ಎನ್ನುತ್ತಾರೆ ನಾರದರು.

ತ್ವಮಪ್ಯದಭ್ರಶ್ರುತ ವಿಶ್ರುತಂ ವಿಭೋಃ ಸಮಾಪ್ಯತೇ ಯೇನ ವಿದಾಂ ಬುಭುತ್ಸಿತಮ್ ।
ಪ್ರಾಖ್ಯಾಹಿ ದುಃಖೈರ್ಮುಹುರರ್ದಿತಾತ್ಮನಾಂ ಸಂಕ್ಲೇಶನಿರ್ವಾಣಮುಶಂತಿ ನಾನ್ಯಥಾ ॥೪೦॥

"ನೀವು ನಿತ್ಯತೃಪ್ತರು. ನಿಮಗಾಗಿ ನೀವು ಏನೂ ಮಾಡಬೇಕಾಗಿಲ್ಲ. ಆದರೆ ದುಃಖದಿಂದ ಪಾರಾಗುವ ಬಗೆಯನ್ನು ಅರಿಯದ ಜನರಿಗಾಗಿ, ಅವರಿಗೆ ಮಾರ್ಗದರ್ಶನ ರೂಪವಾಗಿ, ಮಹಾತ್ಮರೂ ಹಾಡಿ ಹೊಗಳುವಂತಹ, ಜ್ಞಾನಿಗಳ ಜ್ಞಾನದಾಹವನ್ನು ತಣಿಸುವಂತಹ ಒಂದು ಗ್ರಂಥ ರಚನೆ ತಮ್ಮಿಂದಾಗಬೇಕು", ಎಂದು ನಾರದರು ವೇದವ್ಯಾಸರಲ್ಲಿ ಹೇಳಿದರು-ಎನ್ನುವಲ್ಲಿಗೆ ಈ ಅಧ್ಯಾಯ ಕೊನೆಗೊಳ್ಳುತ್ತದೆ.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಪಂಚಮೋಽಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಐದನೇ ಅಧ್ಯಾಯ ಮುಗಿಯಿತು.

*********

# ಷಷ್ಠೋಽಧ್ಯಾಯಃ

## ನಾರದರಿಗೆ ಅಂತರಂಗ ದರ್ಶನ ಮತ್ತು ಅಶರೀರವಾಣಿ

ಈ ಅಧ್ಯಾಯದಲ್ಲಿ ನಾರದರ ಪೂರ್ವ ಕಥೆ ಮುಂದುವರಿಯುತ್ತದೆ. ನಮಗೆ ನಾರದರ ಪೂರ್ವ ಕಲ್ಪದ ಕಥೆಯನ್ನು ತಿಳಿಸಿಕೊಡುವುದಕ್ಕಾಗಿಯೇ ವ್ಯಾಸರು ನಾರದರಲ್ಲಿ ಈ ರೀತಿ ಪ್ರಶ್ನೆ ಹಾಕುತ್ತಾರೆ:

ಶ್ರೀವ್ಯಾಸ ಉವಾಚ-

ಭಿಕ್ಷುಭಿರ್ವಿಪ್ರವಸಿತೇ ವಿಜ್ಞಾನಾದೇಷ್ಟೃಭಿಸ್ತವ ।
ವರ್ತಮಾನೋ ವಯಸ್ಯಾದ್ಯೇ ತತಃ ಕಿಮಕರೋದ್ ಭವಾನ್ ॥೧॥

ಸ್ವಾಯಂಭುವ ಕಯಾ ವೃತ್ತ್ಯಾ ವರ್ತಿತಂ ತೇ ಪರಂ ವಯಃ ।
ಕಥಂ ವೇದಮುದಸ್ರಾಕ್ಷೀಃ ಕಾಲೇ ಪ್ರಾಪ್ತೇ ಕಳೇಬರಮ್ ॥೨॥

ಪ್ರಾಕ್ಕಲ್ಪವಿಷಯಾಮೇತಾಂ ಸ್ಮೃತಿಂ ತೇ ಸುರಸತ್ತಮ ।
ನ ಹ್ಯೇವ ವ್ಯವಧಾತ್ ಕಾಲ ಏಷ ಸರ್ವನಿರಾಕೃತಿಃ ॥೪॥

ವ್ಯಾಸರು ಹೇಳುತ್ತಾರೆ: "ನೀವು ವಿವರಿಸಿದ ಹಿಂದಿನ ಕಲ್ಪದಲ್ಲಿನ ನಿಮ್ಮ ಕಥೆ ತಿಳಿಯಿತು. ಆದರೆ ಮುಂದೆ ನೀವು ಎಷ್ಟು ಕಾಲ ಇದ್ದಿರಿ? ಏನು ಸಾಧನೆ ಮಾಡಿದಿರಿ? ಕೋಟಿ-ಕೋಟಿ ವರ್ಷಗಳ ಹಿಂದೆ ನಡೆದ ಈ ಘಟನೆ ನಿಮಗೆ ಹೇಗೆ ಇಂದೂ ನೆನಪಿದೆ? ಸತ್ತು ಹೊಸದೇಹದಲ್ಲಿ ಹುಟ್ಟಿದರೂ ಕೂಡಾ, ಹೇಗೆ ಎಲ್ಲವನ್ನೂ ನೀವು ನೆನಪಿಸಿಕೊಂಡು ಹೇಳುತ್ತಿದ್ದೀರಿ? ಇವೆಲ್ಲವನ್ನೂ ವಿವರವಾಗಿ ವಿವರಿಸಿ" ಎಂದು. ಈ ಎಲ್ಲಾ ಪ್ರಶ್ನೆಗಳು ನಮ್ಮ-ನಿಮ್ಮೆಲ್ಲರ ಪ್ರಶ್ನೆ. ನಮಗೆ ತಿಳಿಸಿ ಹೇಳುವುದಕ್ಕಾಗಿ ಇದು ವ್ಯಾಸರೂಪದಲ್ಲಿ ಭಗವಂತನ ಲೀಲೆ.

ಶ್ರೀನಾರದ ಉವಾಚ-

ಭಿಕ್ಷುಭಿರ್ವಿಪ್ರವಸಿತೇ ವಿಜ್ಞಾನಾದೇಷ್ಟೃಭಿರ್ಮಮ ।
ವರ್ತಮಾನೋ ವಯಸ್ಯಾದ್ಯೇ ತತ ಏತದಕಾರ್ಷಮ್ ॥೫॥

ಏಕಾತ್ಮಜಾ ಮೇ ಜನನೀ ಯೋಷಿನ್ಮೂಢಾ ಚ ಕಿಂಕರೀ ।
ಮಯ್ಯಾತ್ಮಜೇಽನನ್ಯಗತೌ ಚಕ್ರೇ ಸ್ನೇಹಾನುಬಂಧನಮ್ ॥೬॥

ವ್ಯಾಸರ ಪ್ರಶ್ನೆಗೆ ಉತ್ತರಿಸುತ್ತಾ ನಾರದರು ಹೇಳುತ್ತಾರೆ: ಋಷಿಗಳೆಲ್ಲರೂ ಚಾತುರ್ಮಾಸ್ಯ ಮುಗಿಯುತ್ತಿದ್ದಂತೆಯೇ ಅಲ್ಲಿಂದ ಹೊರಟುಹೋದರು. ಆದರೆ ನನಗೆ ಋಷಿಗಳು ಹೇಳಿದ ಚತುರ್ಮೂರ್ತಿಗಳೇ ತಲೆಯಲ್ಲಿ ಸುತ್ತುತ್ತಿದ್ದರು. ನನ್ನ

ತಾಯಿ ನಿರ್ಗತಿಕಳಾಗಿರುವುದರಿಂದ ನಾನು ಆಕೆಯನ್ನು ಬಿಟ್ಟು ಹೋಗುವಂತಿರಲಿಲ್ಲ. ಹಾಗಾಗಿ ಅಲ್ಲೇ ನನ್ನ ತಾಯಿಯ ಜೊತೆಗೆ ಇದ್ದೆ.

ಹೀಗಿರುವಾಗ ಒಂದು ದಿನ ನನ್ನ ತಾಯಿ ರಾತ್ರಿ ಹೊತ್ತು ಹೊರಗೆ ಹಸುವಿನ ಹಾಲು ಕರೆಯಲೆಂದು ಹೋಗಿದ್ದಾಗ, ಹಾವು ಕಚ್ಚಿ ಸಾವನ್ನಪ್ಪಿದಳು. ಇದರಿಂದಾಗಿ ನಾನು ಒಂಟಿಯಾದೆ. ತಾಯಿಯನ್ನು ಕಳೆದುಕೊಂಡು ದುಃಖವಾದರೂ ಕೂಡಾ, ಇನ್ನೊಂದು ರೀತಿಯಲ್ಲಿ ಯಾವುದೇ ಸಂಸಾರ ಪಾಶವೂ ಇಲ್ಲದೇ, ಸಾಧನೆ ಮಾಡಲು ಈ ಘಟನೆ ನನಗೆ ಸಹಾಯ ಮಾಡಿತು.  ಇದು ಭಗವಂತನ ಅನುಗ್ರಹ ಎಂದುಕೊಂಡ ನಾನು, ಎಲ್ಲಾ ಮೋಹವನ್ನು ಕಳಚಿಕೊಂಡು ಉತ್ತರಾಭಿಮುಖವಾಗಿ ಹೊರಟೆ.

ಸ್ಫೀತಾನ್ ಜನಪದಾಂಸ್ತತ್ರ ಪುರಗ್ರಾಮವ್ರಜಾಕರಾನ್ ।
ಖೇಟಾನ್ ಪಟ್ಟನವಾಟೀಶ್ಚ ವನಾನ್ಯುಪವನಾನಿ ಚ ॥೧೧॥

"ಹೀಗೆ ಹೋಗುತ್ತಿರುವಾಗ ಅನೇಕ ಊರು ಕೇರಿಗಳು ಸಿಕ್ಕಿದವು. ಆದರೆ ನಾನು ಯಾವುದರ ಗೋಜೂ ಇಲ್ಲದೇ, ಕಾಡು-ಮೇಡನ್ನು ದಾಟಿಕೊಂಡು ಮುನ್ನಡೆದೆ" ಎನ್ನುತ್ತಾರೆ ನಾರದರು. ಇಲ್ಲಿ ನಾರದರು ಕೆಲವು ವಿಶಿಷ್ಠ ಪದಗಳನ್ನು ಉಪಯೋಗಿಸಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ೧. ಖೇಟ: "**ಮೃಗಯಾಜೀವಿನಾಂ ಖೇಟಃ**". ಅಂದರೆ ಬೇಟೆಗಾರರು ವಾಸಮಾಡುವ ಹಳ್ಳಿ. ೨. ವಾಟೀ: "**ವಾಟೀ ಪುಷ್ಪೋಪಜೀವಿನಾಂ**" ಹೂ ಬೆಳೆಸಿಕೊಂಡು ಬದುಕುವ ಜನರಿರುವ ಹಳ್ಳಿ. ೩. ವ್ರಜ: ಗೋವಳರ ಕೇರಿ. ೪. ಆಕರ: ಗಣಿಗಳಿರುವ ಊರು. ೫.ಗ್ರಾಮ: ಎಲ್ಲಾ ರೀತಿಯ ಜನರು ವಾಸಮಾಡುವ ಸ್ಥಳ. ೬. ಪುರ: ರಾಜರು ನೆಲೆಸಿರುವ ಸ್ಥಳ. ೭. ಉಪವನ: ನಮ್ಮ ಅನುಕೂಲಕ್ಕಾಗಿ ನಾವು ಬೆಳೆಸಿಕೊಂಡ ಕಾಡು. ೮. ವನ: ಸಹಜವಾಗಿ ಬೆಳೆದ ಕಾಡು.

ಮುಂದುವರಿದು ನಾರದರು ಹೇಳುತ್ತಾರೆ: ಹೀಗೆ ಎಲ್ಲವನ್ನೂ ದಾಟಿಕೊಂಡು ಮುನ್ನಡೆದ ನನಗೆ ಒಂದು ಭೀಕರವಾದ ಗೊಂಡಾರಣ್ಯ ಸಿಗುತ್ತದೆ. ಅಲ್ಲಿ ಯಾವ ಮನುಷ್ಯರ ಸುಳಿಯೂ ಇರುವುದಿಲ್ಲ. ಆ ಸ್ಥಳವನ್ನು ನೋಡಿದಾಗ ನನಗೆ ಸಾಧನೆಗೆ ಇದೇ ಪ್ರಶಸ್ತ ಸ್ಥಳ ಎನಿಸುತ್ತದೆ. ಹಾಗಾಗಿ ಅಲ್ಲೇ ನಿಂತು ಅಲ್ಲಿರುವ ಒಂದು ಅಶ್ವತ್ಥ ಮರದ ಬುಡದಲ್ಲಿ ತಪಸ್ಸಿಗೆ ಕುಳಿತೆ. ಹೀಗೆ ಕಣ್ಮುಚ್ಚಿ ಕುಳಿತಾಗ ನನಗೆ ಭಗವಂತನ ಅದ್ಭುತ ರೂಪ ಕಾಣಿಸುತ್ತದೆ!  ಈ ರೀತಿ ಭಗವಂತನ ದರ್ಶನ ಅಂತರಂಗದಲ್ಲಾದಾಗ, ನನಗಾದ ಅನುಭವ ವರ್ಣಿಸಲು ಅಸಾಧ್ಯವಾದುದು.

ಪ್ರೇಮಾತಿಭರನಿರ್ಭಿನ್ನ ಪುಲಕಾಂಗೋऽತಿನಿರ್ವೃತಃ ।
ಆನಂದಸಂಪ್ಲವೇ ಲೀನೋ ನಾಪಶ್ಯಮುಭಯಂ ಮುನೇ ॥೨೧॥

"ಭಗವಂತನ ಪ್ರೀತಿ ಉಕ್ಕಿ ಹರಿದಾಗ ಅಳೆಯಲಾಗದ ಆನಂದ ನನ್ನದಾಯಿತು. ಮೈಯೆಲ್ಲಾ ರೋಮಾಂಚನ. ಆನಂದದ ಸಮುದ್ರದಲ್ಲಿ ಈಜಾಡಿದ ಅನುಭವ ನನ್ನದು. ಆಗ ಭಗವಂತನನ್ನು ಬಿಟ್ಟು ಇನ್ನೇನನ್ನೂ ಕಾಣದಾದೆ" ಎನ್ನುತ್ತಾರೆ ನಾರದರು. ಇಲ್ಲಿ  "**ನಾಪಶ್ಯಮುಭಯಂ**" ಎಂದರೆ ಭಗವಂತನನ್ನು ಹೊರತುಪಡಿಸಿ ಬೇರೇನನ್ನೂ ಕಾಣದಾದೆ ಎಂದರ್ಥ. ಪ್ರಾಚೀನ ವ್ಯಾಕರಣ ನೋಡಿದರೆ ಮಾತ್ರ ಈ ಮಾತು ಅರ್ಥವಾಗುತ್ತದೆ. "**ಉಭಯಂ**

**ದ್ವಿತೀಯಂ ನಾಪಶ್ಯಂ ತಮೇವಾಪಶ್ಯಂ".** ಇಲ್ಲಿ 'ಉಭಯಂ' ಎಂದರೆ ಬೇರೆ ಪ್ರಪಂಚವನ್ನು ನೋಡಲಿಲ್ಲ- ಭಗವಂತನನ್ನೇ ನೋಡಿದೆ ಎಂದರ್ಥ.

ಮುಂದುವರಿದು ನಾರದರು ಹೇಳುತ್ತಾರೆ: ನನಗೆ ಬಹಳ ಸಂತೋಷವಾಯಿತು. ಆನಂದದ ಸಮುದ್ರದಲ್ಲಿ ಓಡಾಡುತ್ತಿದ್ದೇನೆ ಅನಿಸಿತು. ಆದರೆ ಇದ್ದಕ್ಕಿದ್ದಂತೆ ಆ ರೂಪ ಅದೃಶ್ಯವಾಯಿತು! ಆಗ ನನಗೆ ಗಾಬರಿಯಾಯಿತು. ಮರಳಿ ಎಷ್ಟೇ ಪ್ರಯತ್ನಿಸಿದರೂ ಭಗವಂತನ ದರ್ಶನವಾಗಲಿಲ್ಲ. ಪ್ರತ್ಯಕ್ಷವಾಗಿ ಭಗವಂತನನ್ನು ಕಾಣಲೇಬೇಕೆಂದು ಗೋಗರೆದಾಗ ನನಗೊಂದು ಅಶರೀರವಾಣಿ ಕೇಳಿಸಿತು. "ನನ್ನನ್ನು ನೋಡಲು ಬೇಕಾದ ಪಕ್ವತೆ ಇನ್ನೂ ನಿನಗೆ ಬಂದಿಲ್ಲ. ನೀನು ನನ್ನನು ಕಾಣುತ್ತಿ. ಯಾವಾಗ ಬೇಕೋ ಆವಾಗ ಕಾಣುವಷ್ಟು ದೊಡ್ಡವನಾಗಿ ಬೆಳೆಯುತ್ತಿ. ಆದರೆ ಸದ್ಯಕ್ಕೆ ಇಷ್ಟೇ. ಇದರಿಂದ ಹೆಚ್ಚು ನೋಡುವ ಆಸೆ ಬೇಡ. ನಿನ್ನ ಸಾಧನೆಯಿಂದಾಗಿ, ಈ ಜನ್ಮದಲ್ಲಿ ನೀನು ಏನನ್ನು ಕಂಡೆ, ಅದನ್ನು ನೀನೆಂದೂ ಮರೆಯುವುದಿಲ್ಲ. ನಿನ್ನ ಪೂರ್ವ ಸ್ಮೃತಿ ಸದಾ ನಿನ್ನೊಂದಿಗಿರುತ್ತದೆ" ಎನ್ನುವ ಸಂದೇಶ ಆ ಅಶರೀರವಾಣಿಯಿಂದ ಬಂದಿತು. ಈ ಘಟನೆಯ ನಂತರ ನಾನು ಇಡೀ ಜೀವನವನ್ನು ಭಗವಂತನ ಚಿಂತನೆಯಲ್ಲಿ ಕಳೆದೆ. ವಯಸ್ಸಾದ ನಂತರ ನನ್ನ ಪಾಂಚಭೌತಿಕ ಶರೀರ ಬಿದ್ದು ಹೋಯಿತು. ಆ ಕಲ್ಪದ ಕಥೆ ಅಲ್ಲಿಗೆ ಮುಗಿಯಿತು. ಆ ನಂತರ ಈ ಕಲ್ಪದಲ್ಲಿ ನಾನು ಬ್ರಹ್ಮನ ಮಾನಸಪುತ್ರನಾಗಿ ಜನಿಸಿದೆ. ವೀಣೆ ನನ್ನ ಕೈಯಲ್ಲಿದೆ. ನಾನು ಕಾಣಬೇಕೆಂದುಕೊಂಡಾಗಲೆಲ್ಲಾ ಆ ಭಗವಂತ ದರ್ಶನ ಕೊಡುತ್ತಾನೆ. ಎಂತಹ ಭಾಗ್ಯ ನನ್ನದು. ಇದಕ್ಕೆಲ್ಲಾ ಕಾರಣ ನಾನು ಭಗವಂತನ ಮಹಿಮೆಯನ್ನು ಋಷಿಗಳಿಂದ ಕೇಳಿ ತಿಳಿದಿರುವುದು. ಆದ್ದರಿಂದ ಅಂತಹ ಭಗವಂತನ ಮಹಿಮೆಯನ್ನು ಜನರಿಗೆ ತಾವು ಪರಿಚಯಿಸಬೇಕು ಎನ್ನುವುದು ನನ್ನ ಅಪೇಕ್ಷೆ ಎನ್ನುತ್ತಾರೆ ನಾರದರು.

ಇಷ್ಟು ಹೇಳಿ ನಾರದರು ತಮ್ಮ ವೀಣೆಯನ್ನು ಮೀಟುತ್ತಾ ಅಲ್ಲಿಂದ ಹೊರಟುಹೋಗುತ್ತಾರೆ ಎನ್ನುವಲ್ಲಿಗೆ ಈ ಅಧ್ಯಾಯ ಮುಕ್ತಾಯವಾಯಿತು.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಷಷ್ಠೋಽಧ್ಯಾಯಃ ॥**

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಆರನೇ ಅಧ್ಯಾಯ ಮುಗಿಯಿತು.

*********

# ಸಪ್ತಮೋಽಧ್ಯಾಯಃ

## ಭಾಗವತ ರಚನೆ ಮತ್ತು ಶುಕಾಚಾರ್ಯರಿಗೆ ಉಪದೇಶ

**ಶೌನಕ ಉವಾಚ-**

ನಿರ್ಗತೇ ನಾರದೇ ಸೂತ ಭಗವಾನ್ ಬಾದರಾಯಣಃ ।
ಶ್ರುತವಾಂಸ್ತದಭಿಪ್ರೇತಂ ತತಃ ಕಿಮಕರೋದ್ ವಿಭುಃ ॥೧॥

ವ್ಯಾಸ-ನಾರದ ಸಂವಾದವನ್ನು ಸೂತರಿಂದ ಕೇಳಿ ತಿಳಿದ ಶೌನಕಾದಿಗಳು ಕೇಳುತ್ತಾರೆ: "ನಾರದರು ಹೊರಟುಹೋದ ಮೇಲೆ ವ್ಯಾಸರು ಏನು ಮಾಡಿದರು?" ಎಂದು. ಶೌನಕಾದಿಗಳ ಪ್ರಶ್ನೆಗೆ ಉತ್ತರಿಸುತ್ತಾ ಸೂತರು: ವ್ಯಾಸರು ಭಾಗವತ ರಚನೆ ಮಾಡಿ, ಅದನ್ನು ತನ್ನ ಮಗನಾದ ಶುಕಾಚಾರ್ಯರಿಗೆ ಉಪದೇಶಿಸಿರುವ ಪ್ರಸಂಗವನ್ನು ಮುಂದೆ ವಿವರಿಸುತ್ತಾರೆ.

**ಸೂತ ಉವಾಚ-**

ಬ್ರಹ್ಮನದ್ಯಾಂ ಸರಸ್ವತ್ಯಾ ಆಶ್ರಮಃ ಪಶ್ಚಿಮೇ ತಟೇ ।
ಶಮ್ಯಾಪ್ರಾಸ ಇತಿ ಪ್ರೋಕ್ತ ಋಷೀಣಾಂ ಸತ್ರವರ್ಧನಃ ॥೨॥

ಸರಸ್ವತಿ ನದಿ ಉತ್ತರದಿಂದ ದಕ್ಷಿಣಕ್ಕೆ ಹರಿದು ಬರುತ್ತದೆ. ಆ ನದಿಯ ಪಶ್ಚಿಮ ತಡಿಯಲ್ಲಿ ವ್ಯಾಸಾಶ್ರಮವಿದೆ. ಅದು ಎಲ್ಲಾ ಋಷಿಗಳು ನಾನಾ ವಿಧದಲ್ಲಿ ಯಜ್ಞ ಯಾಗಾದಿಗಳನ್ನು ಮಾಡುವ ತಾಣ. ಇಲ್ಲಿ ಆಶ್ರಮದ ಹೆಸರು 'ಶಮ್ಯಾಪ್ರಾಸ' ಎಂದಿದ್ದಾರೆ. ಇದು ಸಾಮಾನ್ಯವಾಗಿ ಸಂಸ್ಕೃತ ಸಾಹಿತ್ಯದಲ್ಲಿ ಕಾಣಿಸದ ವಿಚಿತ್ರವಾದ ಹೆಸರು. 'ಶಮ್ಯ' ಎಂದರೆ ಗುದ್ದಲಿಯಂತಹ ಸಲಕರಣೆ. ಸಾಮಾನ್ಯವಾಗಿ ಯಾಗಶಾಲೆಯನ್ನು ನಿರ್ಮಾಣ ಮಾಡುವ ಮೊದಲು ಆ ಸ್ಥಳವನ್ನು ಅಗೆದು ಶೋಧನೆ ಮಾಡಿ, ನಂತರ ಶುದ್ಧೀಕೃತವಾದ ಜಾಗದಲ್ಲಿ ಯಾಗ ಶಾಲೆ ಕಟ್ಟುತ್ತಿದ್ದರು. ಈ ಕಾರಣದಿಂದ ಆಶ್ರಮವನ್ನು 'ಶಮ್ಯಪ್ರಾಸ' ಎಂದು ಕರೆದಿದ್ದಾರೆ.

ತಸ್ಮಿನ್ ಋಷ್ಯಾಶ್ರಮೇ ವ್ಯಾಸೋ ಬದರೀಷಂಡಮಂಡಿತೇ ।
ಆಸೀನೋಽಪ ಉಪಸ್ಪೃಶ್ಯ ಪ್ರಣಿದಧ್ಯೌ ಮನಶ್ಚಿರಮ್ ॥೩॥

ಭಕ್ತಿಯೋಗೇನ ಮನಸಿ ಸಮ್ಯಕ್ ಪ್ರಣಿಹಿತೇಽಮಲೇ ।
ಅಪಶ್ಯತ್ ಪುರುಷಂ ಪೂರ್ಣಂ ಮಾಯಾಂ ಚ ತದಪಾಶ್ರಯಾಮ್ ॥೪॥

ನಾರದರು ಹೊರಟುಹೋದ ಮೇಲೆ ವ್ಯಾಸರು, ಭಕ್ತಿಯೋಗದಿಂದ ತುಂಬಿದ ಜ್ಞಾನಿಗಳ ನಿರ್ಮಲವಾದ ಮನಸ್ಸಿನಲ್ಲಿ ಭಗವಂತನಿರುವುದನ್ನು ಕಾಣುತ್ತಾರೆ. "ಭಕ್ತಿಯೋಗೇನ ಸಮ್ಯಕ್ ಪ್ರಣಿಹಿತೇ ಲೋಕಾನಾಂ ಮನಸಿ". ಮಾಯೆಯ

ಮುಸುಕಿನಲ್ಲಿ 'ತನ್ನ' ಅರಿವಾಗಲೀ, 'ಭಗವಂತನ' ಅರಿವಾಗಲೀ ಇಲ್ಲದೇ ಇರುವ, ಲೌಕಿಕತೆಯ ಬೆನ್ನುಹತ್ತಿದ ಜನರನ್ನು ಅವರು ಕಾಣುತ್ತಾರೆ.

**ಅನರ್ಥೋಪಶಮಂ ಸಾಕ್ಷಾದ್ ಭಕ್ತಿಯೋಗಮಧೋಕ್ಷಜೇ ।**
**ಲೋಕಸ್ಯಾಜಾನತೋ ವಿದ್ವಾಂಶ್ಚಕ್ರೇ ಸಾತ್ವತಸಂಹಿತಾಮ್ ॥೬॥**

ಇಂತಹ ಅನರ್ಥದಿಂದ ಲೋಕದ ಜನರು ಪಾರಾಗಲು ಭಕ್ತಿಯೋಗವೊಂದೇ ಮಾರ್ಗ ಎಂದು ಅರಿತ ವ್ಯಾಸರು, ಭಗವಂತನಲ್ಲಿ ನೇರವಾಗಿ ಭಕ್ತಿಯನ್ನು ಗಾಢಗೊಳಿಸುವ ಒಂದು ಗ್ರಂಥ ರಚನೆಯಾಗಬೇಕೆಂದು ಸಂಕಲ್ಪ ಮಾಡಿದರು. ತಿಳುವಳಿಕೆ ಇಲ್ಲದೇ ದಾರಿತಪ್ಪುತ್ತಿರುವ ಜನರಿಗಾಗಿ ವ್ಯಾಸರು ಒಂದು ಅಪೂರ್ವವಾದ, ಸಾತ್ವಿಕವಾದ ಮತ್ತು ಗುಣಪೂರ್ಣನಾದ ಭಗವಂತನ ಬಗೆಗೆ ಹೇಳುವ ಸಂಹಿತೆಯನ್ನು ರಚಿಸಿದರು. ಈ ಹಿಂದೆ ಹೇಳಿದಂತೆ ವ್ಯಾಸರು ಭಾಗವತವನ್ನು ಬರೆದದ್ದಲ್ಲ. ಅದು ಅವರ ಮಾನಸಿಕ ರಚನೆ ಮತ್ತು ಅದನ್ನು ಅವರು ತನ್ನ ಶಿಷ್ಯರಿಗೆ ಉಪದೇಶಿಸಿದರು. ಕಣ್ಣಿಗೆ ಕಾಣದ ಭಗವಂತನನ್ನು ನಮ್ಮ ಮನಸ್ಸಿಗೆ ಶಬ್ದದ ಮುಖೇನ ಮನವರಿಕೆ ಮಾಡುವುದಕ್ಕೋಸ್ಕರ ಭಾಗವತ ರಚನೆಯಾಯಿತು. ಇಲ್ಲಿ 'ಅಧೋಕ್ಷಜ' ಎನ್ನುವ ಪದ ಬಳಕೆಯಾಗಿದೆ. ಭಗವಂತ ನಮ್ಮ ಹೊರಗಣ್ಣಿಗೆ ಕಾಣಲಾರ, ಆದರೆ ಆತನನ್ನು ಇಂದ್ರಿಯ ನಿಗ್ರಹ ಮಾಡಿ ಸಾಧನೆಯಿಂದ ಒಳಗಣ್ಣಿನಿಂದ ಕಾಣಬಹುದು. ಭಾಗವತ ಭಗವಂತನನ್ನು ಅಂತರಂಗದಲ್ಲಿ ಕಾಣುವ ಬಗೆಯನ್ನು ತಿಳಿಸುವ ಗ್ರಂಥ. ಇದು ಭಗವಂತನ ಮಹಿಮೆಯ ಅರಿವನ್ನು ಕೊಟ್ಟು, ಭಗವದ್ಭಕ್ತಿಯನ್ನು ಭರಿಸಿ, ಸಂಸಾರದಲ್ಲಿನ ಅನರ್ಥ ಪರಿಹಾರಕ್ಕೆ ದಾರಿ ತೋರಿಸುವ ಗ್ರಂಥ.

ನಾವು ನಮ್ಮ ಬದುಕಿನಲ್ಲಿ ಮುಖ್ಯವಾಗಿ ತಿಳಿಯಬೇಕಾದ ವಿಚಾರ ಅಂದರೆ: 'ನಮ್ಮ ಬದುಕನ್ನು ಭಗವಂತನ ಜೊತೆಗೆ ಶ್ರುತಿಗೂಡಿಸಿಕೊಂಡು ಬದುಕುವುದು'. ಇದು ಅರಿಯದಿದ್ದಾಗ ನಾವು ಅನರ್ಥವನ್ನು ಆಹ್ವಾನಿಸಬೇಕಾಗುತ್ತದೆ. ಇಂತಹ ಮೂಲಭೂತ ವಿಷಯವನ್ನೂ ಮರೆತು ಬದುಕುತ್ತಿರುವ ಜನರಿಗೆ ಸತ್ಯವನ್ನು ತಿಳಿಸುವುದಕ್ಕೋಸ್ಕರ ವ್ಯಾಸರು ಇಂತಹ ಸಾತ್ವತಸಂಹಿತೆಯನ್ನು ರಚಿಸಿದರು.

**ಯಸ್ಯಾಂ ವೈ ಶ್ರೂಯಮಾಣಾಯಾಂ ಕೃಷ್ಣೇ ಪರಮಪೂರುಷೇ ।**
**ಭಕ್ತಿರುತ್ಪದ್ಯತೇ ಪುಂಸಾಂ ಶೋಕಮೋಹಭಯಾಪಹಾ ॥೭॥**

ಸೂತರು ಹೇಳುತ್ತಾರೆ: ವ್ಯಾಸರು ರಚಿಸಿರುವ ಈ ಭಾಗವತವನ್ನು ಕೇಳುತ್ತಿದ್ದರೆ ನಮ್ಮಲ್ಲಿರುವ ಎಲ್ಲಾ ಅಜ್ಞಾನಗಳು ಮರೆಯಾಗಿ, ಭಗವಂತನಲ್ಲಿ ಭಕ್ತಿ ಗಾಢವಾಗುತ್ತದೆ. ಭಾಗವತ ಕೇಳಿದಾಗ ಭಕ್ತಿ ಸಾಗರದಲ್ಲಿ ತೇಲಿದ ಅನುಭವವಾಗುತ್ತದೆ. ಅಂತಹ ಅಪೂರ್ವವಾದ ಭಾಗವತ ಮಹಾಪುರಾಣವನ್ನು ವ್ಯಾಸರು ರಚನೆ ಮಾಡಿದರು

**ಸ ಸಂಹಿತಾಂ ಭಾಗವತೀಂ ಕೃತ್ವಾಽನುಕ್ರಮ್ಯ ಚಾತ್ಮಜಮ್ ।**
**ಶುಕಮಧ್ಯಾಪಯಾಮಾಸ ನಿವೃತ್ತಿನಿರತಂ ಮುನಿಮ್ ॥೮॥**

ತನ್ನ ಮಾನಸ ರಚನೆಯಾದ ಭಾಗವತವನ್ನು ಲೋಕಕ್ಕೆ ನೀಡುವುದಕ್ಕಾಗಿ ವ್ಯಾಸರು ಅದನ್ನು ನಿವೃತ್ತಿನಿರತ ತನ್ನ ಮಗನಾದ ಶುಕಾಚಾರ್ಯರಿಗೆ ಉಪದೇಶ ಮಾಡುತ್ತಾರೆ.

**ಶೌನಕ ಉವಾಚ-**

ಸ ವೈ ನಿವೃತ್ತಿನಿರತಃ ಸರ್ವತ್ರೋಪೇಕ್ಷಕೋ ಮುನಿಃ ।
ಕಸ್ಯ ವಾ ಬೃಹತೀಮೇತಾಮಾತ್ಮಾರಾಮಃ ಸಮಭ್ಯಸತ್ ॥೯॥

ವೇದವ್ಯಾಸರು ಶುಕಾಚಾರ್ಯರಿಗೆ ಭಾಗವತ ಉಪದೇಶ ಮಾಡಿದರು ಎನ್ನುವ ಮಾತನ್ನು ಕೇಳಿ ಶೌನಕಾದಿಗಳು ಕೇಳುತ್ತಾರೆ: "ಶುಕಾಚಾರ್ಯರು ಎಲ್ಲವನ್ನೂ ತೊರೆದುಹೋದವರು. ಅವರು ಎಲ್ಲವನ್ನೂ ಉಪೇಕ್ಷೆ ಮಾಡುವವರು. ಅಂತಹ ಸರ್ವಪರಿತ್ಯಾಗಿ ಹೇಗೆ ಭಾಗವತವೆಂಬ ಮಹಾಸಂಹಿತೆಯನ್ನು ಕೇಳಬೇಕೆಂದು ಇಚ್ಛೆಪಟ್ಟು ಬಂದು ಕೇಳಿದರು?" ಎಂದು. ಒಬ್ಬ ಆತ್ಮಾನಂದವನ್ನು ಒಳಗಿನಿಂದ ಅನುಭವಿಸಬಲ್ಲ ಯೋಗಿಗೆ ಮತ್ತೆ ಗ್ರಂಥ ಓದುವ ಅವಶ್ಯಕತೆ ಏನಿದೆ? ಅಂತರಂಗದಲ್ಲಿ ಸರ್ವಾನಂದವಿರುವಾಗ, ಹೊರಗಿನಿಂದ ಆನಂದ ಪಡೆಯುವ ಪ್ರಯತ್ನ ಏಕೆ? ಇದು ಶೌನಕರ ಪ್ರಶ್ನೆ.

**ಸೂತ ಉವಾಚ-**

ಆತ್ಮಾರಾಮಾಶ್ಚ ಮುನಯೋ ನಿರ್ಗ್ರಂಥ್ಯಾ ಅಪ್ಯುರುಕ್ರಮೇ ।
ಕುರ್ವಂತ್ಯಹೈತುಕೀಂ ಭಕ್ತಿಮಿತ್ಥಂಭೂತಗುಣೋ ಹರಿಃ ॥೧೦॥

ಹರೇರ್ಗುಣಾಕ್ಷಿಪ್ತಮತಿರ್ಭಗವಾನ್ ಬಾದರಾಯಣಿಃ ।
ಅಧ್ಯಗಾನ್ಮಹದಾಖ್ಯಾನಂ ನಿತ್ಯಂ ವಿಷ್ಣುಜನಪ್ರಿಯಮ್ ॥೧೧॥

ಶೌನಕರ ಪ್ರಶ್ನೆಗೆ ಉತ್ತರಿಸುತ್ತಾ ಉಗ್ರಶ್ರವಸ್ಸರು ಹೇಳುತ್ತಾರೆ: "ಹೌದು, ಶುಕಾಚಾರ್ಯರು ಎಲ್ಲವನ್ನೂ ತೊರೆದವರು. ಅವರಲ್ಲಿ 'ಬೇಕು' ಎನ್ನುವ ಯಾವುದೇ ಅಪೇಕ್ಷೆ ಇರಲಿಲ್ಲ. ಅಂತಹ ನಿರ್ಗ್ರಂಥ್ಯರವರು. ಅವರಿಗೆ ಭಗವಂತನ ಅನುಭವಕ್ಕಾಗಿ ಹೊರಗಿನಿಂದ ಏನನ್ನೂ ಗ್ರಹಣ ಮಾಡಬೇಕಾಗಿರಲಿಲ್ಲ. ಆದರೆ ಎಂತಹ ನಿವೃತ್ತಿನಿರತ ವ್ಯಕ್ತಿಯಾಗಿದ್ದರೂ ಸಹ, ಅವರಿಗೆ ಭಗವಂತ ಬೇಕು ಎನ್ನುವ ಬಯಕೆ ಇದ್ದೇ ಇರುತ್ತದೆ. ಹರಿಯ ಮಹಿಮೆಯೇ ಅಂತಹದ್ದು. ಗೀತೆಯಲ್ಲಿ ಕೃಷ್ಣ ಹೇಳುವಂತೆ: **ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ । ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥೨-೫೨॥** ಯಾವಾಗ ಭಗವಂತನ ಅನುಭೂತಿ ನಮಗಾಗುತ್ತದೋ, ಆಗ 'ಹಿಂದೆ ಅಧ್ಯಯನ ಮಾಡಿರುವುದು, ಹಾಗೂ ಮುಂದೆ ಅಧ್ಯಯನ ಮಾಡುವುದು' ಎಲ್ಲವೂ ಸಾಫಲ್ಯ(ನಿರ್ವೇದ)ವಾಗುತ್ತದೆ. ಅಪರೋಕ್ಷ ಜ್ಞಾನಿಗಳು ಎಂದರೆ ಅವರು ಎಲ್ಲವನ್ನೂ ತಿಳಿದವರಲ್ಲ. ಅವರಿಗೆ ಅಂತರಂಗದ ಅನುಭವವಾದರೂ ಕೂಡಾ, ಅವರಿಗಿಂತ ಹೆಚ್ಚು ತಿಳಿದವರ ಮಾತಿನಿಂದ ಅವರ ಅಂತರಂಗದ ಬೆಳಕು ಮತ್ತಷ್ಟು ಹೆಚ್ಚುತ್ತದೆ. ಇಲ್ಲಿ ಭಗವಂತನ ಮಹಿಮೆಯನ್ನು ಕೇಳಿ ತಿಳಿದು, ತಮ್ಮ ಅಂತರಂಗದ ಆನಂದದ ಅನುಭವವನ್ನು ವಿಸ್ತರಿಸಿಕೊಳ್ಳುವುದಕ್ಕಾಗಿ, ಶುಕಾಚಾರ್ಯರು ತಂದೆಯಿಂದ ಭಾಗವತ ಉಪದೇಶ ಪಡೆಯುತ್ತಾರೆ.

ಒಬ್ಬ ಜ್ಞಾನಿಯಲ್ಲಿ ಎಷ್ಟೇ ಜ್ಞಾನವಿದ್ದರೂ ಸಹ, ಅದು ಭಗವಂತನೆಂಬ ಮಹಾ ಹರವಿನ ಮುಂದೆ ಒಂದು ಬಿಂದು ಮಾತ್ರ. ಜ್ಞಾನ ಎನ್ನುವುದು ಒಂದು ಸಾಗರವಿದ್ದಂತೆ. ಆ ಸಾಗರದ ಒಂದು ಹನಿಯನ್ನು ಸೇವಿಸಿದರೂ ಕೂಡಾ, ಸಾಗರದ ಸವಿ ತಿಳಿಯುತ್ತದೆ. ಆದರೆ ಎಂದೂ ಪೂರ್ಣ ಸಾಗರವನ್ನು ಪಾನಮಾಡಲು ಯಾರಿಂದಲೂ ಸಾಧ್ಯವಿಲ್ಲ. ಶುಕಾಚಾರ್ಯರು ಆತ್ಮಾರಾಮರು. ಅವರು ಅಂತರಂಗದಲ್ಲಿ ಸದಾ ಭಗವಂತನನ್ನು ಕಾಣಬಲ್ಲವರು. ಭಗವಂತನ ಭಕ್ತಿಗಾಗಿಯೇ ಎಲ್ಲವನ್ನೂ ತೊರೆದವರು. ಹೀಗಿರುವಾಗ ಭಗವಂತನ ಹಿರಿಮೆಯನ್ನು ಹೇಳುವ ಭಾಗವತವನ್ನು ಅವರು ಕೇಳದೇ ಇರುವರೇ? ಶುಕಾಚಾರ್ಯರ ಭಕ್ತಿ ನಮ್ಮ ಭಕ್ತಿಯಂತೆ ಹೈತುಕವಾದದ್ದಲ್ಲ. ಅದು ಸಕಾರಣವಾದ ನಿರ್ವ್ಯಾಜ-ನಿಷ್ಕಾರಣ-ನಿಷ್ಕಪಟ ಭಕ್ತಿ. ಹಾಗಾಗಿ ಅವರು ಭಕ್ತಿಯಿಂದ ಪರವಶರಾಗಿ ಭಾಗವತ ಕೇಳುತ್ತಾರೆ. ಭಗವದ್ಭಕ್ತರಿಗೆ ಹರಿಮಹಿಮೆಯನ್ನು ತಿಳಿಸುವ ಭಗವದ್ಸಂಕಲ್ಪಕ್ಕೆ ಮಾಧ್ಯಮವಾಗುವುದೂ ಅವರ ಇನ್ನೊಂದು ಉದ್ದೇಶವಾಗಿತ್ತು".

ಹೀಗೆ ನಾರದರ ಪ್ರಚೋದನೆಯಿಂದ ವೇದವ್ಯಾಸರು ಭಾಗವತ ರಚನೆ ಮಾಡಿ, ಅದನ್ನು ಶುಕಾಚಾರ್ಯರಿಗೆ ಉಪದೇಶ ಮಾಡಿದರು. ಮುಂದೆ ಈ ಜ್ಞಾನಧಾರೆ ಶುಕಾಚಾರ್ಯರಿಂದ ಪರೀಕ್ಷಿತನಿಗೆ ಉಪದೇಶಿಸಲ್ಪಟ್ಟಿತು. ಈ ಹಿನ್ನೆಲೆಯಲ್ಲಿ ಸೂತರು ಇಲ್ಲಿ ಪರೀಕ್ಷಿತ ರಾಜನ ಜನನಕ್ಕೆ ಸಂಬಂಧಿಸಿದ ಪೂರ್ವ ಕಥೆಯನ್ನು ಶೌನಕಾದಿಗಳಿಗೆ ವಿವರಿಸುವುದನ್ನು ಮುಂದೆ ಕಾಣುತ್ತೇವೆ.

## ಪರೀಕ್ಷಿತ ರಾಜನ ಕಥೆ

## ಅಶ್ವತ್ಥಾಮನಿಂದ ದ್ರೌಪದಿಯ ಐದು ಮಂದಿ ಮಕ್ಕಳ ಹತ್ಯೆ

ಪರೀಕ್ಷಿತೋಽಥ ರಾಜರ್ಷೇರ್ಜನ್ಮಕರ್ಮವಿಲಾಪನಮ್ ।
ಸಂಸ್ಥಾಂ ಚ ಪಾಂಡುಪುತ್ರಾಣಾಂ ವಕ್ಷ್ಯೇ ಕೃಷ್ಣಕಥೋದಯಾಮ್ ॥೧೨॥

ಯದಾ ಮೃಧೇ ಕೌರವಸೃಂಜಯಾನಾಂ ವೀರೇಷ್ವಥೋ ವೀರಗತಿಂ ಗತೇಷು ।
ವೃಕೋದರಾವಿದ್ಧಗದಾಭಿಮರ್ಶ ಭಗ್ನೋರುದಂಡೇ ಧೃತರಾಷ್ಟ್ರಪುತ್ರೇ ॥೧೩॥

ಭರ್ತುಃ ಪ್ರಿಯಂ ದ್ರೌಣಿರಿತಿ ಸ್ಮ ಪಶ್ಯನ್ ಕೃಷ್ಣಾಸುತಾನಾಂ ಸ್ವಪತಾಂ ಶಿರಾಂಸಿ ।
ಉಪಾಹರದ್ ವಿಪ್ರಿಯಮೇತದಸ್ಯ ಜುಗುಪ್ಸಿತಂ ಕರ್ಮ ವಿಗರ್ಹಯಂತೀ ॥೧೪॥

ಮಹಾಭಾರತ ಯುದ್ಧದ ಕೊನೆಯ ದಿನ, ಭೀಮಸೇನ ದುರ್ಯೋಧನನ ತೊಡೆಯನ್ನು ಮುರಿಯುವುದರೊಂದಿಗೆ ಹದಿನೆಂಟು ದಿನಗಳ ಯುದ್ಧ ಕೊನೆಗೊಳ್ಳುತ್ತದೆ. ಈ ರೀತಿ ತೊಡೆಮುರಿದು ಬಿದ್ದ ದುರ್ಯೋಧನನನ್ನು ಕಾಣಲು ಅಶ್ವತ್ಥಾಮಾಚಾರ್ಯರು ಹೋಗುತ್ತಾರೆ. ಆಗ ದುರ್ಯೋಧನ ಅಶ್ವತ್ಥಾಮಾಚಾರ್ಯರಲ್ಲಿ ಪ್ರಾರ್ಥಿಸಿಕೊಳ್ಳುತ್ತಾನೆ: "ನಾನು ಸಾಮ್ರಾಟನಾಗಬೇಕೆಂದು ಕನಸು ಕಂಡೆ. ಆದರೆ ನನ್ನ ಆಸೆ ಈಡೇರಲಿಲ್ಲ. ಆದರೂ ಇನ್ನೂ ಒಂದು ಆಸೆ ನನ್ನದು. ಪಾಂಡವರ ವಂಶ ಈ ದೇಶವನ್ನಾಳಬಾರದು. ಅವರ ವಂಶ ನಿರ್ವಂಶವಾಯಿತು ಎನ್ನುವ ಸುದ್ದಿ ಕೇಳಿ ನಾನು ಪ್ರಾಣಬಿಡಬೇಕು" ಎಂದು.

ಇತ್ತ ಪಾಂಡವ ಶಿಬಿರದಲ್ಲಿ ಯುದ್ಧಮುಗಿದ ರಾತ್ರಿಯಾಗಿರುವುದರಿಂದ ಎಲ್ಲರೂ ಗಾಢ ನಿದ್ದೆಯಲ್ಲಿದ್ದಾರೆ. ಕೃಷ್ಣ ಪಾಂಡವರನ್ನು ಶಿಬಿರದಿಂದ ದೂರ ಕರೆದುಕೊಂಡು ಹೋಗಿರುವ ಸಂದರ್ಭದಲ್ಲಿ ಅಶ್ವತ್ಥಾಮಾಚಾರ್ಯರು ಮೂರ್ಖ ದುರ್ಯೋಧನನ ಅಭಿಲಾಷೆಯನ್ನು ಈಡೇರಿಸುವುದಕ್ಕಾಗಿ ಪಾಂಡವ ಶಿಬಿರಕ್ಕೆ ನುಗ್ಗಿ, ಅಲ್ಲಿ ಮಲಗಿ ನಿದ್ರಿಸುತ್ತಿದ್ದ ಐದು ಮಂದಿ ದ್ರೌಪದಿಯ ಮಕ್ಕಳ ತಲೆ ಕಡಿಯುತ್ತಾನೆ. ಅವರೆಲ್ಲರೂ ಸುಮಾರು ಹದಿನಾಲ್ಕರಿಂದ ಹದಿನೆಂಟು ವರ್ಷ ವಯಸ್ಸಿನ ಹಸುಳೆಗಳು. ಇಂತಹ ಘೋರ ಪಾತಕ ಅಶ್ವತ್ಥಾಮನಿಗೆ ಹಿತಕರವಾಗಿರಲಿಲ್ಲ. ಅತ್ತ ದುರ್ಯೋಧನ ಈ ಹತ್ಯೆ ತನಗೆ ಹಿತವೆಂದು ಭಾವಿಸಿದ್ದರೂ ಕೂಡಾ, ಆ ನೀಚ ಕೃತ್ಯ ಅವನಿಗೂ ಹಿತವನ್ನು ತರುವಂತಹದ್ದಾಗಿರಲಿಲ್ಲ.
ಹೀಗೆ ನಿದ್ರಿಸುತ್ತಿದ್ದ ಮಕ್ಕಳ ಕಗ್ಗೊಲೆ ಮಾಡಿದ್ದಷ್ಟೇ ಅಲ್ಲದೆ, ದೃಷ್ಟದ್ಯುಮ್ನನನ್ನು ಕತ್ತು ಹಿಸುಕಿ ಸಾಯಿಸುತ್ತಾನೆ ಅಶ್ವತ್ಥಾಮ. ಸಾಲದೆನ್ನುವುದಕ್ಕೆ ಇಡೀ ಪಾಂಡವ ಶಿಬಿರಕ್ಕೆ ಬೆಂಕಿಯಿಟ್ಟು ಅಲ್ಲಿರುವ ಎಲ್ಲಾ ದಾಸ ದಾಸಿ ಮತ್ತು ಸೈನಿಕರನ್ನು ಜೀವಂತ ಧ್ವಂಸ ಮಾಡುತ್ತಾನೆ. ಈ ಸಂದರ್ಭದಲ್ಲಿ ಯಾರೂ ತಪ್ಪಿಸಿಕೊಂಡು ಹೋಗದಂತೆ ಬಾಗಿಲಲ್ಲಿ ಕೃಪಾಚಾರ್ಯರನ್ನು ಕಾವಲಿಗೆ ನಿಲ್ಲಿಸಿದ್ದ ಅಶ್ವತ್ಥಾಮ! ಎಂತಹ ಹೇಯ ಕೃತ್ಯ!

**ಮಾತಾ ಶಿಶೂನಾಂ ನಿಧನಂ ಸುತಾನಾಂ ನಿಶಮ್ಯ ಘೋರಂ ಪರಿತಪ್ಯಮಾನಾ ।**
**ತದಾಽರುದದ್ ಬಾಷ್ಪಕಲಾಕುಲಾಕ್ಷೀ ತಾಂ ಸಾಂತ್ವಯನ್ನಾಹ ಕಿರೀಟಮಾಲೀ ॥೧೫॥**

ಇಂತಹ ಸಂದರ್ಭದಲ್ಲಿ ದಾಸವರ್ಗದ ಒಬ್ಬ ಸೇವಕ ಬೆಂಕಿಯ ಜ್ವಾಲೆಯಿಂದ ಹಾಗೂ ಕೃಪಾಚಾರ್ಯರ ದೃಷ್ಟಿಯಿಂದ ತಪ್ಪಿಸಿಕೊಂಡು ಬಂದು ಪಾಂಡವರಿಗೆ ಸುದ್ದಿ ಮುಟ್ಟಿಸುವಲ್ಲಿ ಸಫಲನಾಗುತ್ತಾನೆ. ಈ ಭಯಾನಕ ಕೃತ್ಯದ ಸುದ್ದಿ ಕೇಳಿ ದ್ರೌಪದಿಗೆ ತಡೆದು ಕೊಳ್ಳಲಾಗುವುದಿಲ್ಲ. ಆಕೆ ಕಣ್ಣೀರಿಡುತ್ತಾಳೆ. ದ್ರೌಪದಿಯ ಕಣ್ಣೀರನ್ನು ಕಂಡ ಅರ್ಜುನ ಆಕೆಯನ್ನು ಸಂತೈಸುತ್ತಾನೆ. "ನಡೆದ ಘಟನೆಯ ಬಗ್ಗೆ ದುಃಖಿಸಬೇಡ. ನಿನಗೆ ಅನ್ಯಾಯ ಮಾಡಿದ ಆ ಅಶ್ವತ್ಥಾಮನಿಗೆ ತಕ್ಕ ಶಾಸ್ತಿ ಮಾಡುವುದು ನನ್ನ ಕರ್ತವ್ಯ" ಎನ್ನುತ್ತಾನೆ ಅರ್ಜುನ. ಕಂಬನಿ ಸುರಿಸುವುದರಿಂದ ಕಳೆದುಕೊಂಡಿದ್ದನ್ನು ಮರಳಿ ಪಡೆಯಲು ಸಾಧ್ಯವಿಲ್ಲ ಎನ್ನುವುದು ನಿಜವಾದರೂ ಕೂಡಾ, ಕಂಬನಿ ಸುರಿಸುವುದು ಪೂರ್ತಿ ವ್ಯರ್ಥವಲ್ಲ. ಕಂಬನಿ ಹರಿದಂತೆ ನಮ್ಮ ಮನಸ್ಸು ಹಗುರವಾಗುತ್ತದೆ. ಕಣ್ಣೀರನ್ನು ತಡೆದರೆ ಒಳಗಿನ ವೇದನೆ ಸ್ಫೋಟವಾಗುವ ಸಾಧ್ಯತೆ ಹೆಚ್ಚು. ಇಲ್ಲಿ ಅರ್ಜುನ ದ್ರೌಪದಿಯಲ್ಲಿ 'ಕಣ್ಣೀರು ಸುರಿಸಬೇಡ' ಎಂದು ಹೇಳುವುದಕ್ಕೆ ಮುಖ್ಯವಾದ ಒಂದು ಕಾರಣವಿದೆ. ಆತನಿಗೆ ದ್ರೌಪದಿಯ ಕಣ್ಣೀರಿನ ಮಹತ್ವ ತಿಳಿದಿತ್ತು. ಹಿಂದೆ ಕೃಷ್ಣ ಸಂಧಾನಕ್ಕೆಂದು ಹೊರಟಾಗ ದ್ರೌಪದಿ ಕಣ್ಣೀರು ಸುರಿಸಿದ್ದಳು. ಆಗ ಕೃಷ್ಣ ಹೇಳಿದ್ದ: "ನೀನು ಕಣ್ಣೀರು ಸುರಿಸಬೇಡ, ನಿನ್ನ ಕಣ್ಣೀರಿನ ಪ್ರತಿ ಹನಿಗೂ ಸಾವಿರ ಸಾವಿರ ತಲೆ ಉರುಳುತ್ತದೆ" ಎಂದು. ಅದರಂತೇ ಮಹಾಭಾರತ ಯುದ್ಧದಲ್ಲಿ ಹದಿನೆಂಟು ಅಕ್ಷೋಹಿಣಿ ಸೈನ್ಯ ನಾಶವಾಗಿತ್ತು. ಅದಕ್ಕಾಗಿ "ಅಳಬೇಡ, ಕಣ್ಣೀರನ್ನು ಒರೆಸಿಕೋ, ದುಃಖವನ್ನು ತಡೆದುಕೋ, ನಿನಗಾಗಿರುವ ಅನ್ಯಾಯಕ್ಕೆ ತಕ್ಕ ಪ್ರತಿಕಾರ ನಾನು ಮಾಡುತ್ತೇನೆ" ಎನ್ನುತ್ತಾನೆ ಅರ್ಜುನ.

**ತನ್ಮಾ ಶುಚಸ್ತೇ ನಿವೃಜಾಶ್ರು ಭದ್ರೇ ಯದ್ ಬ್ರಹ್ಮಬಂಧೋಃ ಶಿರ ಆತತಾಯಿನಃ ।**
**ಗಾಂಡೀವಮುಕ್ತೈರ್ವಿಶಿಖೈರುಪಾಹರೇ ತ್ವಾಕ್ರಮ್ಯ ತತ್ ಸ್ನಾಸ್ಯಸಿ ನೇತ್ರಜೈರ್ಜಲೈಃ ॥೧೬॥**

ಸಾಮಾನ್ಯವಾಗಿ "ಸಮಾದಾನ ಮಾಡಿಕೋ" ಎನ್ನುವುದು ಸಾತ್ವಿಕ ವಿಧಾನ. ಆದರೆ ಕ್ಷತ್ರಿಯರಿಗೆ ಸೇಡು ಪ್ರಧಾನವಾಗುತ್ತದೆ. ಇಲ್ಲಿ ಅರ್ಜುನ ಹೇಳುತ್ತಾನೆ: "ನಿನ್ನ ಮಕ್ಕಳ ತಲೆಯನ್ನು ಯಾರು ಕೆಡವಿದನೋ, ಅವನ ತಲೆಯನ್ನು ನಿನ್ನ ಕಾಲ ಬುಡಕ್ಕೆ ಉಡುಗೊರೆಯಾಗಿ ತಂದೊಪ್ಪಿಸುತ್ತೇನೆ" ಎಂದು.

ಈ ಶ್ಲೋಕದಲ್ಲಿ ಅರ್ಜುನ ಅಶ್ವತ್ಥಾಮನನ್ನು ಬ್ರಹ್ಮಬಂಧುಃ ಮತ್ತು ಆತತಾಯಿನಃ ಎನ್ನುವ ಎರಡು ವಿಶೇಷಣ ಬಳಸಿ ಸಂಬೋಧಿಸಿರುವುದನ್ನು ಕಾಣುತ್ತೇವೆ. ಅಶ್ವತ್ಥಾಮಾಚಾರ್ಯರು ಶಾಸ್ತ್ರಪಾರಂಗತ ಬ್ರಾಹ್ಮಣರಾಗಿದ್ದರು. ಆದರೆ ಅವರು ಬ್ರಾಹ್ಮಣ ಧರ್ಮವನ್ನಾಚರಿಸದೇ, ಬ್ರಾಹ್ಮಣಧರ್ಮಕ್ಕೆ ಅಪಚಾರವೆಸಗಿದರು. ಚಿತ್ತ ಸಮತೋಲನ ಇಲ್ಲದ ಚಪಲಚಿತ್ತನಾಗಿದ್ದ ನಡೆ ಅವರದ್ದಾಗಿತ್ತು. ಅಶ್ವತ್ಥಾಮಾಚಾರ್ಯರ ಪಾತ್ರವೇ ಅಂತಹದ್ದು. ಭಗವಂತನನ್ನು ವಿರೋಧಿಸುವ ಪಾತ್ರವದು. ದುಡುಕಿನ ವರ್ತನೆಯಿಂದಾಗುವ ಅನಾಹುತವನ್ನು ತೋರಿಸುವ ಶಿವನ ಅವತಾರವದು. ಅವರ ದುಡುಕಿನ ವರ್ತನೆ ಮತ್ತು ಅದರಿಂದಾಗುವ ಅನಾಹುತವನ್ನು ಭಾರತದಲ್ಲಿ ಅನೇಕ ಕಡೆ ಕಾಣುತ್ತೇವೆ. ತನ್ನ ತಂದೆ ಸತ್ತರೆಂಬ ಸುದ್ಧಿ ತಿಳಿದಾಗ, ಹಿಂದೂ ಮುಂದೂ ನೋಡದೆ, ಇಡೀ ಪಾಂಡವ ಸೇನೆಯನ್ನು ಸುಟ್ಟುಬಿಡಬೇಕೆಂದು ನಾರಾಯಣಾಸ್ತ್ರ ಪ್ರಯೋಗಿಸಿದ್ದರು ಅಶ್ವತ್ಥಾಮರು. ಆ ಸಮಯದಲ್ಲಿ ಶ್ರೀಕೃಷ್ಣ ಎಲ್ಲಾ ಸೈನಿಕರಲ್ಲಿ ಶಸ್ತ್ರವನ್ನು ಕೆಳಗಿಟ್ಟು ಕೈಮುಗಿದು ನಿಲ್ಲುವಂತೆ ಹೇಳಿದ್ದ ಮತ್ತು ಇದರಿಂದಾಗಿ ಅಲ್ಲಿ ಒಬ್ಬರೂ ಸಾಯಲಿಲ್ಲ. ಈ ರೀತಿ ದುಡುಕಿನ ನಿರ್ಧಾರದಿಂದ ಅನಾಹುತವನ್ನು ತಂದಿಟ್ಟುಕೊಳ್ಳುವುದನ್ನು ತೋರಿಸುವ ವಿಚಿತ್ರ ಪಾತ್ರ ಅಶ್ವತ್ಥಾಮನದು .

ಆತತಾಯಿಗಳು ಎಂದರೆ ಸಮಾಜ ದ್ರೋಹಿಗಳು. ಬೆಂಕಿ ಹಾಕಿ ಜೀವಂತ ಸುಡುವುದು, ವಿಷ ಹಾಕಿ ಕೊಲ್ಲುವುದು, ದರೋಡೆ ಮಾಡುವುದು, ಪರಪತ್ನಿ ಅಪಹಾರ ಅಥವಾ ಮಾನಭಂಗ, ಇತ್ಯಾದಿ ಕಾರ್ಯವೆಸಗುವವರು ಆತತಾಯಿಗಳು. ದುರ್ಯೋಧನ ಈ ಎಲ್ಲಾ ಕಾರ್ಯವನ್ನೂ ಮಾಡಿದ್ದ. ಇಂತಹ ಆತತಾಯಿಗಳನ್ನು ಕಂಡಲ್ಲಿ ಸಾಯಿಸಿ ಎನ್ನುತ್ತದೆ ಶಾಸ್ತ್ರ. ಅದಕ್ಕಾಗಿ ಇಲ್ಲಿ ಅರ್ಜುನ: "ಅಶ್ವತ್ಥಾಮಾಚಾರ್ಯರ ತಲೆಯನ್ನು ನಿನ್ನ ಪಾದದಲ್ಲಿ ತಂದಿಡುತ್ತೇನೆ" ಎಂದಿದ್ದಾನೆ. "ನನ್ನಲ್ಲಿ ಗಾಂಢೀವ ಧನುಸ್ಸಿದೆ. ಅದರಿಂದ ಅಶ್ವತ್ಥಾಮನನ್ನು ಮಣಿಸಿ, ಆತನ ತಲೆಯನ್ನು ನಿನ್ನ ಪಾದಕ್ಕರ್ಪಿಸುತ್ತೇನೆ. ಅವನ ತಲೆಯನ್ನು ಕಂಡಮೇಲೆ ಬೇಕಿದ್ದರೆ, ನೀನು ನಿನ್ನ ಕಣ್ಣೀರಿನಿಂದ ನಿನ್ನನ್ನು ತೊಯಿಸಿಕೋ. ಮೊದಲು ಸೇಡು, ಆಮೇಲೆ ದುಃಖಾಪಶಮನ" ಎಂದ ಅರ್ಜುನ, ಕೃಷ್ಣನೊಂದಿಗೆ ಅಶ್ವತ್ಥಾಮಾಚಾರ್ಯರನ್ನು ಹುಡುಕಿಕೊಂಡು ಹೋಗುತ್ತಾನೆ.

ಅರ್ಜುನ ಅಶ್ವತ್ಥಾಮ ಅಡಗಿರುವ ಸ್ಥಳವನ್ನು ಗುರುತಿಸಿದಾಗ "ತನಗೆ ಇನ್ನು ಉಳಿಗಾಲವಿಲ್ಲ" ಎನ್ನುವುದನ್ನು ಮನಗಂಡ ಅಶ್ವತ್ಥಾಮ, ಮತ್ತೆ ಇನ್ನೊಂದು ದುಡುಕಿನ ಕೆಲಸವನ್ನು ಮಾಡುತ್ತಾನೆ. ಅದೇ ಬ್ರಹ್ಮಾಸ್ತ್ರ ಪ್ರಯೋಗ! ಬ್ರಹ್ಮಾಸ್ತ್ರ ಅತ್ಯಂತ ಭಯಾನಕವಾದ ಅಸ್ತ್ರ. ಇದನ್ನು ಯಾರು ಪ್ರಯೋಗ ಮಾಡಿದನೋ ಅವನೇ ಪ್ರಾರ್ಥನೆ ಮಾಡಿ ಉಪಸಂಹಾರ ಮಾಡಬೇಕೇ ಹೊರತು, ಇನ್ನೊಂದು ಅಸ್ತ್ರದಿಂದ ಅದನ್ನು ತಡೆಯಲು ಸಾಧ್ಯವಿಲ್ಲ. ಪಂಚರಾತ್ರದಲ್ಲಿ ಬರುವ ಅಹಿರ್ಬುಧ್ನ್ಯ ಸಂಹಿತೆಯಲ್ಲಿ ಬ್ರಹ್ಮಾಸ್ತ್ರದ ವಿವರಗಳಿವೆ. ಅಲ್ಲಿ ಹೇಳುವಂತೆ ಬ್ರಹ್ಮಾಸ್ತ್ರದ ಮಂತ್ರ ಬ್ರಹ್ಮಗಾಯತ್ರಿ. "ಗಾಯತ್ರಿ ಮಂತ್ರಸ್ಯ ಬ್ರಹ್ಮಾ ಋಷಿಃ, ನಾರಾಯಣೋ ದೇವತಾ". ಇದನ್ನು ಗಾಯತ್ರಿ ಸಿದ್ಧಿ ಇಲ್ಲದೇ ಪ್ರಯೋಗಿಸಲು ಸಾಧ್ಯವಿಲ್ಲ.

ಎಲ್ಲಾ ಮಂತ್ರಗಳಿಗೆ ಮಾತೃ ಸ್ಥಾನದಲ್ಲಿದೆ ಗಾಯತ್ರಿ. ಈ ಮಂತ್ರ ಮಹಾ ಶಕ್ತಿಶಾಲಿ. ಅದನ್ನು ನಮ್ಮ ರಕ್ಷೆಗಾಗಿ ಬಳಸಬಹುದು ಅಥವಾ ನಾಶಕ್ಕಾಗಿ ಕೂಡಾ! ಹಿಂದಿನ ಕಾಲದಲ್ಲಿ ಅಸ್ತ್ರವಿದ್ಯೆ ಬಳಕೆಯಲ್ಲಿತ್ತು. ಶಸ್ತ್ರ ಎಂದರೆ ಒಂದು ಆಯುಧವನ್ನು ನೇರವಾಗಿ ಬಳಸುವುದು. ಆದರೆ ಅಸ್ತ್ರ ಎಂದರೆ ಯಾವುದೇ ಒಂದು ವಸ್ತುವಿಗೆ ವಿಶಿಷ್ಠ ಮಂತ್ರವನ್ನು ಅಭಿಮಂತ್ರಣ ಮಾಡಿ ಪ್ರಯೋಗ ಮಾಡುವುದು. ಹೀಗಾಗಿ ಮುಖ್ಯವಾಗಿ ಅಸ್ತ್ರ ವಿದ್ಯೆ ಬ್ರಾಹ್ಮಣರ ಕೈಯಲ್ಲಿತ್ತು ಮತ್ತು

ಅವರಿಂದ ಅದನ್ನು ಕ್ಷತ್ರಿಯರು ಕಲಿಯುತ್ತಿದ್ದರು. ಬ್ರಹ್ಮಾಸ್ತ್ರ ಮಹಾ ಭಯಂಕರವಾದ ಅಸ್ತ್ರವಾಗಿರುವುದರಿಂದ ಅದರ ಪ್ರಯೋಗ ನಿಷೇಧಿಸಿದ್ದರು. ತೀರಾ ಅನಿವಾರ್ಯವಲ್ಲದ ಹೊರತು ಅದನ್ನು ಪ್ರಯೋಗಿಸುವಂತಿರಲಿಲ್ಲ. ದ್ರೋಣಾಚಾರ್ಯರು ಮೊದಲು ಈ ವಿದ್ಯೆಯನ್ನು ಅಶ್ವತ್ಥಾಮನಿಗೆ ಹೇಳದೇ, ಅರ್ಜುನನಿಗೆ ಹೇಳಿ ಕೊಟ್ಟಿದ್ದರು. ಇದಕ್ಕೆ ಕಾರಣ ಅವರಿಗೆ ತನ್ನ ಮಗನ ಚಪಲ ಬುದ್ಧಿಯ ಅರಿವಿತ್ತು. ಆದರೆ ಅರ್ಜುನನಿಗೆ ಹೇಳಿದುದರಿಂದ ತನಗೂ ಹೇಳಿಕೊಡಬೇಕು ಎಂದು ಆತ ಹಠತೊಟ್ಟದ್ದರಿಂದ, ಆತನಿಗೆ ಬ್ರಹ್ಮಾಸ್ತ್ರ ಪ್ರಯೋಗವನ್ನು ಉಪದೇಶಿಸಿದರು. ಆದರೆ ಉಪಸಂಹಾರ ಹೇಳಿಕೊಡಲಿಲ್ಲ. ಅಸ್ತ್ರವನ್ನು ಹಿಂದೆ ಪಡೆಯಲು ತಿಳಿಯದೇ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವಂತಿಲ್ಲ. ಆದರೆ ಇಲ್ಲಿ ಅಶ್ವತ್ಥಾಮರು ಬ್ರಹ್ಮಾಸ್ತ್ರವನ್ನು ಹಿಂದೆ ಪಡೆಯಲು ತಿಳಿಯದಿದ್ದರೂ ಕೂಡಾ, ಅದನ್ನು ಪ್ರಯೋಗಿಸಿದರು! ಇದು ಅವರು ತಮ್ಮ ಜೀವನದಲ್ಲಿ ಮಾಡಿದ ಅತ್ಯಂತ ದೊಡ್ಡ ದುಡುಕು.

## ಅಶ್ವತ್ಥಾಮ ನಿಗ್ರಹ

**ಅಥೋಪಸ್ಪೃಶ್ಯ ಸಲಿಲಂ ಸಂದಧೇ ತತ್ ಸಮಾಹಿತಃ ।**
**ಅಜಾನನ್ನಪಿ ಸಂಹಾರಂ ಪ್ರಾಣಕೃಚ್ಛ್ರ ಉಪಸ್ಥಿತೇ ॥೨೦॥**

**ತತಃ ಪ್ರಾದುಷ್ಕೃತಂ ತೇಜಃ ಪ್ರಚಂಡಂ ಸರ್ವತೋದಿಶಮ್ ।**
**ಪ್ರಾಪತತ್ ತದಭಿಪ್ರೇಕ್ಷ್ಯ ವಿಷ್ಣುಂ ಜಿಷ್ಣುರುವಾಚ ಹ ॥೨೧॥**

ಒಂದು ಅಸ್ತ್ರ ಪ್ರಯೋಗಮಾಡಬೇಕಾದರೆ ಮೊದಲು ಆ ಅಸ್ತ್ರದ ಹಿಂದಿನ 'ಮಂತ್ರದ ಅಭಿಮಾನಿ ದೇವತೆ' ಮನಸ್ಸಲ್ಲಿ ನೆಲೆಗೊಳ್ಳಬೇಕು. ಇದಕ್ಕೆ ಮನಶುದ್ಧಿ ಮತ್ತು ಏಕಾಗ್ರತೆ ಬಹಳ ಮುಖ್ಯ. ಹಿಂದಿನವರು ಯುದ್ಧರಂಗದಲ್ಲೂ ಕೂಡಾ ಅಂತಹ ಏಕಾಗ್ರತೆ ಸಾಧಿಸುತ್ತಿದ್ದರು. ಇಲ್ಲಿ ಅಶ್ವತ್ಥಾಮರು ಪ್ರಾಣಾಯಾಮದಿಂದ ತಮ್ಮ ಮನಸ್ಸನ್ನು ಮಂತ್ರದಲ್ಲಿ ನೆಲೆಗೊಳಿಸಿ, ಬ್ರಹ್ಮಾಸ್ತ್ರವನ್ನು ಸಂಧಾನ ಮಾಡಿ ಪ್ರಯೋಗ ಮಾಡುತ್ತಾರೆ. ಕೃಷ್ಣಾರ್ಜುನರು ಬೆನ್ನಟ್ಟಿ ಬರುವುದನ್ನು ಕಂಡು, ದಿಕ್ಕು ತೋಚದೆ ದುಡುಕಿನಿಂದ ಮಾಡಿದ ಇನ್ನೊಂದು ಹೇಯ ಕೃತ್ಯವಿದು.
ಅಶ್ವತ್ಥಾಮರು ಬ್ರಹ್ಮಾಸ್ತ್ರ ಪ್ರಯೋಗಿಸುತ್ತಿದ್ದಂತೆಯೇ ಆ ಬ್ರಹ್ಮಾಸ್ತ್ರ ಆಕಾಶದಲ್ಲಿ, ಇಡೀ ಪ್ರಪಂಚವನ್ನು ಸುಡಬಲ್ಲ ಮಹಾಜ್ವಾಲೆಯಾಗಿ ಕಾಣಿಸಿತು. ಇಂತಹ ಭಯಂಕರ ಬೆಂಕಿಯ ಉಂಡೆ ಎಲ್ಲಾ ಕಡೆಯಿಂದಲೂ ತನ್ನತ್ತ ಬರುವುದನ್ನು ಕಂಡ 'ಗೆಲ್ಲಬಲ್ಲ' ಅರ್ಜುನ, ಗೆಲ್ಲಲಾರದೆ, ಗಾಬರಿಯಿಂದ ವಿಷ್ಣುವಿನಲ್ಲಿ(ಕೃಷ್ಣನಲ್ಲಿ) ಈ ಜ್ವಾಲೆಯ ಮೂಲದ ಬಗ್ಗೆ ಕೇಳುತ್ತಾನೆ.

**ಅರ್ಜುನ ಉವಾಚ-**

**ಕೃಷ್ಣ ಕೃಷ್ಣ ಮಹಾಬಾಹೋ ಭಕ್ತಾನಾಮಭಯಂಕರ ।**
**ತ್ವಮೇಕೋ ದಹ್ಯಮಾನಾನಾಮಪವರ್ಗೋಽಸಿ ಸಂಸೃತೇಃ ॥೨೨॥**

ಅರ್ಜುನ ಗಾಬರಿಯಿಂದ ಹೇಳುತ್ತಾನೆ: ಕೃಷ್ಣ-ಕೃಷ್ಣ, ಮಹಾಬಾಹೋ. ನಾನು ಭಯಗ್ರಸ್ಥನಾಗಿದ್ದೇನೆ. ಏನಿದು? ಅಶ್ವತ್ಥಾಮನನ್ನು ಸೆರೆಹಿಡೆಯಬೇಕು ಎಂದು ಬಂದಾಗ ನನ್ನ ಮೇಲೆರಗುತ್ತಿರುವ ಈ ಬೆಂಕಿಯ ಜ್ವಾಲೆ? ಎಲ್ಲಾ ಕಡೆಯಿಂದ ಬಂದು ನನ್ನನ್ನು ಆವರಿಸುತ್ತಿರುವ ಬೆಂಕಿಯ ಮಧ್ಯೆ ನಾನು ಸಿಕ್ಕಿ ಹಾಕಿಕೊಂಡಿದ್ದೇನೆ. ಎಲ್ಲಿಂದ ಬಂತು ಈ ಬೆಂಕಿ ಎನ್ನುವುದು ತಿಳಿಯದಾಗಿದೆ. ನಂಬಿದವರ ಭಯವನ್ನು ಪರಿಹರಿಸತಕ್ಕಂತಹ ಶಕ್ತಿ ಇರುವುದು ನಿನಗೊಬ್ಬನಿಗೆ. ಸಂಸಾರದ ಬೆಂಕಿಯಲ್ಲಿ ಬೆಂದವರನ್ನೂ ಪಾರುಮಾಡುವ ನೀನು, ಎಲ್ಲಾ ಕಡೆ ವ್ಯಾಪಿಸುತ್ತಿರುವ ಈ ಬೆಂಕಿಯಿಂದ ನನ್ನನ್ನು ರಕ್ಷಿಸು.

ಶ್ರೀಭಗವಾನುವಾಚ-

ವೇತ್ಥೇದಂ ದ್ರೋಣಪುತ್ರಸ್ಯ ಬ್ರಾಹ್ಮಮಸ್ತ್ರಂ ಪ್ರದರ್ಶಿತಮ್ ।
ನೈವಾಸೌ ವೇದ ಸಂಹಾರಂ ಪ್ರಾಣಬಾಧ ಉಪಸ್ಥಿತೇ ॥೨೭॥

ನ ಹ್ಯಸ್ಯಾನ್ಯತಮಂ ಕಿಂಚಿದಸ್ತ್ರಂ ಪ್ರತ್ಯವಕರ್ಷಣಮ್ ।
ಜಹ್ಯಸ್ತ್ರತೇಜ ಉನ್ನದ್ಧಮಸ್ತ್ರಜ್ಞೋ ಹ್ಯಸ್ತ್ರತೇಜಸಾ ॥೨೮॥

ಕೃಷ್ಣ ನಗುತ್ತಾ ಅರ್ಜುನನಲ್ಲಿ ಹೇಳುತ್ತಾನೆ: ಇದು ದ್ರೋಣಪುತ್ರನ ಬ್ರಹ್ಮಾಸ್ತ್ರ ಪ್ರಯೋಗದಿಂದ ಸೃಷ್ಟಿಯಾದ ಬೆಂಕಿಯ ಜ್ವಾಲೆ. ಅಸ್ತ್ರವನ್ನು ಹಿಂದೆ ಪಡೆಯಲು ತಿಳಿಯದಿದ್ದರೂ ಕೂಡಾ, ಅದರ ಪ್ರದರ್ಶನ ಮಾಡುತ್ತಿದ್ದಾನೆ ಅಶ್ವತ್ಥಾಮ. ಬದುಕುವ ಆಸೆಯಿಂದ ದುಡುಕಿನಲ್ಲಿ ಮಾಡಿದ ಪ್ರಯೋಗವಿದು. ಈ ಅಸ್ತ್ರವನ್ನು ಉಪಸಂಹಾರ ಮಾಡುವ ವಿಧಾನ ಆತನಿಗೆ ತಿಳಿದಿಲ್ಲ. ಪ್ರಪಂಚದಲ್ಲಿ ಬ್ರಹ್ಮಾಸ್ತ್ರಕ್ಕೆ ಪ್ರತಿಯಾದ ಇನ್ನೊಂದು ಅಸ್ತ್ರವಿಲ್ಲದೇ ಇರುವುದರಿಂದ, ಇದನ್ನು ಬೇರೆ ಅಸ್ತ್ರದಿಂದ ಉಪಸಂಹಾರ ಮಾಡಲು ಸಾಧ್ಯವಿಲ್ಲ. ಹಾಗಾಗಿ ಬ್ರಹ್ಮಾಸ್ತ್ರದಿಂದಲೇ ಅದನ್ನು ಎದುರಿಸಬೇಕು. ನೀನೇ ಆ ಬ್ರಹ್ಮಾಸ್ತ್ರದ ತೇಜಸ್ಸನ್ನು ಉಪಶಮನ ಮಾಡಬೇಕು. ಇಲ್ಲದಿದ್ದರೆ ಸರ್ವನಾಶವಾಗುತ್ತದೆ ಎನ್ನುತ್ತಾನೆ ಕೃಷ್ಣ.

ಸೂತ ಉವಾಚ-

ಪ್ರಜೋಪದ್ರವಮಾಲಕ್ಷ್ಯ ಲೋಕವ್ಯತಿಕರಂ ಚ ತಮ್ ।
ಮತಂ ಚ ವಾಸುದೇವಸ್ಯ ಸಂಜಹಾರಾರ್ಜುನೋ ದ್ವಯಮ್ ॥೩೧॥

ಅರ್ಜುನ ಆತ್ಮರಕ್ಷಣೆಗಾಗಿ ಮೊದಲು ಬ್ರಹ್ಮಾಸ್ತ್ರಕ್ಕೆ ಪ್ರತಿಯಾಗಿ ತಾನೂ ಬ್ರಹ್ಮಾಸ್ತ್ರ ಪ್ರಯೋಗಿಸುತ್ತಾನೆ. ಆದರೆ ಈ ರೀತಿ ಮಾಡಿರುವುದರಿಂದ ಸಮಸ್ಯೆ ಇಮ್ಮಡಿಯಾಗುತ್ತದೆ. ಒಂದು ಅಸ್ತ್ರದ ಬದಲು ಎರಡು ಬ್ರಹ್ಮಾಸ್ತ್ರಗಳು ಲೋಕನಾಶಕವಾಗಿ ನಿಲ್ಲುತ್ತವೆ! ಹಾಗಾಗಿ ಕೃಷ್ಣ ಅರ್ಜುನನಲ್ಲಿ ಹೇಳುತ್ತಾನೆ: "ಈ ಅಸ್ತ್ರ ಲೋಕನಾಶ ಮಾಡುವ ಮೊದಲು ಅದನ್ನು ಉಪಸಂಹಾರ ಮಾಡು" ಎಂದು.

ಲೋಕನಾಶಕ ಮತ್ತು ಜನಾಂಗ ನಾಶಕವಾದ ಅಸ್ತ್ರವನ್ನು ಉಪಸಂಹಾರ ಮಾಡಬೇಕೆನ್ನುವುದು ವಾಸುದೇವನ ಇಚ್ಛೆಯಾಗಿರುವುದರಿಂದ, ಅದರಂತೆ ಅರ್ಜುನ, ದ್ರೋಣಪುತ್ರ ಪ್ರಯೋಗಿಸಿದ ಮತ್ತು ತಾನು ಪ್ರಯೋಗಿಸಿದ ಬ್ರಹ್ಮಾಸ್ತ್ರವನ್ನು ಉಪಸಂಹಾರ ಮಾಡುತ್ತಾನೆ.

ಇಲ್ಲಿ ಹೇಳಿದ ಈ ಮಾತು ನಮಗೆ ಗೊಂದಲವನ್ನು ತರುತ್ತದೆ. ಭಾಗವತದಲ್ಲೇ ಮುಂದೆ ಹೇಳುವಂತೆ ಹಾಗೂ ಮಹಾಭಾರತದಲ್ಲಿ ಹೇಳುವಂತೆ: 'ಅಶ್ವತ್ಥಾಮ ತಾನು ಪ್ರಯೋಗಿಸಿದ ಬ್ರಹ್ಮಾಸ್ತ್ರವನ್ನು ಉಪಸಂಹಾರ ಮಾಡಲು ಅರ್ಜುನನಿಗೆ ಅನುಮತಿ ನೀಡಲಿಲ್ಲ. ಆತ ಅದನ್ನು ಪಾಂಡವರ ಸಂತಾನ ಬೆಳೆಯುತ್ತಿದ್ದ ಉತ್ತರೆಯ ಗರ್ಭದತ್ತ ಗುರಿಮಾಡಿದ. ಇಂತಹ ಸಂದರ್ಭದಲ್ಲಿ ಉತ್ತರೆಯ ಗರ್ಭದಲ್ಲಿ ಬೆಳೆಯುತ್ತಿದ್ದ ಪರೀಕ್ಷಿತನನ್ನು ಚಕ್ರಧಾರಿ ಭಗವಂತ ರಕ್ಷಿಸಿದ ಮತ್ತು ಬ್ರಹ್ಮಾಸ್ತ್ರದಿಂದಾಗಿ ಸತ್ತು ಹುಟ್ಟಿದ ಮಗುವಿಗೆ ಕೃಷ್ಣ ಜೀವದಾನ ಮಾಡಿದ'. ಈ ಹಿನ್ನೆಲೆಯಲ್ಲಿ ನೋಡಿದರೆ: ಭಾಗವತದಲ್ಲಿ ಬಂದಿರುವ ಕಥೆ ಮಹಾಭಾರತದಲ್ಲಿನ ಕಥೆಗಿಂತ ಬಹಳ ಭಿನ್ನವಾಗಿದೆ. ಈ ಎರಡೂ ಗ್ರಂಥ ರಚನೆ ವೇದವ್ಯಾಸರಿಂದಲೇ ಆಗಿರುವಾಗ ಏಕೆ ಈ ರೀತಿ ಬೇರೆಬೇರೆ ರೀತಿ ವಿವರಣೆ ನೀಡಿದರು ಎನ್ನುವುದು ಇಲ್ಲಿ ನಮ್ಮನ್ನು ಕಾಡುವ ಪ್ರಶ್ನೆ. ಈ ಪ್ರಶ್ನೆಗೆ ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ನೀಡಿರುವ ವಿವರಣೆ ಅದ್ಭುತವಾಗಿದೆ. ಅಲ್ಲಿ ಅವರು ಹೇಳುತ್ತಾರೆ: ಸ್ವಪ್ನೋಽಯಂ । ಎಂದು. ಮಹಾಭಾರತದಲ್ಲಿ ಬಂದಿರುವ ಕಥೆ ನಿಜವಾಗಿ ನಡೆದ ಘಟನೆಯಾದರೆ, ಭಾಗವತದಲ್ಲಿ ಬಂದಿರುವ ಈ ಕಥೆ ಅಶ್ವತ್ಥಾಮ ಕಂಡ ಕನಸು. ಶಿಶುಹತ್ಯೆ ಮಾಡಿದ ನಂತರ ಭಯಗ್ರಸ್ಥನಾಗಿ ವೇದವ್ಯಾಸರ ಆಶ್ರಮದ ಸಮೀಪವಿರುವ ಕಾಡಿನಲ್ಲಿ ಅಡಗಿ ಕುಳಿತಿದ್ದಾಗ, ಅಶ್ವತ್ಥಾಮ ಕಂಡ ಕನಸಿದು. ಇದಕ್ಕೆ ಪ್ರಮಾಣ ಸ್ಕಾಂದಪುರಾಣದಲ್ಲಿದೆ. ಅಲ್ಲಿ ಹೇಳುವಂತೆ:

> ಪಾರ್ಥಾನುಯಾತ ಮಾತ್ಮಾನಂ ದ್ರೌಣಿಃ ಸ್ವಪ್ನೇ ದದರ್ಶ ಹ ।
> ಬಂಧನಂ ಚಾತ್ಮನಸ್ತತ್ರ ದ್ರೌಪದ್ಯಾ ಚೈವ ಮೋಕ್ಷಣಂ ॥
> ಇತಿ ಸ್ಕಂದೇ । ತಸ್ಮಾನ್ನೈಷೀಕ ವಿರೋಧಃ ।

ಅಶ್ವತ್ಥಾಮರ ಬದುಕುವ ಆಸೆ ಅದೆಷ್ಟು ಅದಮ್ಯವಾಗಿತ್ತೆಂದರೆ: ಕನಸಿನಲ್ಲೂ ಕೂಡಾ "ತಾನು ಕ್ಷಮೆಗೆ ಪಾತ್ರನಾಗಿ-ಬದುಕುಳಿದೆ" ಎನ್ನುವುದನ್ನೇ ಅವರು ಕಾಣುತ್ತಿರುತ್ತಾರೆ. ಈ ಅಧ್ಯಾಯದಲ್ಲಿ ಮುಂದೆ ಅಶ್ವತ್ಥಾಮರ ಕನಸಿನ ಕಥೆ ಮುಂದುವರಿಯುತ್ತದೆ.

> ತತ ಆಸಾದ್ಯ ತರಸಾ ದಾರುಣಂ ಗೌತಮೀಸುತಮ್ ।
> ಬಬಂಧಾಮರ್ಷತಾಮ್ರಾಕ್ಷಃ ಪಶುಂ ರಶನಯಾ ಯಥಾ ॥೩೩॥

ಅರ್ಜುನ ಬ್ರಹ್ಮಾಸ್ತ್ರವನ್ನು ಉಪಸಂಹಾರ ಮಾಡಿದಾಗ ಅಶ್ವತ್ಥಾಮ ಅಸಾಹಯಕನಾಗಿ ನಿಲ್ಲುತ್ತಾನೆ. ತಕ್ಷಣ ಅರ್ಜುನ ಆತನನ್ನು ಬಂಧಿಸಿ, ಒಂದು ಪಶುವನ್ನು ಎಳೆದು ತರುವಂತೆ ಎಳೆದು ತರುತ್ತಾನೆ. ಸಿಟ್ಟಿನಿಂದ ಅರ್ಜುನನ ಕಣ್ಣು ಕೆಂಪೇರಿರುತ್ತದೆ. ಆತ ಕೃಷ್ಣನ ಬಳಿ ಬಂದು "ಶಿಬಿರಕ್ಕೆ ಹೋಗೋಣ" ಎನ್ನುತ್ತಾನೆ.

> ಮೈನಂ ಪಾರ್ಥಾರ್ಹಸಿ ತ್ರಾತುಂ ಬ್ರಹ್ಮಬಂಧುಮಿಮಂ ಜಹಿ ।
> ಯೋಽಸಾವನಾಗಸಃ ಸುಪ್ತಾನವಧೀನ್ನಿಶಿ ಬಾಲಕಾನ್ ॥೩೫॥

ಅರ್ಜುನನ ಮಾತನ್ನು ಕೇಳಿದ ಕೃಷ್ಣ ಹೇಳುತ್ತಾನೆ: ಏತಕ್ಕಾಗಿ ಆತನನ್ನು ಶಿಬಿರಕ್ಕೆ ಕರೆದುಕೊಂಡು ಹೋಗಬೇಕು? ಅವನನ್ನು ಇಲ್ಲೇ ಮುಗಿಸಿಬಿಡು" ಎಂದು. ಕೃಷ್ಣ ಹೇಳುತ್ತಾನೆ: ಇವನ ಮೇಲೆ ಕರುಣೆ ತೋರಬೇಡ. ನಿರಾಪರಾದಿಗಳಾದ ಮಕ್ಕಳ ತಲೆ ಕಡಿದ ಆತನನ್ನು ಇಲ್ಲೇ ಮುಗಿಸಿಬಿಡು ಎನ್ನುತ್ತಾನೆ ಕೃಷ್ಣ.

ಸ್ವಪ್ರಾಣಾನ್ ಯಃ ಪರಪ್ರಾಣೈಃ ಪ್ರಪುಷ್ಣಾತ್ಯಘೃಣಃ ಖಲಃ ।
ತದ್ವಧಸ್ತಸ್ಯ ಹಿ ಶ್ರೇಯೋ ಯದ್ದೋಷಾದ್ ಯಾತ್ಯಧಃ ಪುಮಾನ್ ॥೩೭॥

ಮುಂದುವರಿದು ಕೃಷ್ಣ ಹೇಳುತ್ತಾನೆ: ಯಾರು ಇನ್ನೊಬ್ಬರನ್ನು ಕೊಂದು ತಾನು ಬದುಕಲು ಬಯಸುತ್ತಾರೋ- ಅಂತವರು ದುರ್ಬಲರು. ಅಂತವರನ್ನು ಕೊಲ್ಲುವುದರಿಂದ ಅವರಿಗೇ ಕ್ಷೇಮ. ಅದು ಅವರು ಮುಂದೆ ಮಾಡಬಹುದಾದ ಪಾಪಗಳಿಂದ ಅವರನ್ನು ಪಾರುಮಾಡುತ್ತದೆ. ಆದ್ದರಿಂದ ಬದುಕ್ಕಿದ್ದರೆ ಮತ್ತಷ್ಟು ಹತ್ಯೆಗೆ ಕಾರಣವಾಗಬಲ್ಲ ಈತನ ತಲೆಯನ್ನು ಕಡಿದುಬಿಡು ಎನ್ನುತ್ತಾನೆ ಕೃಷ್ಣ.

ಪ್ರತಿಶ್ರುತಂ ಚ ಭವತಾ ಪಾಂಚಾಲ್ಯೈ ಶೃಣ್ವತೋ ಮಮ ।
ಆಹರಿಷ್ಯೇ ಶಿರಸ್ತಸ್ಯ ಯಸ್ತೇ ಮಾನಿನಿ ಪುತ್ರಹಾ ॥೩೮॥

"ನೀನು ನಿನ್ನ ಪ್ರತಿಜ್ಞೆಯನ್ನು ಈಡೇರಿಸುವುದು ಬೇಡವೇ? ಈ ಪಾತಕಿಯ ತಲೆಯನ್ನು ಉಡುಗೊರೆಯಾಗಿ ದ್ರೌಪದಿಯ ಪಾದಕ್ಕೆ ಅರ್ಪಿಸುತ್ತೇನೆ ಎಂದು ನೀನು ಈಗಾಗಲೇ ಪ್ರತಿಜ್ಞೆ ಮಾಡಿರುವಿ. ಆದ್ದರಿಂದ ತಡಮಾಡದೇ ಕತ್ತರಿಸು ಅವನ ಶಿರವನ್ನು" ಎನ್ನುತ್ತಾನೆ ಕೃಷ್ಣ.
ಕೃಷ್ಣನ ಮಾತನ್ನು ಕೇಳಿದ ಅರ್ಜುನ ಗುರುಪುತ್ರ ಎನ್ನುವ ಗೌರವದಿಂದ ಹೇಳುತ್ತಾನೆ: "ದ್ರೌಪದಿಯ ಬಳಿ ಹೋಗಿ ಆನಂತರ ಈ ನಿರ್ಧಾರ ತೆಗೆದುಕೊಳ್ಳೋಣ. ಆಕೆ ಇಚ್ಛೆಪಟ್ಟರೆ ಆಕೆಯ ಪಾದದ ಬುಡದಲ್ಲೇ ಈತನ ಶಿರಛೇಧ ಮಾಡೋಣ" ಎಂದು.

ಉವಾಚಾಸಹಂತ್ಯಸ್ಯ ಬಂಧನಾನಯನಂ ಸತೀ ।
ಮುಚ್ಯತಾಂಮುಚ್ಯತಾಮೇಷ ಬ್ರಾಹ್ಮಣೋ ನಿತರಾಂ ಗುರುಃ ॥೪೩॥

ದ್ರೌಪದಿ ಬಂಧಿಯಾಗಿರುವ ಅಶ್ವತ್ಥಾಮನನ್ನು ಕಂಡು ಹೇಳುತ್ತಾಳೆ: "ಮೊದಲು ಬಿಟ್ಟುಬಿಡು ಇವನನ್ನು. ಕ್ಷತ್ರಿಯರು ಹಾಸಿಗೆಯಲ್ಲಿ ಮಲಗಿ ಸಾಯುವವರಲ್ಲ. ರಣರಂಗದಲ್ಲಿ ಇನ್ನೊಬ್ಬರ ವಿರುದ್ಧ ಹೋರಾಡಿ ಸಾಯುವವರು. ಆದರೆ ಈತ ಗುರುಪುತ್ರ. ಎಲ್ಲಕ್ಕೂ ಮಿಗಿಲಾಗಿ ಆತ ಬ್ರಹ್ಮಜ್ಞಾನಿ. ಗೌರವಿಸಬೇಕಾದ ವ್ಯಕ್ತಿತ್ವ".

ಸ ಏಷ ಭಗವಾನ್ ದ್ರೋಣಃ ಪ್ರಜಾರೂಪೇಣ ವರ್ತತೇ ।
ತಸ್ಯಾತ್ಮನೋಽರ್ಧಂ ಪತ್ನ್ಯಾಸ್ತೇ ನಾನ್ವಗಾದ್ ವೀರಸೂಃ ಕೃಪೀ ॥೪೫॥

"ಇವನನ್ನು ಕೊಲ್ಲುವುದರಿಂದ ಸತ್ತ ನನ್ನ ಮಕ್ಕಳು ಮರಳಿ ಬರುತ್ತಾರೆಯೇ? ಈತನ ದೇಹದಲ್ಲಿ ದ್ರೋಣಾಚಾರ್ಯರ ನೆತ್ತರು ಹರಿಯುತ್ತಿದೆ. ಹಾಗಾಗಿ ನಾನು ಈತನೊಳಗೆ ಭಗವಾನ್ ದ್ರೋಣರನ್ನು ಕಾಣುತ್ತಿದ್ದೇನೆ. ಹಾಗಾಗಿ ಇವನನ್ನು ಬಿಟ್ಟುಬಿಡು" ಎನ್ನುತ್ತಾಳೆ ದ್ರೌಪದಿ.

ಮಾ ರೋದೀದಸ್ಯ ಜನನೀ ಗೌತಮೀ ಪತಿದೇವತಾ ।
ಯಥಾಽಹಂ ಮೃತವತ್ಸಾಽಽರ್ತಾ ರೋದಿಮ್ಯಶ್ರುಮುಖೀ ಮುಹುಃ ॥೪೭॥

"ಒಂದುವೇಳೆ ಇವನನ್ನು ಕೊಂದರೆ ಅದರಿಂದಾಗುವ ಪರಿಣಾಮವೇನು? ಇಂದು ನಾನು ನನ್ನ ಮಕ್ಕಳನ್ನು ಕಳೆದುಕೊಂಡು ದುಃಖಿಸುತ್ತಿದ್ದೇನೆ. ಈತನ ತಾಯಿ ಗೌತಮಿ ಈಗಾಗಲೇ ತನ್ನ ಪತಿಯನ್ನು ಕಳೆದುಕೊಂಡು ದುಃಖದಲ್ಲಿದ್ದಾಳೆ. ಆ ತಾಯಿ ನನ್ನಂತೆ ದುಃಖ ಅನುಭವಿಸುವುದು ಬೇಡ. ಆದ್ದರಿಂದ ಆತನನ್ನು ಕೊಲ್ಲಬೇಡ. ಬಿಟ್ಟುಬಿಡು" ಎನ್ನುತ್ತಾಳೆ ದ್ರೌಪದಿ.

ಮಹಾಭಾರತದಲ್ಲಿ ಬರುವ ನಿಜ ಕಥೆಯ ಪ್ರಕಾರ ಅಶ್ವತ್ಥಾಮನನ್ನು ದ್ರೌಪದಿಯ ಬಳಿ ಎಳೆದು ತಂದೇ ಇಲ್ಲ. ಕೃಷ್ಣ, ವೇದವ್ಯಾಸರು, ಭೀಮ, ಅರ್ಜುನ, ಎಲ್ಲರೂ ಹೇಳಿದರೂ ಕೂಡಾ, ಅಶ್ವತ್ಥಾಮ ಬ್ರಹ್ಮಾಸ್ತ್ರ ಉಪಸಂಹಾರಕ್ಕೆ ಒಪ್ಪಿಕೊಳ್ಳದೇ ಅದನ್ನು ಉತ್ತರೆಯ ಗರ್ಭಕ್ಕೆ ಗುರಿಯಾಗಿಸುತ್ತಾನೆ. ಇದರಿಂದಾಗಿ ಆತ ಎಲ್ಲರ ಶಾಪಕ್ಕೆ ಗುರಿಯಾಗುತ್ತಾನೆ. "ನಿನ್ನ ಮೈಯಲ್ಲೆಲ್ಲಾ ಗಾಯವಾಗಿ, ಅದರಲ್ಲಿ ಕೀವು ತುಂಬಿ, ದುರ್ವಾಸನೆಯಿಂದಾಗಿ, ಮನುಷ್ಯ ಸಂಚಾರವಿಲ್ಲದ ಸ್ಥಳದಲ್ಲಿ ನಿನ್ನ ಅಸಹ್ಯ ಶರೀರವನ್ನು ಹೊತ್ತುಕೊಂಡು ನೀನು ಬದುಕು" ಎನ್ನುವ ಶಾಪ ಪಡೆದ ಆತ ತನ್ನಲ್ಲಿ ಜನ್ಮತಃ ಇದ್ದ ಮಣಿಯನ್ನು ಪಾಂಡವರಿಗೊಪ್ಪಿಸಿ ಶಾಪಗ್ರಸ್ತನಾಗಿ ಕಾಡಾಡಿಯಾಗಿ ಅಲೆಯುತ್ತಾನೆ ಎನ್ನುತ್ತದೆ ಮಹಾಭಾರತ. ಆದರೆ ಇಲ್ಲಿ ಅಶ್ವತ್ಥಾಮ ತಾನು ದ್ರೌಪದಿಯ ಕರುಣೆಯಿಂದ ಕ್ಷಮೆಗೆ ಪಾತ್ರನಾದೆ ಎಂದು ಕನಸು ಕಾಣುತ್ತಿದ್ದಾನೆ.

**ಸೂತ ಉವಾಚ-**

ಧರ್ಮ್ಯಂ ನ್ಯಾಯ್ಯಂ ಸಕರುಣಂ ನಿರ್ವ್ಯಳೀಕಂ ಸಮಂ ಮಹತ್ ।
ರಾಜಾ ಧರ್ಮಸುತೋ ರಾಜ್ಞ್ಯಾಃಪ್ರತ್ಯನಂದದ್ ವಚೋ ದ್ವಿಜಾಃ ॥೪೯॥

ನಕುಲಃ ಸಹದೇವಶ್ಚ ಯುಯುಧಾನೋ ಧನಂಜಯಃ ।
ಭಗವಾನ್ ದೇವಕೀಪುತ್ರೋ ಯೇ ಚಾನ್ಯೇ ಯಾಶ್ಚ ಯೋಷಿತಃ ॥೫೦॥

ಇಲ್ಲಿ ಅಶ್ವತ್ಥಾಮನ ಕನಸಿನ ಭಾಗ ಮುಂದುವರಿಯುತ್ತದೆ. ಯುಧಿಷ್ಠಿರ ದ್ರೌಪದಿಯ ಮಾತನ್ನು ಬೆಂಬಲಿಸುತ್ತಾನೆ ಹಾಗೂ ಬಹಳ ಮೆಚ್ಚಿ ಅಭಿನಂದನೆ ಮಾಡಿ ಹೊಗಳುತ್ತಾನೆ. ಜೊತೆಗೆ ನಕುಲ ಸಹದೇವರೂ ಕೂಡಾ, ದ್ರೌಪದಿಯನ್ನು ಅಭಿನಂದಿಸುತ್ತಾರೆ. ಅರ್ಜುನನ ಮತ್ತು ಸಾತ್ಯಕಿ ಕೂಡಾ ದ್ರೌಪದಿಯ ಮಾತನ್ನು ಮೆಚ್ಚಿಕೊಂಡು ಹೊಗಳುತ್ತಾರೆ. ಶ್ರೀಕೃಷ್ಣ ಹಾಗೂ ಅಲ್ಲಿ ಸೇರಿದ ಎಲ್ಲರೂ ದ್ರೌಪದಿಯ ನಿರ್ಧಾರವನ್ನು ಬೆಂಬಲಿಸುತ್ತಾರೆ.

ತತ್ರಾಹಾಮರ್ಷಿತೋ ಭೀಮಸ್ತಸ್ಯ ಶ್ರೇಯಾನ್ ವಧಃ ಸ್ಮೃತಃ ।
ನ ಭರ್ತುರ್ನಾತ್ಮನಶ್ಚಾರ್ಥೇ ಯೋಽಹನ್ ಸುಪ್ತಾನ್ ಶಿಶೂನ್ ವೃಥಾ ॥೫೧॥

ಎಲ್ಲರೂ ಅಭಿನಂದಿಸಿದಾಗ ಭೀಮನಿಗೆ ಕೋಪ ಬರುತ್ತದೆ. ಆತ ಕೋಪದಿಂದ ಎದ್ದು ನಿಲ್ಲುತ್ತಾನೆ ಮತ್ತು ಹೇಳುತ್ತಾನೆ. "ಇಂತಹ ಪಾಪಿಯ ತಲೆ ಕಡಿಯುವುದೇ ನ್ಯಾಯ" ಎಂದು. ಈತ ನಿದ್ರಿಸುತ್ತಿದ್ದ ಮಕ್ಕಳನ್ನು ಕೊಂದ ಪಾಪಿ. ಆತ ಮಾಡಿರುವ ಕೃತ್ಯ ಯಾರಿಗೂ ಒಳ್ಳೆಯದನ್ನು ಮಾಡಿಲ್ಲ ಮತ್ತು ಆತ್ಮಹಿತವಾದದ್ದೂ ಅಲ್ಲ. ಹಾಗಾಗಿ ಇಂತಹ ನೀಚನನ್ನು ಮುಗಿಸಿಬಿಡು ಎನ್ನುತ್ತಾನೆ ಭೀಮ. ಪ್ರಾಯಃ ಭೀಮನನ್ನು ಕಂಡರೆ ಅಶ್ವತ್ಥಾಮನಿಗೆ ಭಯ. ಅದಕ್ಕಾಗಿ ಈ ರೀತಿಯ ವಿಚಾರಗಳನ್ನು ಆತ ಕನಸಿನಲ್ಲಿ ಕಾಣುತ್ತಿದ್ದಾನೆ.

ನಿಶಮ್ಯ ಭೀಮಗದಿತಂ ದ್ರೌಪದ್ಯಾಶ್ಚ ಚತುರ್ಭುಜಃ ।
ಆಲೋಕ್ಯ ವದನಂ ಸಖ್ಯುರಿದಮಾಹ ಹಸನ್ನಿವ ॥೫೨॥

ಶ್ರೀಭಗವಾನುವಾಚ-

ಬ್ರಹ್ಮಬಂಧುರ್ನ ಹಂತವ್ಯ ಆತತಾಯೀ ವಧಾರ್ಹಣಃ ।
ಮಯ್ಯೈವೋಭಯಮಾಮ್ನಾತಂ ಪರಿಪಾಹ್ಯನುಶಾಸನಮ್ ॥೫೩॥

ಕುರು ಪ್ರತಿಶ್ರುತಂ ಸತ್ಯಂ ಯತ್ತತ್ ಸಾಂತ್ವಯತಾ ಪ್ರಿಯಾಮ್ ।
ಮತಂ ಚ ಭೀಮಸೇನಸ್ಯ ಪಾಂಚಾಲ್ಯೈ ಮಹ್ಯಮೇವ ಚ ॥೫೪॥

ಭೀಮನ ಮತ್ತು ದ್ರೌಪದಿಯ ಮಾತನ್ನು ಕೇಳಿ ಕೃಷ್ಣ ಅರ್ಜುನನ ಮುಖವನ್ನು ನೋಡಿ ಮುಗುಳ್ನಗುತ್ತಾನೆ. ಕೃಷ್ಣ ಹೇಳುತ್ತಾನೆ: "ಶಾಸ್ತ್ರದಲ್ಲಿ ಹೇಳುವಂತೆ- ಬ್ರಹ್ಮಜ್ಞಾನಿಯನ್ನು ಕೊಲ್ಲಬಾರದು; ಆದರೆ ಸಮಾಜ ಕಂಟಕರನ್ನು ಜೀವಂತ ಉಳಿಸಬಾರದು. ಶಾಸ್ತ್ರದ ಮೂಲಕ ಈ ಎರಡು ವಿಧಿಯನ್ನು ಜಗತ್ತಿಗೆ ಕೊಟ್ಟವನು ನಾನೇ ಆದ್ದರಿಂದ, ಬ್ರಹ್ಮಬಂಧು ಅಶ್ವತ್ಥಾಮನನ್ನು ಕೊಲ್ಲಬಾರದು. ಆದರೆ ಆತತಾಯಿಯಾದ ಇವನನ್ನು ಕೊಲ್ಲಬೇಕು. ಇದು ಶಾಸ್ತ್ರದ ಮತ್ತು ನನ್ನ ಆಜ್ಞೆ. ಅದನ್ನು ಪಾಲಿಸು! ಇಷ್ಟೇ ಅಲ್ಲದೆ, ನೀನು ಈತನ ತಲೆಯನ್ನು ದ್ರೌಪದಿಯ ಪಾದಕ್ಕೆ ಉಡುಗೊರೆಯಾಗಿ ಅರ್ಪಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿದವನು. ಆ ಪ್ರತಿಜ್ಞೆಯನ್ನು ಉಳಿಸು. ಭೀಮಸೇನನ ಮತ್ತು ಪಾಂಚಾಲಿಯ ಅಭಿಪ್ರಾಯವೇ ನನ್ನ ಅಭಿಪ್ರಾಯವಾದ್ದರಿಂದ ಎಲ್ಲವನ್ನು ಅರ್ಥ ಮಾಡಿಕೊಂಡು ಕಾರ್ಯ ನಿರ್ವಹಿಸು" ಎಂದು ಒಗಟಾಗಿ ಮಾತನಾಡುತ್ತಾನೆ ಕೃಷ್ಣ.

ಸೂತ ಉವಾಚ-

ಅರ್ಜುನಃ ಸಹಸಾಽಽಜ್ಞಾಯ ಹರೇರ್ಹಾರ್ದಮಥಾಸಿನಾ ।
ಮಣಿಂ ಜಹಾರ ಮೂರ್ಧನ್ಯಂ ದ್ವಿಜಸ್ಯ ಸಹಮೂರ್ಧಜಮ್ ॥೫೫॥

ವಿಮುಚ್ಯ ರಶನಾಬದ್ಧಂ ಬಾಲಹತ್ಯಾಹತಪ್ರಭಮ್ ।
ತೇಜಸಾ ಮಣಿನಾ ಹೀನಂ ಶಿಬಿರಾನ್ನಿರಯಾಪಯತ್ ॥೫೬॥

ನಮಗೆ ಕೃಷ್ಣನ ಮಾತು ಅರ್ಥವಾಗದಿದ್ದರೂ ಕೂಡಾ, ಅರ್ಜುನನಿಗೆ ತಕ್ಷಣ ಕೃಷ್ಣನ ಮಾತಿನ ಹಿಂದಿನ ರಹಸ್ಯ ತಿಳಿದು ಬಿಡುತ್ತದೆ. ಆತ ತಡಮಾಡದೆ ತನ್ನ ಕತ್ತಿಯನ್ನು ತೆಗೆದು, ಅಶ್ವತ್ಥಾಮನ ತಲೆಯನ್ನು ಬೋಳಿಸುತ್ತಾನೆ. ಜೊತೆಗೆ ಜನ್ಮತಃ ಬಂದಿರುವ ಅಮೂಲ್ಯವಾದ ಮಣಿರತ್ನವನ್ನು ಆತನ ತಲೆಯಿಂದ ಕಿತ್ತು ತೆಗೆಯುತ್ತಾನೆ. ಈ ರೀತಿ ತಲೆಬೋಳಿಸಿ, ಮಣಿಯನ್ನು ಕಿತ್ತಿರುವುದು ಅಶ್ವತ್ಥಾಮನಿಗೆ ಸಾವಿಗಿಂತ ಮಿಗಿಲಾದ ಅವಮಾನ.
ಇಷ್ಟು ಮಾಡಿ ಅರ್ಜುನ ಕಟ್ಟಿದ ಹಗ್ಗದಿಂದ ಅಶ್ವತ್ಥಾಮನನ್ನು ಬಿಚ್ಚುತ್ತಾನೆ. ಈ ಅವಮಾನದಿಂದಾಗಿ ಅಶ್ವತ್ಥಾಮನಲ್ಲಿ ಯಾವ ಬ್ರಹ್ಮಕಳೆಯೂ ಉಳಿದಿರುವುದಿಲ್ಲ. ನಂತರ ಪಾಂಡವರ ಶಿಬಿರದಿಂದ ಆತನನ್ನು ಹೊರಹಾಕಿ "ಇನ್ನು ಮುಂದೆ ನಮ್ಮ ಕಣ್ಣಮುಂದೆ ಸುಳಿಯಬೇಡ" ಎಂದು ಹೇಳಿ ಗಡಿಪಾರು ಮಾಡುತ್ತಾರೆ.

ಬಂಧನಂ ದ್ರವಿಣಾದಾನಂ ಸ್ಥಾನಾನ್ನಿರ್ಯಾಪಣಂ ತಥಾ ।
ಏಷ ಹಿ ಬ್ರಹ್ಮಬಂಧೂನಾಂ ವಧೋ ನಾನ್ಯೋSಸ್ತಿ ದೈಹಿಕಃ ॥೫೭॥

ಒಬ್ಬ ಬ್ರಹ್ಮಜ್ಞಾನಿಯ ವಂಶದಲ್ಲಿ ಹುಟ್ಟಿದ ವ್ಯಕ್ತಿ ಅಪರಾಧ ಮಾಡಿದಾಗ ಅವನಿಗೆ ಕೊಡಬೇಕಾದ ಶಿಕ್ಷೆ ಏನೆಂಬುದನ್ನು ಶಾಸ್ತ್ರ ವಿವರಿಸುತ್ತದೆ. ಬಂಧನಕ್ಕೆ ಒಳಪಡಿಸುವುದು, ತಲೆಬೋಳಿಸುವುದು, ಅವರಲ್ಲಿರುವ ಸರ್ವಸಂಪತ್ತನ್ನೂ ಕಿತ್ತುಕೊಂಡು ಅವರನ್ನು ದೇಶಭ್ರಷ್ಟರನ್ನಾಗಿ ಮಾಡುವುದು, ಇತ್ಯಾದಿ ಶಿಕ್ಷೆ ಮರಣದಂಡನೆಗೆ ಪರ್ಯಾಯ ಶಿಕ್ಷೆ.

ಇದು ಅಶ್ವತ್ಥಾಮ ಕಾಡಿನಲ್ಲಿ ಅಡಗಿಕುಳಿತಾಗ ಕಂಡ ಕನಸು. ಈ ಕನಸಿನ ನಂತರದ ಘಟನೆಯನ್ನು ಮಹಾಭಾರತ ವರ್ಣಿಸುತ್ತದೆ. ಹಿಂದೆ ಹೇಳಿದಂತೆ ಅಶ್ವತ್ಥಾಮಾಚಾರ್ಯರು ಶಾಪಗ್ರಸ್ಥರಾಗುತ್ತಾರೆ. ಅದರಿಂದಾಗಿ ಅವರಿಗೆ ಅಸಹ್ಯ ಮತ್ತು ದುರ್ನಾತದಿಂದ ಕೂಡಿದ ಶರೀರ ಪ್ರಾಪ್ತಿಯಾಗುತ್ತದೆ. ಮುಂದಿನ ದ್ವಾಪರದ ತನಕ ಮನುಷ್ಯಸಂಚಾರವಿಲ್ಲದ ಹಿಮಾಲಯದ ದುರ್ಗಮ ತಾಣದಲ್ಲಿ ಅವರು ಅವತಾರ ಸಮಾಪ್ತಿ ಮಾಡದೇ ಇರಬೇಕಾದ ಪ್ರಸಂಗ ಅವರಿಗೊದಗುತ್ತದೆ. ಆನಂತರ ಮುಂದಿನ ದ್ವಾಪರದಲ್ಲಿ ಅವರು ಈ ಕಷ್ಟದಿಂದ ಬಿಡುಗಡೆಗೊಂಡು 'ವ್ಯಾಸ' ಪದವಿಯನ್ನು ಅಲಂಕರಿಸಲಿದ್ದಾರೆ. ಇದು ಅವತಾರದಲ್ಲಿ ದೇವತೆಗಳು ಪಡುವ ಕಷ್ಟ! ಅವರು ಅನುಭವಿಸುವ ಕಷ್ಟದ ಮುಂದೆ ನಮ್ಮ ಕಷ್ಟ ಏನೂ ಅಲ್ಲ. ಅವರ ನೈಜ ಕಥೆಯೇ ನಮಗೆ ಒಂದು ಆತ್ಮವಿಶ್ವಾಸ ಮತ್ತು ಭರವಸೆಯಾಗಿರಬೇಕು.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಸಪ್ತಮೋSಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಏಳನೇ ಅಧ್ಯಾಯ ಮುಗಿಯಿತು.

*********

# ಅಷ್ಟಮೋಧ್ಯಾಯಃ

## ಪರೀಕ್ಷಿತ ರಾಜನ ಜನನದ ಹಿನ್ನೆಲೆ

**ಸೂತ ಉವಾಚ**

**ಪುತ್ರಶೋಕಾತುರಾಃ ಸರ್ವೇ ಪಾಂಡವಾಃ ಸಹ ಕೃಷ್ಣಯಾ ।**
**ಸ್ವಾನಾಂ ಮೃತಾನಾಂ ಯತ್ ಕೃತ್ಯಂ ಚಕ್ರುರ್ನಿರ್ಹರಣಾದಿಕಮ್ ॥೧॥**

ಅಶ್ವತ್ಥಾಮ ನಿಗ್ರಹದ ನಂತರ ತಮ್ಮ ಮಕ್ಕಳು, ಬಂಧು-ಬಳಗವನ್ನು ಕಳೆದುಕೊಂಡ ಪಾಂಡವರು, ದ್ರೌಪದಿ ಸಮೇತರಾಗಿ ಬಂದು, ಎಲ್ಲರ ಉತ್ತರಕ್ರಿಯೆ, ಶ್ರಾದ್ಧ ಕರ್ಮಾದಿಗಳಲ್ಲಿ ತೊಡಗುತ್ತಾರೆ. ಈ ರೀತಿ ಜಲಾಂಜಲಿ ಕೊಡುವಾಗ ನಡೆದ ಒಂದು ಘಟನೆಯನ್ನು ಭಾಗವತದಲ್ಲಿ ವರ್ಣಿಸಿಲ್ಲವಾದರೂ, ಮಹಾಭಾರತದಲ್ಲಿ ಬಂದಿರುವ ಆ ವಿವರಣೆಯನ್ನು ನಾವಿಲ್ಲಿ, ಸಂಕ್ಷಿಪ್ತವಾಗಿ ನೋಡಿ ಮುಂದುವರಿಯೋಣ.

ಜಲಾಂಜಲಿ ಕೊಡುವ ಹತ್ತನೇ ದಿನವನ್ನು ದಶಾಂಜಲಿ ಎನ್ನುತ್ತಾರೆ.  ಆ ದಿನ ಜಲಾಂಜಲಿ ಕೊಡಲು ಹೋಗಿದ್ದಾಗ, ಅಲ್ಲಿಯ ತನಕ ಸುಮ್ಮನಿದ್ದ ಕುಂತಿ ಹೇಳುತ್ತಾಳೆ: "ಕರ್ಣನಿಗೂ ಕೂಡಾ ಜಲಾಂಜಲಿ ಕೊಟ್ಟುಬಿಡಿ" ಎಂದು! ಈ ಮಾತನ್ನು ಕೇಳಿ ಧರ್ಮರಾಯನಿಗೆ ಆಶ್ಚರ್ಯವಾಗುತ್ತದೆ. ಆತ ಕೇಳುತ್ತಾನೆ: "ನಮ್ಮ ಪರಮ ಶತ್ರು ಆತ. ದುರ್ಯೋಧನನಿಗಿಂತ ಹೆಚ್ಚಾಗಿ ಹಠತೊಟ್ಟು ಯುದ್ಧ ಮಾಡಿಸಿದವನಾತ. ದ್ರೌಪದಿಯನ್ನು ಸಭೆಗೆಳೆದು ತರಲು ಮೂಲ ಕಾರಣ ಕರ್ಣ. ಅಂತವನಿಗೆ ನಾವೇಕೆ ಜಲಾಂಜಲಿ ಕೊಡಬೇಕು" ಎಂದು. ಪಾಪ, ಕುಂತಿ ಅದೆಷ್ಟು ದಿನ ಗುಟ್ಟು ಮಾಡಿಯಾಳು ಹೇಳಿ? ಹೆತ್ತ ಕರುಳಲ್ಲವೇ ಅದು? ಆಕೆ ಹೇಳುತ್ತಾಳೆ: "ಕರ್ಣ ನಿಮ್ಮ ಶತ್ರು ಅಲ್ಲ! ಆತ ನನ್ನ ಮಗ. ನಿನ್ನ ಅಣ್ಣ" ಎಂದು. ಯಾವುದನ್ನು ಸಮಾಜದ ಅಪವಾದಕ್ಕೆ ಹೆದರಿ ಮುಚ್ಚಿಟ್ಟಿದ್ದಳೋ, ಅದನ್ನು ಇಲ್ಲಿ 'ಕರ್ಣನಿಗೆ ಜಲಾಂಜಲಿ ಸಿಗಲಿ' ಎನ್ನುವ ಉದ್ದೇಶದಿಂದ ಹೊರಗೆಡಹುತ್ತಾಳೆ ಕುಂತಿ. ಈ ಮಾತನ್ನು ಕೇಳಿದ ಧರ್ಮರಾಯನಿಗೆ ತಡೆಯಲಾಗುವುದಿಲ್ಲ. ಆತ ಹೇಳುತ್ತಾನೆ: "ಎಂತಹ ಕ್ರೂರ ಹೃದಯ ನಿನ್ನದು? ನಿನ್ನ ಮಕ್ಕಳ ಕೈಯಿಂದಲೇ ನಿನ್ನ ಮಗನನ್ನು ಕೊಲ್ಲಿಸಿದೆಯಾ? ಈ ಮಾತನ್ನು ನೀನು ಮೊದಲೇ ಏಕೆ ಹೇಳಲಿಲ್ಲ? ನಮ್ಮ ಹಿರಿಯಣ್ಣ ಆತ ಎಂದು ತಿಳಿದಿದ್ದರೆ ನಾವು ಯುದ್ಧ ಮಾಡುತ್ತಿದ್ದೆವೇ? ನೀನಿಷ್ಟು ಕ್ರೂರಳಾಗಬಾರದಿತ್ತು ತಾಯಿ" ಎಂದು. ಧರ್ಮರಾಯನ ಮಾತಿಗೆ ಉತ್ತರವಾಗಿ ಕುಂತಿ ಹೇಳುತ್ತಾಳೆ: "ನನ್ನ ನಿರ್ಧಾರಕ್ಕೆ ಅನೇಕ ಕಾರಣಗಳಿವೆ. ಈ ವಿಚಾರವನ್ನು ಹೇಳಬೇಕು ಎಂದು ಎಣಿಸಿದೆ. ಆದರೆ ಕರ್ಣ ಅದಾಗಲೇ ಅನ್ಯಾಯದ ಮಾರ್ಗ ಹಿಡಿದಿದ್ದ. ಅವನು ಮಾಡಿದ ಅನ್ಯಾಯಕ್ಕೆ ಶಿಕ್ಷೆ ಸಿಗಲೇಬೇಕು. ಅದಕ್ಕಾಗಿ ಈವರೆಗೆ ಈ ವಿಚಾರವನ್ನು ಗುಟ್ಟಾಗಿಸಿದೆ" ಎಂದು.

ಕುಂತಿಯ ಮಾತನ್ನು ಕೇಳಿ ಧರ್ಮರಾಯನಿಗೆ ದುಃಖ ತಡೆಯಲಾಗುವುದಿಲ್ಲ. ಕುಂತಿಯಷ್ಟು ಗಟ್ಟಿ ಹೃದಯ ಆತನದಲ್ಲ. ಈ ಸಂದರ್ಭದಲ್ಲೇ ಆತ ಸಮಸ್ತ ಸ್ತ್ರೀ ಸಮುದಾಯಕ್ಕೊಂದು ಶಾಪ ಕೊಡುತ್ತಾನೆ. ಆತ ಹೇಳುತ್ತಾನೆ: "ಇಷ್ಟು ಕಾಲ ಈ ವಿಷಯವನ್ನು ನೀನು ಯಾರಿಗೂ ಹೇಳಲಿಲ್ಲ. ಇದರಿಂದಾಗಿ ನಾವು ನಮ್ಮ ಅಣ್ಣನ ವಿರುದ್ಧ ಹೋರಾಡಿ ಅವನನ್ನು ಕೊಲ್ಲುವಂತಾಯಿತು. ಇದಕ್ಕೆಲ್ಲಾ ಕಾರಣ 'ನಿನ್ನ ಗುಟ್ಟು'. ಹಾಗಾಗಿ ಇನ್ನು ಮುಂದೆ ಹೆಂಗಸರ ಬಾಯಿಯಲ್ಲಿ ಯಾವ ಗುಟ್ಟೂ ಉಳಿಯದಿರಲಿ" ಎಂದು ನೋವಿನಿಂದ ಶಾಪ ಕೊಡುತ್ತಾನೆ.

ಮೇಲೆ ವಿವರಿಸಿದ ಘಟನೆ ಅಲ್ಲದೇ, ಯುದ್ಧ ಕಳೆದ ಮೇಲೆ, ಕೃಷ್ಣ ಮತ್ತು ವ್ಯಾಸರು ಮಾಡಿದ ಒಂದು ದೊಡ್ಡ ಕಾರ್ಯವಿದೆ. ಅದೇನೆಂದರೆ: ಗಾಂಧಾರಿಯನ್ನು  ವೇದವ್ಯಾಸರು ಮತ್ತು ದ್ರೌಪದಿಯನ್ನು ಕೃಷ್ಣ  ರಣರಂಗಕ್ಕೆ

ಕರೆದುಕೊಂಡು ಹೋಗಿರುವುದು. ಮಹಾಭಾರತ ಗಾಂಧಾರಿಯ ರಣರಂಗ ಭೇಟಿಯನ್ನು ವಿಸ್ತಾರವಾಗಿ ವಿವರಿಸಿದರೆ, ಭಾಗವತ ದ್ರೌಪದಿಯ ಯುದ್ಧರಂಗದ ನೋಟದ ಅಭಿವ್ಯಕ್ತಿಯನ್ನು ಚಿತ್ರಿಸುತ್ತದೆ. ಇಲ್ಲಿ ನಾವು ಮಹಾಭಾರತದಲ್ಲಿ ಬಂದಿರುವ ಗಾಂಧಾರಿಯ ಕಥೆಯನ್ನು ಸಂಕ್ಷಿಪ್ತವಾಗಿ ನೋಡಿ ಮುಂದುವರಿಯೋಣ.

ವೇದವ್ಯಾಸರು ಗಾಂಧಾರಿಯನ್ನು ಯುದ್ಧರಂಗಕ್ಕೆ ಕರೆದುಕೊಂಡು ಹೋಗಿ, ಅವಳಿಗೆ ದೃಷ್ಟಿ ಕೊಟ್ಟು ಹೇಳುತ್ತಾರೆ: "ನೋಡು ನಿನ್ನ ಮಕ್ಕಳನ್ನು" ಎಂದು. ಎಂತಹ ವಿಚಿತ್ರ! ಮದುವೆಗೆ ಮೊದಲೇ ಕಣ್ಣಿಗೆ ಕಣ್ಪಟ್ಟಿ ಕಟ್ಟಿಕೊಂಡಿದ್ದ ಗಾಂಧಾರಿ, ತನ್ನನ್ನು ಕೈಹಿಡಿದ ಗಂಡನನ್ನಾಗಲೀ, ತಾನು ಹೆತ್ತ ಮಕ್ಕಳನ್ನಾಗಲೀ, ತಾನು ಮದುವೆಯಾಗಿ ಬಂದ ಊರನ್ನಾಗಲೀ ನೋಡಿಲ್ಲ. ಆದರೆ ಆಕೆ ಇಂದು ನೋಡುತ್ತಿರುವುದು ತನ್ನ ಮಕ್ಕಳ ಹೆಣವನ್ನು! ಗಾಂಧಾರಿ ಒಬ್ಬ ಮಹಾಮಹಿಳೆ. ಆಕೆಯ ಮನೋಧೈರ್ಯ, ಸಹನಾಶಕ್ತಿ, ಪ್ರತಿಯೊಂದನ್ನೂ ವಸ್ತುನಿಷ್ಠವಾಗಿ ನೋಡಿ ತಟಸ್ಥವಾಗಿ ಯೋಚಿಸುವ ನಿಲುವು ಅದ್ಭುತ. ಆಕೆ ಅಲ್ಲಿ ಬಿದ್ದಿರುವ ತನ್ನ ಮಕ್ಕಳ, ಬಂಧು-ಬಾಂಧವರ ಹೆಣವನ್ನು ನೋಡುತ್ತಾಳೆ. ಅಲ್ಲಿ ಒಂದು ದೇಹದ ಕೈ ದೇಹದಿಂದ ಬೇರೆಯಾಗಿರುತ್ತದೆ ಮತ್ತು ಅದನ್ನು ನರಿಯೊಂದು ತಿನ್ನುತ್ತಿರುತ್ತದೆ. ಈ ಭೀಕರ ದೃಶ್ಯವನ್ನು ನೋಡಿ ಆಕೆ ಹೇಳುತ್ತಾಳೆ: "ಬದುಕಿದ್ದಾಗ ಸಾವಿರಾರು ಗೋವುಗಳನ್ನು ದಾನಮಾಡಿದ ಕೈ, ಎದುರಾಳಿ ಶತ್ರುಗಳ ಸೊಕ್ಕು ಮುರಿದ ಕೈ ಇಂದು ನರಿ-ನಾಯಿ ಪಾಲಾಗಿದೆ" ಎಂದು. ಆಕೆ ಇನ್ನೊಂದು ವಿಚಿತ್ರ ಮಾತನ್ನಾಡುತ್ತಾಳೆ. ಆಕೆ ಹೇಳುತ್ತಾಳೆ: ಬದುಕಿದ್ದಾಗ ಸ್ತ್ರೀಭೋಗವೇ ಸರ್ವಸ್ವ ಎಂದು ಅದರಲ್ಲೇ ಮೈಮರೆತ ಕೈಯನ್ನು ಇಂದು ನರಿಗಳು ಕಿತ್ತುತಿನ್ನುತ್ತಿವೆ" ಎಂದು. ಹೀಗೆ ಮಹಾಭಾರತದ ಸ್ತ್ರೀವಿಲಾಪ ಪರ್ವದಲ್ಲಿ ಗಾಂಧಾರಿಯ ನೋಟದಲ್ಲಿ ರಣರಂಗದ ಅಭಿವ್ಯಕ್ತಿ ಚಿತ್ರಿತವಾಗಿದೆ. ಬನ್ನಿ, ಈ ಹಿನ್ನೆಲೆಯೊಂದಿಗೆ ಭಾಗವತದಲ್ಲಿ 'ಕೃಷ್ಣ ದ್ರೌಪದಿಗೆ ರಣರಂಗವನ್ನು ತೋರಿಸಿದ ಚಿತ್ರಣವನ್ನು' ನೋಡೋಣ.

ಅಥೋ ನಿಶಾಮಯಾಮಾಸ ಕೃಷ್ಣಾಯೈ ಭಗವಾನ್ ಪುರಾ ।
ಪತಿತಾಯಾಃ ಪಾದಮೂಲೇ ರುದಂತ್ಯಾ ಯತ್ ಪ್ರತಿಶ್ರುತಮ್ ॥೧॥

ಪಶ್ಯ ರಾಜ್ಞ್ಯರಿದಾರಾಂಸ್ತೇ ರುದತೋ ಮುಕ್ತಮೂರ್ಧಜಾನ್ ।
ಆಲಿಂಗ್ಯ ಸ್ವಪತೀನ್ ಭೀಮಗದಾಭಗ್ನೋರುವಕ್ಷಸಃ ॥೨॥

ದ್ರೌಪದಿಯನ್ನು ಕೃಷ್ಣ ಯುದ್ಧರಂಗಕ್ಕೆ ಕರೆದುಕೊಂಡು ಹೋಗುತ್ತಾನೆ. ಮೇಲ್ನೋಟಕ್ಕೆ ಇದು ನಮಗೆ ಆಶ್ಚರ್ಯವನ್ನುಂಟುಮಾಡುವ ವಿಷಯ. ಹೆಣದ ರಾಶಿಗಳನ್ನು ನೋಡಲು ಹೆಣ್ಣೊಬ್ಬಳನ್ನು ಕೃಷ್ಣ ಏಕೆ ಯುದ್ಧರಂಗಕ್ಕೆ ಕರೆದುಕೊಂಡು ಹೋದ ಎನ್ನುವುದು ಇಲ್ಲಿ ನಮ್ಮ ಪ್ರಶ್ನೆಯಾದರೆ, ಅದಕ್ಕೊಂದು ಹಿನ್ನೆಲೆ ಇದೆ. ಈ ಹಿಂದೆ ಹೇಳಿದಂತೆ: ಕೃಷ್ಣ ಸಂಧಾನಕ್ಕೆಂದು ಹೊರಟಾಗ ದ್ರೌಪದಿ, ತನ್ನ ಬಿಚ್ಚಿದ ತಲೆಮುಡಿಯನ್ನು ಹಿಡಿದುಕೊಂಡು ಬಂದು ಹೇಳುತ್ತಾಳೆ: ರಾಜಸೂಯದ ಪವಿತ್ರ ತೀರ್ಥದಿಂದ ಅಭಿಷೇಕವಾಗಿದ್ದ ಈ ಕೂದಲನ್ನು ನೀಚ ದುಶ್ಯಾಸನ ಮುಟ್ಟಿ ಅಪವಿತ್ರಗೊಳಿಸಿದ. ಇದರಿಂದ ನನಗಾದ ನೋವು ಎಷ್ಟೆಂಬುದು ನಿನಗೆ ತಿಳಿದಿದೆ" ಎಂದು ಹೇಳಿ ಬಗ್ಗಿ ನಮಸ್ಕರಿಸುತ್ತಾಳೆ ದ್ರೌಪದಿ. ಹೀಗೆ ನಮಸ್ಕರಿಸುವಾಗ ಆಕೆಯ ಕಣ್ಣೀರು ಕೃಷ್ಣನ ಪಾದದ ಮೇಲೆ ಬೀಳುತ್ತದೆ. ಆಗ ಕೃಷ್ಣ ಹೇಳುತ್ತಾನೆ: ಕಣ್ಣೀರು ಒರೆಸಿಕೋ. ಯಾರ ಮೇಲೆ ಕೋಪದಿಂದ ಕಣ್ಣೀರು ಸುರಿಸುತ್ತಿರುವೆಯೋ, ಅವರು ದುರಂತದ ಫಲವನ್ನನುಭವಿಸುವುದನ್ನು ನಾನು ನಿನಗೆ ತೋರಿಸುತ್ತೇನೆ" ಎಂದು. ಈ ಮಾತಿಗನುಗುಣವಾಗಿ ಇಲ್ಲಿ

ಕೃಷ್ಣ ದ್ರೌಪದಿಯನ್ನು ರಣರಂಗಕ್ಕೆ ಕರೆದು ತಂದು ಹೇಳುತ್ತಾನೆ: "ನೋಡು ನಿನ್ನ ಕಣ್ಣೀರಿನ ಫಲ. ಇದು ಭೀಮನ ಗದೆಯ ಅಥವಾ ಅರ್ಜುನನ ಗಾಂಢೀವದ ಆಘಾತದ ಫಲವಲ್ಲ. ಇದು ನಿನ್ನ ಕಣ್ಣೀರಿನ ಫಲ" ಎಂದು. ಒಬ್ಬ ಪತಿವ್ರತೆ ಹೆಣ್ಣಿನ ಕಣ್ಣೀರಿಗಿರುವ ಶಕ್ತಿ ಪ್ರಪಂಚದ ಯಾವ ಆಯುಧಕ್ಕೂ ಇಲ್ಲ. ದ್ರೌಪದಿಯ ಕಣ್ಣೀರಿನ ಫಲವನ್ನು ಇಲ್ಲಿ ಕೃಷ್ಣ ಆಕೆಗೆ ತೋರಿಸುತ್ತಿದ್ದಾನೆ.

ಕೃಷ್ಣ ಹೇಳುತ್ತಾನೆ: "ನೀನು ಯಾರ ಮೇಲೆ ಕೋಪಿಸಿಕೊಂಡು ಕಣ್ಣೀರು ಸುರಿಸಿದೆಯೋ, ನೋಡು ಅವರ ಸ್ಥಿತಿಯನ್ನು. ಸತ್ತು ಬಿದ್ದಿರುವ ತಮ್ಮ ಗಂಡಂದಿರ ದೇಹದ ಮೇಲೆ ಬಿದ್ದು ಹೊರಳಾಡುತ್ತಿರುವ ಅವರ ಹೆಂಡಂದಿರರನ್ನು ನೋಡು. ಇದು ನಿನ್ನ ಕಣ್ಣೀರಿನ ಮತ್ತು ನಿನ್ನ ಕಣ್ಣೀರಿನಿಂದ ಜಾಗೃತವಾದ ಭೀಮನ ಗದೆಯ ಪ್ರಹಾರದ ಫಲ. ಭೀಮನ ಗದೆಯಿಂದ ಮುರಿದ ತೊಡೆ, ಒಡೆದ ಎದೆಯನ್ನು ನೋಡು" ಎಂದು ಕೃಷ್ಣ ದ್ರೌಪದಿಗೆ ರಣರಂಗದ ಆ ಭೀಕರ ದೃಶ್ಯವನ್ನು ತೋರಿಸಿದ.

**ಅಥ ತೇ ಸಂಪರೇತಾನಾಂ ಸ್ವಾನಾಮುದಕಮಿಚ್ಛತಾಂ ।**
**ದಾತುಂ ಸಕೃಷ್ಣಾ ಗಂಗಾಯಾಂ ಪುರಸ್ಕೃತ್ಯ ಯಯುಃ ಸ್ತ್ರಿಯಃ ॥೪॥**

ಸಾಮಾನ್ಯವಾಗಿ ಸತ್ತ ಜೀವಗಳು ಹತ್ತನೇ ದಿನ ತಮ್ಮ ಬಂಧುಗಳು ಕೊಡುವ ದಶಾಂಜಲಿಗಾಗಿ ಕಾದು ಕುಳಿತಿರುತ್ತವಂತೆ. ಇದರ ಅರ್ಥ ಆ ಜೀವಗಳು ಹಸಿವೆ-ಬಾಯಾರಿಕೆಯಿಂದ ಕಾಯುತ್ತವೆ ಎಂದಲ್ಲ. ಸಾಮಾನ್ಯವಾಗಿ ನಿಜವಾದ ಬಂಧುಗಳು ಎಂದರೆ ನಾವು ಆಪತ್ತಿನಲ್ಲಿರುವಾಗ ಬಂದು ನೋಡುವವರು. ಸತ್ತ ಜೀವಗಳಿಗೂ ಸಹ ತಮ್ಮ ಆತ್ಮೀಯರನ್ನು ನೋಡುವ ಆಸೆ ಇರುತ್ತದೆ. ಅದಕ್ಕಾಗಿ ಹತ್ತನೇ ದಿನ ಯಾರ್‍ಯಾರು ಧರ್ಮೋದಕ ಕೊಡುತ್ತಾರೆ ಎಂದು ನೋಡಲು ಬಯಸಿ ಕುಳಿತಿರುತ್ತವಂತೆ ಜೀವಗಳು! ಹೀಗೆ "ತಮ್ಮವರು ಧರ್ಮೋದಕ ಕೊಡಬೇಕು" ಎಂದು ಬಯಸುವ ಬಂಧುಗಳಿಗೆ, ಧರ್ಮೋದಕ ಕೊಡುವುದಕ್ಕೋಸ್ಕರ, ಪಾಂಡವರೆಲ್ಲರೂ ದ್ರೌಪದಿ ಮತ್ತು ಇತರ ಸ್ತ್ರೀಯರೊಂದಿಗೆ ಗಂಗಾನದಿ ತೀರಕ್ಕೆ ಹೋಗುತ್ತಾರೆ.

**ತೇ ನಿನೀಯೋದಕಂ ಸರ್ವೇ ವಿಲಪ್ಯ ಚ ಭೃಶಂ ಪುನಃ ।**
**ಆಪ್ಲುತಾ ಹರಿಪಾದಾಬ್ಜರಜಃಪೂತಸರಿಜ್ಜಲೇ ॥೫॥**

ಗಂಗಾ ನದಿಯಲ್ಲಿ ಎಲ್ಲರೂ ಸತ್ತವರ ಹೆಸರು ಹೇಳಿ ಧರ್ಮೋದಕ ಕೊಟ್ಟು, ಸತ್ತ ವ್ಯಕ್ತಿಯನ್ನು ನೆನಪಿಸಿಕೊಂಡು ಕಣ್ಣೀರು ಸುರಿಸುತ್ತಾರೆ. ನಂತರ ಭಗವಂತನ ಪಾದದ ದೂಳಿಯಿಂದ ಪವಿತ್ರವಾದ ನೀರಿನಲ್ಲಿ ಮಿಂದು, ಸೂತಕ ಮುಕ್ತರಾಗಿ, ಹೊರಟುಬಂದು ನಗರ ಪ್ರವೇಶಿಸುತ್ತಾರೆ. ಇಲ್ಲಿ ಭಗವಂತನ ಪಾದದ ದೂಳಿ ಎಂದಿದ್ದಾರೆ. ಭಗವಂತನ ಪಾದದ ಕಿರುಬೆರಳಿನ ಎಡೆಯಲ್ಲಿ ಸಿಕ್ಕಿಹಾಕಿಕೊಂಡಿರುವ ಸಣ್ಣ ಕಣ ಈ ಬ್ರಹ್ಮಾಂಡ. ನಮ್ಮ ದೃಷ್ಟಿಯಲ್ಲಿ ಅನಂತವಾದ ಈ ಬ್ರಹ್ಮಾಂಡ, ಭಗವಂತನ ಅನಂತತೆಯ ಮುಂದೆ ಒಂದು ಪುಟ್ಟ ದೂಳಿನ ಕಣವಿದ್ದಂತೆ. ಈ ರೀತಿ ದೂಳಿನ ಕಣದಂತಿರುವ ಲೋಕಗಳನ್ನು ಪಾವನಗೊಳಿಸುವವಳು ಗಂಗೆ.

ತತ್ರಾಸೀನಂ ಕುರುಪತಿಂ ಧೃತರಾಷ್ಟ್ರಂ ಸಹಾನುಜಮ್ ।
ಗಾಂಧಾರೀಂ ಪುತ್ರಶೋಕಾರ್ತಾಂ ಪೃಥಾಂ ಕೃಷ್ಣಾಂ ಚ ಕೇಶವಃ ॥೬॥

ಸಾಂತ್ವಯಾಮಾಸ ಮುನಿಭಿರ್ಹತಪುತ್ರಾಂಛುಚಾರ್ಪಿತಾನ್ ।
ಭೂತೇಷು ಕಾಲಸ್ಯ ಗತಿಂ ದರ್ಶಯನ್ನ ಪ್ರತಿಕ್ರಿಯಾಮ್ ॥೭॥

ಉತ್ತರಕ್ರಿಯೆ ಕರ್ಮಾದಿಗಳು ಮುಗಿದ ಮೇಲೂ ಕೂಡಾ ಧೃತರಾಷ್ಟ್ರ, ಗಾಂಧಾರಿ, ಕುಂತಿ(ಪ್ರಥಾ), ದ್ರೌಪದಿ(ಕೃಷ್ಣೆ) ಎಲ್ಲರೂ ಪುತ್ರ-ಪೌತ್ರ ಶೋಕದಲ್ಲಿ ಮುಳುಗಿದ್ದಾರೆ. ಅವರನ್ನು ಕೃಷ್ಣ ಸಂತೈಸುತ್ತಿದ್ದಾನೆ. ಕೃಷ್ಣ ಸಂತೈಸಿದರೂ ಕೂಡಾ ಸಮಾಧಾನವಾಗುವ ಸ್ಥಿತಿಯಲ್ಲಿಲ್ಲದ ಅವರನ್ನು ಅಲ್ಲಿ ಸೇರಿರುವ ಋಷಿ-ಮುನಿಗಳು ಸಂತೈಸುತ್ತಿದ್ದಾರೆ. ಅವರು ಹೇಳುತ್ತಾರೆ: ನೀವ್ಯಾರೂ ಅಪರಾಧಿಗಳಲ್ಲ. ಇದೆಲ್ಲವೂ ವಿಧಿ ನಿಯತಿ. ಅದನ್ನು ನಾವು ಎದುರಿಸಲೇಬೇಕು" ಎಂದು. ಕಾಲಕ್ಕೆ ಕರುಣೆ ಇಲ್ಲ. ಎಲ್ಲರೂ ಕಾಲವಶವಾಗಿರುವುದು ಅನಿವಾರ್ಯ. ಅದಕ್ಕಾಗಿ ದುಃಖಿಸಿ ಫಲವಿಲ್ಲ ಎನ್ನುತ್ತಾರೆ ಋಷಿಗಳು. ಇಲ್ಲಿ ಕಾಲ ಎಂದರೆ ಆ ಭಗವಂತ. ಇದನ್ನು ಕೃಷ್ಣ ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. **ಕಾಲೋಽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।** ಲೋಕಗಳನ್ನು ಕಬಳಿಸಲು ಬೆಳೆದು ನಿಂತಿರುವ ಕಾಲ ಪುರುಷ ನಾನೇ ಎಂದಿದ್ದಾನೆ ಕೃಷ್ಣ. ಕಾಲಪುರುಷ ಕಬಳಿಸಲು ಹೊರಟಾಗ ಅವನನ್ನು ತಡೆಯುವವರು ಯಾರೂ ಇಲ್ಲ. ಎಲ್ಲವೂ ಅವನ ಅಧೀನ. ಕಾಲದ ನಿರ್ಧಾರ ಅಚಲ. ಅದು ಮಾಡಬೇಕಾದ ಕಾಲದಲ್ಲಿ ಮಾಡಬೇಕಾದದ್ದನ್ನು ಮಾಡಿಯೇ ತೀರುತ್ತದೆ. ಅದು ಯಾರ ಕಣ್ಣೀರಿಗೂ ಕರಗುವುದಿಲ್ಲ. ಆದ್ದರಿಂದ ಈ ಸತ್ಯವನ್ನು ತಿಳಿದು, ಹಿಂದೆ ನಡೆದದ್ದನ್ನು ಮರೆತು, ಮುಂದೆ ಚೆನ್ನಾಗಿ ಬದುಕುವ ಯೋಚನೆ ಮಾಡಿ ಎಂದು ಋಷಿಗಳು ಸಮಾಧಾನ ಮಾಡುತ್ತಾರೆ.

ಘಾತಯಿತ್ವಾಽಸತೋ ರಾಜ್ಞಾಃ ಕಚಸ್ಪರ್ಶಹತಾಯುಷಃ ।
ಸಾಧಯಿತ್ವಾಽಜಾತಶತ್ರೋಃ ಸ್ವಾರಾಜ್ಯಂ ಕಿತವೈರ್ಹೃತಮ್ ॥೮॥

ದ್ರೌಪದಿಯ ತಲೆಮುಡಿಯನ್ನು ಮುಟ್ಟಿದ್ದರಿಂದಲೇ ತಮ್ಮ ಆಯುಸ್ಸಿನ ಶೇಷವನ್ನು ಕಳೆದುಕೊಂಡ ದುಷ್ಟ ರಾಜರನ್ನು ಕೊಲ್ಲಿಸಿ, ಕಪಟಿಗಳು ಅಪಹಾರ ಮಾಡಿದ್ದ ಧರ್ಮರಾಯನ ಸ್ವರಾಜ್ಯವನ್ನು ಅವನಿಗೆ ಒಪ್ಪಿಸಿ, ಶ್ರೀಕೃಷ್ಣ ದ್ವಾರಕೆಗೆ ಹೊರಟು ನಿಲ್ಲುತ್ತಾನೆ.

ಆಮಂತ್ರ್ಯ ಪಾಂಡುಪುತ್ರಾಂಶ್ಚ ಶೈನೇಯೋದ್ಧವಸಂಯುತಃ ।
ದ್ವೈಪಾಯನಾದಿಭಿರ್ವಿಪ್ರೈಃ ಪೂಜಿತೈಃ ಪ್ರತಿಪೂಜಿತಃ ॥೧೦॥

ಕೃಷ್ಣ ಪಾಂಡವರಲ್ಲಿ ತಾನು ಹೋಗಿ ಬರುತ್ತೇನೆಂದು ಹೇಳುತ್ತಾನೆ. ಅಲ್ಲಿ ಆಗಮಿಸಿದ್ದ ವೇದವ್ಯಾಸರು,ಪರಶುರಾಮ ಮತ್ತು ಆ ಕಾಲದ ಎಲ್ಲಾ ಋಷಿಗಳಿಗೆ ಶ್ರೀಕೃಷ್ಣ ನಮಸ್ಕರಿಸುತ್ತಾನೆ. ಅವರನ್ನು ಪೂಜಿಸಿ ಸತ್ಕರಿಸುತ್ತಾನೆ. ಇದಕ್ಕೆ ಪ್ರತಿಯಾಗಿ ಅವರೆಲ್ಲರೂ ಕೃಷ್ಣನನ್ನು ಸತ್ಕರಿಸುತ್ತಾರೆ. ಕೃಷ್ಣನ ಜೊತೆಗಾರರಾದ ಸಾತ್ಯಕಿ ಮತ್ತು ಉದ್ಧವ ಕೂಡಾ ಕೃಷ್ಣನ ಜೊತೆಗೆ ಹೊರಟು ನಿಲ್ಲುತ್ತಾರೆ.

ಗಂತುಂ ಕೃತಮತಿರ್ಬ್ರಹ್ಮನ್ ದ್ವಾರಕಾಂ ರಥಮಾಸ್ಥಿತಃ ।
ಉಪಲೇಭೇಽಭಿಧಾವಂತೀಮುತ್ತರಾಂ ಭಯವಿಹ್ವಲಾಮ್ ॥೦೮॥

ಸತ್ಕಾರ, ಬೀಳ್ಕೊಡುಗೆ ಮುಗಿದ ಮೇಲೆ ದ್ವಾರಕೆಗೆ ಹೋಗಲು ಕೃಷ್ಣ ರಥವನ್ನೇರುತ್ತಾನೆ. ಕೃಷ್ಣ ರಥದಲ್ಲಿ ಕುಳಿತಿದ್ದಾಗ ಅಲ್ಲಿ ಒಂದು ಘಟನೆ ನಡೆಯುತ್ತದೆ. ತುಂಬು ಗರ್ಭಿಣಿ, ಅಭಿಮನ್ಯುವಿನ ಪತ್ನಿಯಾದ ಉತ್ತರೆ ಭಯಗ್ರಸ್ತಳಾಗಿ ಕೂಗಿಕೊಂಡು ಕೃಷ್ಣನ ಬಳಿ ಬಂದು, ಕೃಷ್ಣನ ಪಾದವನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾಳೆ.

ಉತ್ತರೋವಾಚ-

ಪಾಹಿಪಾಹಿ ಮಹಾಬಾಹೋ ದೇವದೇವ ಜಗತ್ಪತೇ ।
ನಾನ್ಯಂ ತ್ವದಭಯಂ ಪಶ್ಯೇ ಯತ್ರ ಮೃತ್ಯುಃ ಪರಸ್ಪರಮ್ ॥೦೯॥

ಉತ್ತರೆ ಕೃಷ್ಣನ ಪಾದವನ್ನು ಹಿಡಿದುಕೊಂಡು ಹೇಳುತ್ತಾಳೆ: "ಹೇ ಕೃಷ್ಣ, ನನ್ನನ್ನು ಸಾವಿನ ದವಡೆಯಿಂದ ಪಾರುಮಾಡು. ಈ ಪ್ರಪಂಚದಲ್ಲಿ ಭಯಪರಿಹಾರ ಮಾಡುವ ಶಕ್ತಿ ನಿನಗಲ್ಲದೆ ಇನ್ನೊಬ್ಬರಿಗಿಲ್ಲ. ನೀನೇ ನನ್ನನ್ನು ಕಾಪಾಡಬೇಕು" ಎಂದು. ಇಲ್ಲಿ ಉತ್ತರೆ ಹೇಳಿರುವ ಮಾತನ್ನೇ ಉಪನಿಷತ್ತು ಹೇಳುತ್ತದೆ. **ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ ॥ಕಠ-೧.೩.೨॥** ಭಗವಂತನೊಬ್ಬನೇ ಅಭಯಪ್ರದ. ಉಳಿದವರೆಲ್ಲರೂ ಒಂದಲ್ಲಾ ಒಂದು ರೀತಿಯಿಂದ ಭಯಗ್ರಸ್ಥರೇ. ಉತ್ತರೆ ಹೇಳುತ್ತಾಳೆ: ಎಲ್ಲರೂ ಒಂದಲ್ಲಾ ಒಂದು ದಿನ ಸಾಯುವವರೇ. ಅಂತವರು ಹೇಗೆ ಇನ್ನೊಬ್ಬರನ್ನು ರಕ್ಷಿಸಬಲ್ಲರು? ಜನ್ಮ-ಮರಣಗಳಿಂದಾಚೆಗಿರುವ ನೀನೊಬ್ಬನೇ ನಮ್ಮನ್ನು ರಕ್ಷಿಸಬಲ್ಲೆ" ಎಂದು.

ಅಭಿದ್ರವತಿ ಮಾಮೀಶ ಶರಸ್ತಪ್ತಾಯಸೋ ವಿಭೋ ।
ಕಾಮಂ ದಹತು ಮಾಂ ನಾಥ ಮಾ ಮೇ ಗರ್ಭೋ ನಿಪಾತ್ಯತಾಮ್ ॥೧೩॥

ಮುಂದುವರಿದು ಉತ್ತರೆ ಹೇಳುತ್ತಾಳೆ: "ಒಂದು ಕಾದ ಕಬ್ಬಿಣದ ಸಲಾಕೆಯಂತಹ ಭಯಂಕರ ಬೆಂಕಿ ನನ್ನನ್ನು ಸುಟ್ಟುಬಿಡಬೇಕೆಂದು ನನ್ನ ಕಡೆ ಓಡಿ ಬರುತ್ತಿದೆ. ಒಂದು ವೇಳೆ ಅದು ನನ್ನನ್ನು ಸುಡುವುದಾದರೆ ಸುಟ್ಟುಬಿಡಲಿ. ನನ್ನ ಆಸೆ ಅದಲ್ಲ. ಇಂದು ಪಾಂಡವರ ಒಂದೇ ಒಂದು ಸಂತಾನ ನನ್ನ ಹೊಟ್ಟೆಯಲ್ಲಿ ಬೆಳೆಯುತ್ತಿದೆ. ಅದನ್ನು ಕಳೆದುಕೊಂಡರೆ ಪಾಂಡವರ ಸಂತು ನಿಸಂತುವಾಗುತ್ತದೆ. ಆದ್ದರಿಂದ ನನ್ನ ಗರ್ಭಕ್ಕೆ ಏನೂ ಅಪಾಯವಾಗದಂತೆ ರಕ್ಷಣೆ ಮಾಡು" ಎಂದು ಕೃಷ್ಣನ ಪಾದಕ್ಕೆ ಶರಣಾಗುತ್ತಾಳೆ ಉತ್ತರೆ.

ಸೂತ ಉವಾಚ-

ಉಪಧಾರ್ಯ ವಚಸ್ತಸ್ಯಾ ಭಗವಾನ್ ಭಕ್ತವತ್ಸಲಃ ।
ಅಪಾಂಡವಮಿದಂ ಕರ್ತುಂ ದ್ರೌಣೇರಸ್ತ್ರಮಬುಧ್ಯತ ॥೧೪॥

ಉತ್ತರೆಯ ಮಾತನ್ನು ಕೇಳಿದ ತಕ್ಷಣ, ಪಾಂಡವರ ವಂಶವನ್ನು ನಿರ್ವಂಶಮಾಡುವ ದುರುದ್ದೇಶದಿಂದ ಅಶ್ವತ್ಥಾಮ ಪ್ರಯೋಗಿಸಿದ ಬ್ರಹ್ಮಾಸ್ತ್ರವೇ ಉತ್ತರೆಯ ಬೆನ್ನಟ್ಟಿ ಬಂದಿದೆ ಎನ್ನುವ ಸತ್ಯ ಕೃಷ್ಣನಿಗೆ ತಿಳಿಯುತ್ತದೆ.

**ವ್ಯಸನಂ ವೀಕ್ಷ್ಯ ತತ್ ತೇಷಾಮನನ್ಯವಿಷಯಾತ್ಮನಾಮ್ ।**
**ಸುದರ್ಶನೇನ ಸ್ವಾಸ್ತ್ರೇಣ ಸ್ವಾನಾಂ ರಕ್ಷಾಂ ವ್ಯಧಾದ್ ವಿಭುಃ ॥೧೩॥**

ಇದು ಉತ್ತರೆಯೊಬ್ಬಳ ದುಃಖವಲ್ಲ. ಇಡೀ ಪಾಂಡವ ವಂಶದ ದುಃಖ. ಇಲ್ಲಿ ಪಾಂಡವರ ಎಲ್ಲಾ ಸಾಧನೆಯನ್ನು ವ್ಯರ್ಥ ಮಾಡುವ ಪ್ರಯತ್ನ ಅಶ್ವತ್ಥಾಮನಿಂದ ನಡೆಯುತ್ತಿದೆ. ಇಡೀ ಪಾಂಡವ ಮನೆತನಕ್ಕೆ ಬಂದಿರುವ ಈ ವ್ಯಸನವನ್ನು ಕೃಷ್ಣ ಗಮನಿಸಿದ. ಈ ಹಿಂದೆ ಹೇಳಿದಂತೆ ಭಗವಂತ ಭಕ್ತವತ್ಸಲ. ಆತ ಒಬ್ಬ ಸಾಮಾನ್ಯ ಭಕ್ತನ ಕರೆಗೂ ಓಗೊಡುತ್ತಾನೆ. ಹೀಗಿರುವಾಗ ಪಾಂಡವರ ಕರೆಗೆ ಸ್ಪಂದಿಸನೇ ಆತ? ಪಾಂಡವರ ಪ್ರತಿಯೊಂದು ಕ್ರಿಯೆಯ ಹಿಂದೆ ಭಗವದಾರಾಧನೆ ಇದೆ. ಅವರು ತಮ್ಮ ಇಡೀ ಬದುಕಿನಲ್ಲಿ ಭಗವಂತನನ್ನು ಅನನ್ಯವಾಗಿ ಪ್ರೀತಿಸಿದವರು. ಗೀತೆಯಲ್ಲಿ ಹೇಳುವಂತೆ: **ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ । ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥೮-೧೪॥** ಅಂದರೆ: "ನಿರಂತರ ನನ್ನನ್ನು ನೆನೆಯುವವನಿಗೆ, ಅಂತಹ ನಿರಂತರ ಸಾಧನೆಯಿಂದ ಸಿದ್ಧಿಪಡೆದವನಿಗೆ ನಾನು ಕೈಸೆರೆ" ಎಂದರ್ಥ. ಈ ಹಿನ್ನೆಲೆಯಲ್ಲಿ ಪಾಂಡವರನ್ನು ನೋಡಿದರೆ ಅವರು ಕೃಷ್ಣ ಇಟ್ಟ ಹೆಜ್ಜೆಯನ್ನು ಅನುಸರಿಸಿ ನಡೆದವರು. ತಮ್ಮ ಜೀವನರಥಕ್ಕೆ ಕೃಷ್ಣನನ್ನು ಸಾರಥಿಯನ್ನಾಗಿಸಿಕೊಂಡು ಬದುಕಿದವರು. ಅಂತಹ ಪಾಂಡವರ ರಕ್ಷಣೆಯ ಭಾರವನ್ನು ಇಲ್ಲಿ ಶ್ರೀಕೃಷ್ಣ ವಹಿಸುತ್ತಾನೆ.

ನಮಗೆ ತಿಳಿದಂತೆ ಅಶ್ವತ್ಥಾಮ ಬ್ರಹ್ಮಾಸ್ತ್ರ ಪ್ರಯೋಗಿಸಿ ಈಗಾಗಲೇ ಅನೇಕ ದಿನಗಳಾಗಿವೆ. ಆದರೆ ಇಲ್ಲಿಯ ತನಕ ಯಾವುದೇ ಪ್ರಭಾವ ಬೀರದ ಆ ಅಸ್ತ್ರ, ಈಗ ಕೃಷ್ಣ ದ್ವಾರಕೆಗೆ ಹೊರಟು ನಿಂತಾಗ ಕೆಲಸ ಮಾಡಲಾರಂಭಿಸಿದೆ. ಇಂತಹ ಸಂದರ್ಭದಲ್ಲಿ ಶ್ರೀಕೃಷ್ಣ ಉತ್ತರೆಯ ಗರ್ಭದಲ್ಲಿ ಚಕ್ರಧಾರಿಯಾಗಿ ನಿಂತು ಮಗುವಿನ ರಕ್ಷಣೆ ಮಾಡುವುದರ ಮೂಲಕ ಪಾಂಡವರ ರಕ್ಷಣೆ ಮಾಡುತ್ತಾನೆ.

**ಅಂತಃಸ್ಥಃ ಸರ್ವಭೂತಾನಾಮಾತ್ಮಾ ಯೋಗೇಶ್ವರೋ ಹರಿಃ ।**
**ಸ್ವಮಾಯಯಾಽಽವೃಣೋದ್ ಗರ್ಭಂ ವೈರಾಟ್ಯಾಃ ಕುರುತಂತವೇ ॥೧೭॥**

ಭಗವಂತ ಸರ್ವಾಂತರ್ಯಾಮಿ. ಆತ ದ್ವಾರಕೆಗೆ ಹೊರಟು ನಿಂತ ಎಂದರೆ ಹಸ್ತಿನಪುರವನ್ನು ತ್ಯಜಿಸಿದ ಎಂದರ್ಥವಲ್ಲ. ಸರ್ವಗತನಾದ ಭಗವಂತ ಒಂದು ರೂಪದಿಂದ ಹೊರಟರೆ, ಇನ್ನೊಂದು ರೂಪದಲ್ಲಿ ಇದ್ದೇ ಇರುತ್ತಾನೆ. ವಾಸ್ತವವಾಗಿ ನೋಡಿದರೆ ಭಗವಂತ ಪ್ರತಿಯೊಬ್ಬರೊಳಗೂ ತದ್ವತ್ ರೂಪನಾಗಿ ನೆಲೆಸಿದ್ದಾನೆ. ಇಲ್ಲಿ ಒಂದು ರೂಪದಲ್ಲಿ ಉತ್ತರೆಯ ಒಳಗಿರುವ ಭಗವಂತ, ಇನ್ನೊಂದು ರೂಪನಾಗಿ ಆಕೆಯ ದೇಹವನ್ನು ಪ್ರವೇಶಿಸಿದ. ಇದು ಭಗವಂತನ ಲೀಲೆ.

ಮೇಲಿನ ಶ್ಲೋಕದಲ್ಲಿ ಭಗವಂತನನ್ನು 'ಆತ್ಮಾ' ಮತ್ತು 'ಯೋಗೇಶ್ವರಃ' ಎಂದು ಸಂಬೋಧಿಸಿದ್ದಾರೆ. ಆತ್ಮಾ ಎಂದರೆ ಸ್ವಾಮಿ. ನಮ್ಮೊಳಗೆ ತುಂಬಿ, ನಮ್ಮನ್ನು ನಿಯಂತ್ರಿಸಿ, ವಿಷಯಭೋಗಗಳನ್ನು ಮಾಡಿ, ನಮಗೂ ವಿಷಯ ಭೋಗಗಳನ್ನು ಕೊಡುತ್ತಾ, ನಮ್ಮ ಜೀವನದ ಎಲ್ಲಾ ಮುಖಗಳನ್ನೂ ನಿಯಂತ್ರಿಸುವ 'ಸ್ವಾಮಿ' ಭಗವಂತ 'ಆತ್ಮಾ'. ಇನ್ನು 'ಯೋಗೇಶ್ವರಃ' ಎಂದರೆ: ಎಲ್ಲಾ ಐಶ್ವರ್ಯಗಳ ಸಿದ್ಧಿ ಉಳ್ಳವನು. ಗೀತೆಯಲ್ಲಿ ಹೇಳುವಂತೆ 'ಯತ್ರ

**ಯೋಗೇಶ್ವರಃ ಕೃಷ್ಣಃ'**. ಆತ ಎಲ್ಲಾ ಯೋಗಗಳ ಒಡೆಯ. ಇಂತಹ ಯೋಗೇಶ್ವರ ಕೃಷ್ಣ, ವಿರಾಟನ ಮಗಳಾದ ಉತ್ತರೆಯ ಗರ್ಭದಲ್ಲಿ ಬೆಳೆಯುತ್ತಿರುವ ಕುರುವಂಶದ ಸಂತತಿಗೆ ವಿಶೇಷ ಆವರಣವಾಗಿ ನಿಂತುಬಿಟ್ಟ. [ತಾನು ಗರ್ಭದಲ್ಲಿದ್ದಾಗ ಚಕ್ರಧಾರಿ ರೂಪದಲ್ಲಿ ಕೃಷ್ಣ ದರ್ಶನ ಕೊಟ್ಟಿರುವುದನ್ನು ಪರೀಕ್ಷಿತ ರಾಜ ವಿವರಿಸುವುದನ್ನು ಮುಂದೆ ಭಾಗವತವೇ ವಿವರಿಸುತ್ತದೆ].

ಮಹಾಭಾರತದಲ್ಲಿ ಹೇಳುವಂತೆ: ಅಶ್ವತ್ಥಾಮ ತನ್ನ ಜಿದ್ದನ್ನು ಬಿಡದೆ "ಪಾಂಡವರ ವಂಶವನ್ನು ನಿರ್ವಂಶ ಮಾಡಬೇಕೆನ್ನುವುದು ನನ್ನ ಸಂಕಲ್ಪ" ಎಂದು ಹೇಳಿದಾಗ, ಕೃಷ್ಣ ಒಂದು ಮಾತನ್ನು ಹೇಳುತ್ತಾನೆ: "ತಿಳಿಗೇಡಿತನದಿಂದ ಹುಚ್ಚು-ಹುಚ್ಚಾಗಿ ಮಾತನಾಡುತ್ತಿರುವ ನಿನಗೆ ಕೃಷ್ಣ ಅಂದರೆ ಏನು ಎಂದು ತೋರಿಸುವ ಅಗತ್ಯವಿದೆ. ನಿನಗೆ ಅದೇನು ಮಾಡಲು ಶಕ್ಯವೋ ಅದನ್ನು ಮಾಡು, ಆದರೆ ಪಾಂಡವರ ವಂಶ ಉಳಿಯುತ್ತದೆ. ಇದು ನನ್ನ ಸಂಕಲ್ಪ" ಎಂದು. ಈ ಮಾತಿಗನುಗುಣವಾಗಿ ಇಲ್ಲಿ ಚಕ್ರಧಾರಿ ರೂಪನಾಗಿ ಕೃಷ್ಣ ಪರೀಕ್ಷಿತನ ರಕ್ಷಣೆಗೆ ನಿಂತ.

ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಮ್ ।
ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ ಭೃಗೂದ್ವಹ ॥೧೮॥

ಬ್ರಹ್ಮಾಸ್ತ್ರವನ್ನು ತಡೆಯುವುದು ಸಾಧಾರಣವಾದ ಕೆಲಸವಲ್ಲ. ಇಲ್ಲಿ ಅಸ್ತ್ರ ಪ್ರಯೋಗಿಸಿದವರು ಸ್ವಯಂ ರುದ್ರ ದೇವರ ಅವತಾರ. ಬ್ರಹ್ಮಾಸ್ತ್ರದ ಋಷಿ ಚತುರ್ಮುಖ ಮತ್ತು ದೇವತೆ ಸ್ವಯಂ ನಾರಾಯಣ. ಇದು ತ್ರಿಮೂರ್ತಿ ಸಂಗಮ. ಇಂತಹ ಶಕ್ತಿ ಎಂದೂ ಹುಸಿಯಾಗದು. ಆದರೆ ಇದು ವಿಷ್ಣುವನ್ನು ಅಭಿಮಂತ್ರಿಸಿದ ತೇಜಸ್ಸು. ಇಂತಹ ತೇಜಸ್ಸನ್ನು ಸ್ವಯಂ ವಿಷ್ಣುವೇ ತೇಜಸ್ಸಾಗಿ ನಿಂತು ತಡೆದಾಗ ಆ ಅಸ್ತ್ರ ಉಪಶಮನವಾಗುತ್ತದೆ.

ಮಾ ಮಂಸ್ಥಾ ಹ್ಯೇತದಾಶ್ಚರ್ಯಂ ಸರ್ವಾಶ್ಚರ್ಯಮಯೇಽಚ್ಯುತೇ ।
ಯ ಇದಂ ಮಾಯಯಾ ದೇವ್ಯಾ ಸೃಜತ್ಯವತಿ ಹಂತ್ಯಜಃ ॥೧೯॥

ಶೌನಕರು ಹೇಳುತ್ತಾರೆ: "ಬ್ರಹ್ಮಾಸ್ತ್ರವನ್ನು ಕೃಷ್ಣ ಉಪಶಮನ ಮಾಡಿರುವುದನ್ನು ನಂಬಲಾರದ ವಿಸ್ಮಯ ಎಂದುಕೊಳ್ಳಬೇಡಿ" ಎಂದು. ಏಕೆಂದರೆ ಭಗವಂತ ಸ್ವಯಂ 'ಅಚ್ಚರಿ'. ಆತ ವಿಸ್ಮಯ. ಅಂತಹ 'ಅದ್ಭುತ' ಭಗವಂತ ಬ್ರಹ್ಮಾಸ್ತ್ರವನ್ನು ತಡೆದ ಎಂದರೆ ಅಲ್ಲಿ ಯಾವ ಅಚ್ಚರಿಯೂ ಇಲ್ಲ. ಇಚ್ಛಾಮಾತ್ರದಿಂದ, ಪ್ರಕೃತಿಯ ಮುಖೇನ ಇಡೀ ಬ್ರಹ್ಮಾಂಡವನ್ನು ನಿರ್ಮಿಸಿದವ ಆತ. ಒಂದು ದಿನ ಈ ಬ್ರಹ್ಮಾಂಡವನ್ನು ಕಬಳಿಸುವವನೂ ಆತನೇ. ಇಂತಹ ಹುಟ್ಟು-ಸಾವಿಲ್ಲದ ಭಗವಂತ ಬ್ರಹ್ಮಾಸ್ತ್ರದಿಂದ ಪಾಂಡವ ಸಂತತಿ ಉಳಿಸಿದ ಎನ್ನುವುದು ಆತನ ಒಂದು ಅದ್ಭುತ ಲೀಲೆ.

ಬ್ರಹ್ಮತೇಜೋವಿನಿರ್ಮುಕ್ತೈರಾತ್ಮಜೈಃ ಸಹ ಕೃಷ್ಣಯಾ ।
ಪ್ರಯಾಣಾಭಿಮುಖಂ ಕೃಷ್ಣಮಿದಮಾಹ ಪೃಥಾ ಸತೀ ॥೨೦॥

ಉತ್ತರೆಯ ಗರ್ಭದಲ್ಲಿನ ಶಿಶುವನ್ನು ಸಂರಕ್ಷಿಸಿದ ಘಟನೆಯನ್ನು ನೋಡಿ ಎಲ್ಲರೂ ಸಂತೋಷಪಡುತ್ತಾರೆ. ಪ್ರಯಾಣಕ್ಕೆ ಮುಂಚಿತವಾಗಿ ಕುಂತಿ ಕೃಷ್ಣನನ್ನು ವಿಶೇಷವಾಗಿ ಸ್ತುತಿಸುತ್ತಾಳೆ.

# ಕುಂತಿ ಮಾಡಿದ ಕೃಷ್ಣಸ್ತುತಿ

**ಪ್ರಥೋವಾಚ-**

**ನಮಸ್ಯೇ ಪುರುಷಂ ತ್ವಾದ್ಯಮೀಶ್ವರಂ ಪ್ರಕೃತೇಃ ಪರಮ್ ।**
**ಅಲಕ್ಷ್ಯಂ ಸರ್ವಭೂತಾನಾಮಂತರ್ಬಹಿರಪಿ ಧ್ರುವಮ್ ॥೧೮॥**

ಉಪನಿಷತ್ತಿನ ಸಾರ ತುಂಬಿದ, ಅಪೂರ್ವ ಪದಗುಚ್ಛಗಳಿಂದ ಕೂಡಿದ ಶ್ಲೋಕಗಳಿಂದ ಕೃಷ್ಣನನ್ನು ಸ್ತೋತ್ರಮಾಡುತ್ತಿರುವ ಕುಂತಿಯ ವೈದೂಷ್ಯವನ್ನು ನಾವಿಲ್ಲಿ ಕಾಣಬಹುದು. ಕುಂತಿ ಹೇಳುತ್ತಾಳೆ: "ಗುಣತ್ರಯ(ಪ್ರಕೃತಿ)ಗಳಿಂದ ದೇಹವನ್ನು ಸೃಷ್ಟಿಮಾಡಿ, ಆ ದೇಹದೊಳಗೆ ನಮ್ಮನ್ನಿಟ್ಟು, ನಮ್ಮೊಳಗೆ ಅಂತರ್ಯಾಮಿಯಾಗಿ ನೆಲೆಸಿದ 'ಪುರುಷಃ' ನೀನು" ಎಂದು. ಈ ಬ್ರಹ್ಮಾಂಡ ಸೃಷ್ಟಿಗೂ ಮೊದಲು, ಬ್ರಹ್ಮಾಂಡಕ್ಕಿಂತಲೂ ದೊಡ್ಡದಾಗಿ, ಅನಂತ ಆಕಾಶದಲ್ಲಿ ತುಂಬಿರುವ ಭಗವಂತ ಪುರುಷಃ. ಇಂತಹ ಭಗವಂತ ಬ್ರಹ್ಮಾಂಡ ಸೃಷ್ಟಿ ಮಾಡಿ, ಬ್ರಹ್ಮಾಂಡದೊಳಗೆ ತುಂಬಿದ. ನಂತರ ಬ್ರಹ್ಮಾಂಡದಲ್ಲಿ ಸಮಸ್ತ ಪಿಂಡಾಂಡಗಳನ್ನು ಸೃಷ್ಟಿಸಿ, ಪ್ರತಿಯೊಂದು ಪಿಂಡಾಂಡದಲ್ಲಿ ತುಂಬಿದ. ಪ್ರಕೃತಿಯಿಂದ ದೇಹವನ್ನು ಸೃಷ್ಟಿಮಾಡಿ ಅದರೊಳಗೆ ತಾನೂ ಸೇರಿದ ಭಗವಂತ, ಪ್ರಕೃತಿಗೆ ಬದ್ಧನಾಗಿಲ್ಲ. ಏಕೆಂದರೆ ಆತ ಗುಣಾತೀತ. ಹೀಗೆ ಗುಣದ ಲೇಪವಿಲ್ಲದೆ, ಗುಣಬದ್ಧ ಶರೀರದಲ್ಲಿ ಭಗವಂತ ನೆಲೆಸಿದ್ದಾನೆ. ಇಲ್ಲಿ ಕುಂತಿ ಹೇಳುತ್ತಾಳೆ: "ನಮಗೆ ಅಗೋಚರನಾಗಿ ನಮ್ಮ ಮಾತು-ಮನಗಳಿಗೆ ಮೀರಿ ನಮ್ಮೊಳಗೆ ನೀನು ತುಂಬಿದ್ದೀಯ" ಎಂದು. ಭಗವಂತ ಎಲ್ಲರೊಳಗೂ ತುಂಬಿದ್ದಾನೆ. ಆದರೆ ಆತ ಎಲ್ಲರಿಗೂ ಅಗೋಚರ. ಅವನನ್ನು ಕಾಣುವುದು, 'ಹೀಗೇ ಇದ್ದಾನೆ' ಎಂದು ಹೇಳುವುದು ಅಸಾಧ್ಯ. ಆತನನ್ನು ಮನಸ್ಸು ಗ್ರಹಿಸಲಾರದು.

**ಮಾಯಾಯವನಿಕಾಚ್ಛನ್ನೋ ಮಾಯಾಽಧೋಕ್ಷಜ ಮರ್ತ್ಯಯಾ ।**
**ನ ಲಕ್ಷ್ಯಸೇ ಮೂಢದೃಶಾ ನಟೋ ನಾಟ್ಯಚರೋ ಯಥಾ ॥೧೯॥**

ಮುಂದುವರಿದು ಕುಂತಿ ಹೇಳುತ್ತಾಳೆ: "ಮಾಯೆಯ ಪರದೆಯ ಮರೆಯಲ್ಲಿ ಮರೆಯಾಗಿ ನಿಂತವನು ನೀನು" ಎಂದು. ನಮಗೂ ಭಗವಂತನಿಗೂ ನಡುವೆ ಅಜ್ಞಾನವೆಂಬ ಪರದೆ ಇದೆ. ಹಾಗಾಗಿ ಆತ ನಮ್ಮೆದುರೇ ಇದ್ದರೂ ನಮಗೆ ಕಾಣುವುದಿಲ್ಲ. ಋಗ್ವೇದದಲ್ಲಿ ಹೇಳುವಂತೆ: "**ನ ತಂ ವಿದಾಥ ಯ ಇಮಾ ಜಜಾನಾನ್ಯದ್ಯುಷ್ಮಾಕಮಂತರಂ ಬಭೂವ । ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ ॥೧೦.೦೮೨.೦೭ ॥**" ಭಗವಂತ ನಮಗೆ ತಿಳಿದ ಯಾವ ವಸ್ತುವೂ ಅಲ್ಲ. ಆತ ಎಲ್ಲವುದಕ್ಕಿಂತ ಭಿನ್ನ. ಆತನನ್ನು ಎಲ್ಲೋ ಹುಡುಕುವುದು ಬೇಡ. ಆತ ನಮ್ಮೊಳಗೇ ಇದ್ದಾನೆ. ಆದರೆ ಮಂಜುಕವಿದ ಕಣ್ಣು ನಮ್ಮದು. ಆದ್ದರಿಂದ ಆತ ನಮ್ಮೆದುರೇ ಇದ್ದರೂ ನಾವು ಆತನನ್ನು ಕಾಣಲಾರೆವು. ಇಲ್ಲಿ ಕುಂತಿ ಹೇಳುತ್ತಾಳೆ: ನಾವು ಹುಟ್ಟು-ಸಾವಿಗೆ ಬದ್ಧರಾದವರು. ಆದರೆ ನೀನು ಪ್ರತ್ಯಕ್ಷಕ್ಕೆ ಗೋಚರನಾಗದ ಅಧೋಕ್ಷಜ. ಇಂತಹ ನಿನ್ನನ್ನು ಒಬ್ಬ ಸಾಮಾನ್ಯಳಾದ ನಾನು ಕಾಣುವುದುಂಟೇ? ಪರದೆಯ ಹಿಂದಿರುವ ನಟನಂತೆ, ನಮ್ಮ ಎದುರಿಗಿದ್ದರೂ ನಮಗೆ ಗೋಚರನಾಗದ ಕೃಷ್ಣ ನೀನಲ್ಲವೇ?" ಎಂದು ಪ್ರಶ್ನಿಸುತ್ತಾಳೆ ಕುಂತಿ.

ತಥಾ ಪರಮಹಂಸಾನಾಂ ಮುನೀನಾಮಮಲಾತ್ಮನಾಮ್ ।
ಭಕ್ತಿಯೋಗವಿಧಾನಾರ್ಥಂ ಕಥಂ ಪಶ್ಯೇಮ ಹಿ ಸ್ತ್ರಿಯಃ ॥೨೩॥

"ಸಂಸಾರದಲ್ಲಿ ಮುಳುಗಿದ ಒಬ್ಬ ಸಾಮಾನ್ಯ ಸ್ತ್ರೀ ನಾನು. ಆದರೆ ನೀನು ಪರಮಹಂಸರ, ಮುನಿಗಳ ಮತ್ತು ಅಮಲಾತ್ಮರ ಭಕ್ತಿಗೆ ವಿಷಯಿಕನಾದವನು. ಇಂತಹ ನಿನ್ನನ್ನು ನನ್ನಂತ ಸಾಮಾನ್ಯ ಸ್ತ್ರೀ ಅರಿಯಲು ಸಾಧ್ಯವೇ?" ಎಂದು ತನ್ನ ಅಸಾಯಕತೆಯನ್ನು ವ್ಯಕ್ತಪಡಿಸುತ್ತಾಳೆ ಕುಂತಿ. ಇಲ್ಲಿ ಅಮಲಾತ್ಮರು ಎಂದರೆ ಕಾಮ-ಕ್ರೋಧಾದಿಗಳನ್ನು ಗೆದ್ದು, ರಜಸ್ಸು-ತಮಸ್ಸುಗಳನ್ನು ಸೆಳೆದು, ಶುದ್ಧ ಸಾತ್ತ್ವಿಕ ಮನಸ್ಸನ್ನು ಗಳಿಸಿದವರು. ಇಂತಹ ಅಮಲಾತ್ಮರು ನಿರಂತರ ಭಗವಂತನ ಚಿಂತನೆ ಮಾಡಿ ಮುನಿಗಳಾಗಿ ನಂತರ ಪರಮಹಂಸರಾಗುತ್ತಾರೆ. ಸತ್ತ್ವ-ರಜಸ್ಸು-ತಮಸ್ಸಿನ ಮಿಶ್ರಣದಲ್ಲಿ ಕೇವಲ ಸತ್ತ್ವವನ್ನಷ್ಟೇ ಹೀರಿ ಅದರಲ್ಲೇ ಸದಾ ನೆಲೆನಿಲ್ಲಬಲ್ಲ ವಿರಕ್ತರನ್ನು ಪರಮಹಂಸರು ಎನ್ನುತ್ತಾರೆ. ಭಗವಂತನನ್ನು ಬಿಟ್ಟು ಇತರ ವಿಷಯ ಇವರ ಮನಸ್ಸಿಗೆ ಸುಳಿಯುವುದಿಲ್ಲ.

ಕೃಷ್ಣಾಯ ವಾಸುದೇವಾಯ ದೇವಕೀನಂದನಾಯ ಚ ।
ನಂದಗೋಪಕುಮಾರಾಯ ಗೋವಿಂದಾಯ ನಮೋ ನಮಃ ॥೨೪॥

ಕುಂತಿ ಕೃಷ್ಣನನ್ನು ಸ್ತುತಿಸುವ ಈ ಶ್ಲೋಕ ಒಂದು ಅಪೂರ್ವವಾದ ಮಂತ್ರ. ಇದು ಮೇಲ್ನೋಟಕ್ಕೆ ಬಹಳ ಸರಳವಾಗಿದ್ದು, ಸಾಮಾನ್ಯವಾಗಿ ಎಲ್ಲರಿಗೂ ಅರ್ಥವಾಗುವ ಶ್ಲೋಕ. ಮೇಲ್ನೋಟದಲ್ಲಿ ನೋಡಿದರೆ ಇದು ಕೃಷ್ಣನ ವಿವಿಧ ನಾಮಗಳನ್ನು ಹೇಳುತ್ತದೆ ಮತ್ತು "ವಸುದೇವ-ದೇವಕಿಯರ ಮಗನಾಗಿ ಹುಟ್ಟಿ, ನಂದಗೋಪನ ಮನೆಯಲ್ಲಿ ಬೆಳೆದು, ಗೋವುಗಳ ರಕ್ಷಣೆ ಮಾಡುತ್ತಾ ಓಡಾಡಿದ ಕೃಷ್ಣನಿಗೆ ನಮೋ ನಮಃ" ಎಂದು ಹೇಳಿದಂತೆ ಕಾಣುತ್ತದೆ. ಆದರೆ ಮೇಲ್ನೋಟಕ್ಕೆ ಕಾಣುವ ಅರ್ಥವಲ್ಲದೇ ನಾವು ಆಳಕ್ಕಿಳಿದು ನೋಡಬೇಕಾದ ಅನೇಕ ಅರ್ಥಗಳು ಈ ಮಂತ್ರದಲ್ಲಡಗಿದೆ.

ಇದು ಕುಂತಿಯ ಅಂತರಂಗ ದರ್ಶನದಿಂದ ಮೂಡಿಬಂದ ಶ್ಲೋಕ. ಆದ್ದರಿಂದ ಆ ಅಂತರಂಗ ದರ್ಶನದಲ್ಲಿ ಅವಳು ಕಂಡ, ಈ ಮಂತ್ರದ ಒಳಗೆ ಹುದುಗಿರುವ ಒಳನೋಟವನ್ನು ನಾವಿಲ್ಲಿ ನೋಡಬೇಕು. ಇಲ್ಲಿ ಪ್ರಸ್ತುತಪಡಿಸಲಾದ ಭಗವಂತನ ಪ್ರತಿಯೊಂದು ನಾಮಗಳ ಆಯ್ಕೆಗೆ ಒಂದು ವಿಶಿಷ್ಠ ಕಾರಣವಿದೆ. ಪ್ರತಿಯೊಂದು ನಾಮವನ್ನೂ ಕೂಡಾ ಒಂದು ವಿಶಿಷ್ಠ ಕ್ರಮದಲ್ಲಿ ಹೇಳಲಾಗಿದೆ. ಇವೆಲ್ಲವನ್ನೂ ಬಿಡಿಸಿ ನೋಡಿದಾಗ ಮಾತ್ರ ಈ ಮಂತ್ರದ ಹಿಂದಿನ ಸಂದೇಶ ನಮಗೆ ತಿಳಿಯುತ್ತದೆ.

'ಕೃಷ್ಣ' ಎಂದರೆ: ಎಲ್ಲರನ್ನೂ ಆಕರ್ಷಣೆ ಮಾಡತಕ್ಕಂತಹ ಶಕ್ತಿ. ಭೂಮಿಯಿಂದ ನಮ್ಮನ್ನು ಆಕರ್ಷಣೆ ಮಾಡಿ, ಈ ಸಂಸಾರ ಬಂಧದಿಂದ ನಮ್ಮನ್ನು ಕರ್ಷಣೆ ಮಾಡಿ, ನಮಗೆ ಮೋಕ್ಷ ಕರುಣಿಸಲು ಭೂಮಿಗಿಳಿದು ಬಂದ ಆನಂದರೂಪಿ ಭಗವಂತ ಕೃಷ್ಣ. 'ಕೃಷ್ಣ' ಎನ್ನುವ ಭಗವಂತನ ನಾಮವನ್ನು ನಾವು ಬಿಡಿಸುತ್ತಾ ಹೋದರೆ ಅಲ್ಲಿ ಅನೇಕ ಅರ್ಥಗಳನ್ನು ಕಾಣಬಹುದು. ಆದರೆ ಇಲ್ಲಿ ನಾವು ಕುಂತಿ ಯಾವ ಅರ್ಥದಲ್ಲಿ ಈ ನಾಮವನ್ನು ಬಳಸಿದ್ದಾಳೆ ಎನ್ನುವುದನ್ನು ತಿಳಿಯಬೇಕು. ಸೂಕ್ಷ್ಮವಾಗಿ ಗಮನಿಸಿದರೆ: ಈ ಶ್ಲೋಕದ ಹಿಂದಿನ ಶ್ಲೋಕದಲ್ಲಿ ಕುಂತಿ: "ಪರಮಹಂಸರು ಭಕ್ತಿಯಿಂದ ತಮ್ಮ ಹೃದಯದಲ್ಲಿ ಕಾಣುವ ವಸ್ತು ನೀನು" ಎಂದು ಹೇಳಿರುವುದನ್ನು ನಾವು ನೋಡಿದ್ದೇವೆ. ಆದ್ದರಿಂದ ಈ ಮಂತ್ರದ

ಹಿಂದೆ ಧ್ಯಾನದ ಪ್ರಸ್ತಾಪವಿರುವುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಈ ಮಂತ್ರವನ್ನು ನೋಡಿದಾಗ ನಮಗೆ ಮಂತ್ರದ ಹಿಂದಿನ ಗೂಢಾರ್ಥ ತಿಳಿಯುತ್ತದೆ.

ಜ್ಞಾನಿಗಳು ತಮ್ಮ ಹೃದಯದತ್ತ ಕರ್ಷಣೆ ಮಾಡಿಕೊಂಡು, ತಮ್ಮ ಹೃದಯದಲ್ಲಿ ನಿಲ್ಲಿಸಿಕೊಂಡ ಶಕ್ತಿ 'ಕೃಷ್ಣ'. ಆದ್ದರಿಂದ ಹೃದಯದಲ್ಲಿ ನಿಲ್ಲಿಸಿ ಧ್ಯಾನದಲ್ಲಿ ಕಾಣಬೇಕಾದ ವಸ್ತು 'ಕೃಷ್ಣ'. ಧ್ಯಾನ ಮಾಡುವಾಗ ನಾವು "ನಮ್ಮ ಹೃದಯದಲ್ಲಿ ಕಾಣಿಸಿಕೋ" ಎಂದು ಧ್ಯಾನ ಮಾಡಬಹುದು. ಆದರೆ ಅವನು ಹೇಗೆ ಕಾಣಿಸಿಕೊಳ್ಳುತ್ತಾನೆ? ಧ್ಯಾನ ಎನ್ನುವುದು ಒಂದು ಮಾನಸಿಕ ಅನುಸಂಧಾನ. ಅಲ್ಲಿ ನಮ್ಮ ಮನಸ್ಸೇ ಶಿಲ್ಪಿಯಾಗಿ ಕಡೆದ ಭಗವಂತನ ಪ್ರತೀಕವನ್ನು ನಾವು ಕಾಣಬಹುದು. ಆದರೆ ಹಾಗೆ ಕಾಣುವ ಭಗವಂತನ ರೂಪ ಕೇವಲ ಆತನ ಪ್ರತೀಕ ಹೊರತು ಭಗವಂತನ ಸ್ವರೂಪವಲ್ಲ. ಇದನ್ನು ಉಪನಿಷತ್ತಿನಲ್ಲಿ ಸುಂದರವಾಗಿ ವರ್ಣಿಸಿರುವುದನ್ನು ಕಾಣುತ್ತೇವೆ. ಕೇನೋಪನಿಷತ್ತಿನಲ್ಲಿ ಹೇಳುವಂತೆ: **ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ । ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ಕೇನ-೧-೬॥** "ಯಾವುದನ್ನು ನಾವು ಉಪಾಸನೆಯ ಹಂತದಲ್ಲಿ ಕಾಣುತ್ತೇವೋ, ಅದು ಭಗವಂತನ ರೂಪವಲ್ಲ. ಅದು ನಮ್ಮದೇ ಮನಸ್ಸು ಕೆತ್ತಿರುವ ಭಗವಂತನ ಪ್ರತೀಕ." ಆದ್ದರಿಂದ ಧ್ಯಾನದಲ್ಲಿ ಭಗವಂತನ ದರ್ಶನ ಅಂದರೆ ಅದು ಆತನ ಪ್ರತೀಕ ದರ್ಶನ.

ನಾವು ಭಗವಂತನನ್ನು ಹೃದಯದತ್ತ ಕರ್ಷಣೆ ಮಾಡಿಕೊಂಡ ತಕ್ಷಣ ಆತ ನಮ್ಮ ಮನಸ್ಸಿಗೆ ಗೋಚರನಾಗಲಾರ. ಏಕೆಂದರೆ ಆತ 'ವಾಸುದೇವ'. ಭಗವಂತನನ್ನು ಕಾಣುವ ಪರಿಶುದ್ಧ ಮನಸ್ಸಿಗೆ 'ವಸುದೇವ' ಎನ್ನುತ್ತಾರೆ. ಅಂತಹ ಪರಿಶುದ್ಧ ಮನಸ್ಸಿಗೆ ಮಾತ್ರ ಗೋಚರನಾಗುವ ಭಗವಂತ ವಾಸುದೇವ. ನಮ್ಮ ಬದುಕಿನಲ್ಲಿ ಶುದ್ಧ ಮತ್ತು ಸಾತ್ತ್ವಿಕವಾದ ಮನಸ್ಸು ಎಲ್ಲವುದಕ್ಕಿಂತ ದೊಡ್ಡ ಸಂಪತ್ತು. ಅದು ನಮಗೆ ಸತ್ಯದ ಬೆಳಕನ್ನು ತೋರಬಲ್ಲದು. ಅಂತಹ ಪರಿಶುದ್ಧ ಮನಸ್ಸಿಗೆ ಯಾವ ಆಸೆ-ಆಕಾಂಕ್ಷೆಗಳ, ರಾಗ-ದ್ವೇಷಗಳ ಲೇಪವಿರುವುದಿಲ್ಲ. ಅಂತಹ ನಿರ್ಮಲವಾದ ಮನಸ್ಸಿಗೆ ಧ್ಯಾನಾವಸ್ಥೆಯಲ್ಲಿ ಭಗವಂತನ ಪ್ರತೀಕ ಗೋಚರವಾಗುತ್ತದೆ.

ನಾವು ನಮ್ಮ ಮನಸ್ಸಿನಲ್ಲಿ ಭಗವಂತನ ಯಾವ ರೂಪ ಕಂಡರೂ ಸಹ, ಅದು ಆತನ ಸ್ವರೂಪಭೂತ ರೂಪವಲ್ಲ. ಏಕೆಂದರೆ ನಮಗೆ ತಿಳಿದಂತೆ ಭಗವಂತ ಅಪ್ರಾಕೃತ. ಆತನ ಶರೀರ ಪಂಚಭೂತಗಳಿಂದಾಗಿರುವುದಲ್ಲ. ಆತನ ಶರೀರ ಜ್ಞಾನಾನಂದಸ್ವರೂಪ. ಅಂತಹ ಜ್ಞಾನಾನಂದಸ್ವರೂಪಭೂತವಾದ ದೇಹವನ್ನು ನಮ್ಮ ಆತ್ಮಸ್ವರೂಪ ಮಾತ್ರ ಗ್ರಹಿಸಬಲ್ಲದು. ಇದಕ್ಕಾಗಿ ನಾವು ಹೇಗೆ ಬಾಹ್ಯೇಂದ್ರಿಯವನ್ನು ನಿರ್ವ್ಯಾಪಾರಗೊಳಿಸಿದೆವೋ, ಹಾಗೇ ನಮ್ಮ ಮನಸ್ಸನ್ನು ಸ್ಥಬ್ಧಗೊಳಿಸಬೇಕು. ಇದನ್ನು ಯೋಗಶಾಸ್ತ್ರದಲ್ಲಿ ಉನ್ಮನೀಭಾವ ಎನ್ನುತ್ತಾರೆ. ಇದು ಅಷ್ಟು ಸುಲಭದ ಕೆಲಸವಲ್ಲ. ಇದು ಧ್ಯಾನದ ಪರಾಕಾಷ್ಠೆ. ಈ ಸ್ಥಿತಿಯಲ್ಲಿ ನಮ್ಮ ಆತ್ಮಶಕ್ತಿ ಜಾಗೃತವಾಗುತ್ತದೆ. ಇದನ್ನೇ ಆತ್ಮಸಾಕ್ಷಾತ್ಕಾರ ಎನ್ನುತ್ತಾರೆ. ಈ ಸ್ಥಿತಿಯಲ್ಲಿ ನಮ್ಮ ಆತ್ಮಸ್ವರೂಪ ನೇರವಾಗಿ ಭಗವಂತನ ಸ್ವರೂಪಭೂತವಾದ ರೂಪವನ್ನು ಕಾಣುತ್ತದೆ. ಧ್ಯಾನದ ಈ ಸ್ಥಿತಿಯಲ್ಲಿ ಕಾಣುವ ಭಗವಂತ 'ದೇವಕೀನಂದನ'. ಇಲ್ಲಿ 'ದೇವಕಿಗಳು' ಎಂದರೆ: ಜ್ಞಾನಾನಂದಮಯವಾದ ಜೀವಸ್ವರೂಪದ ಅರಿವು ಪಡೆದವರು. ಅವರಿಗೆ 'ಇನಂದನ' ಆ ಭಗವಂತ. ಅಂದರೆ ಜ್ಞಾನಾನಂದಮಯನಾದ ತನ್ನನ್ನು ತೋರಿಸಿ, ಸದಾ ಜ್ಞಾನಾನಂದಮಯ ಸ್ಥಿತಿಯಲ್ಲೇ ಇರಗೊಡುವವನು. ಒಟ್ಟಿನಲ್ಲಿ ಹೇಳಬೇಕೆಂದರೆ: ಯಾರು ಆತ್ಮಸಾಕ್ಷಾತ್ಕಾರದಿಂದ ಸ್ವರೂಪದ ಮೂಲಕ ಭಗವಂತನನ್ನು ಧ್ಯಾನಿಸಬಲ್ಲರೋ, ಅವರಿಗೆ ಜ್ಞಾನಾನಂದದ ದರ್ಶನವನ್ನು ಕೊಡುವ ಭಗವಂತ ದೇವಕೀನಂದನ.

ಧ್ಯಾನದಲ್ಲಿ ಭಗವಂತನನ್ನು ಕಾಣಬೇಕಾದರೆ ವೇದದಲ್ಲಿ ಹೇಳಿದ ಭಗವಂತನ ರಹಸ್ಯದ ಅನುಸಂಧಾನ ಬಹಳ ಮುಖ್ಯ. ಮೊದಲು ನಾವು ಬತ್ತಲಾಗಬೇಕು. ಆಗ ವೇದ ನಮ್ಮ ಮುಂದೆ ಬತ್ತಲಾಗುತ್ತದೆ. ಇಲ್ಲಿ ನಾವು ಬತ್ತಲಾಗುವುದು

ಎಂದರೆ ನಾವು ನಮ್ಮ ಅಹಂಕಾರವನ್ನು ಕಳಚಿಕೊಂಡು, ವೇದ ವಾಙ್ಮಯ ತಿಳಿದ ಜ್ಞಾನಿಗಳಲ್ಲಿ ಮತ್ತು ಭಗವಂತನಲ್ಲಿ ಪೂರ್ಣ ಶರಣಾಗುವುದು. ಈ ಸ್ಥಿತಿಯಲ್ಲಿ ಮಾತ್ರ ನಮಗೆ ವೇದದ ಅಂತರಂಗದ ಅರ್ಥ ತಿಳಿಯುತ್ತದೆ. ನಮಗೆ ಆನಂದವನ್ನಿತ್ತು ರಕ್ಷಿಸುವ ವೇದಗಳನ್ನು ನಂದ-ಗೋಪ ಎನ್ನುತ್ತಾರೆ. ಅಂತಹ ವೇದಗಳಿಂದ ಅಭಿವ್ಯಕ್ತನಾಗುವ ಭಗವಂತ ನಂದಗೋಪ ಕುಮಾರ. ಒಟ್ಟಿನಲ್ಲಿ ಹೇಳಬೇಕೆಂದರೆ: ಭಗವಂತನ ಮತ್ತು ಗುರುಗಳ ಅನುಗ್ರಹದಿಂದ ಹೃದಯ ಶುದ್ಧಿಯಾಗಿ, ವೇದದಲ್ಲಿ ಹೇಳಲಾದ ಭಗವಂತನ ರಹಸ್ಯವನ್ನು ಅರಿತಾಗ, ಧ್ಯಾನದಲ್ಲಿ ನಮ್ಮ ಸ್ವರೂಪಭೂತವಾದ ಆತ್ಮಕ್ಕೆ ಗೋಚರನಾಗುವ ಭಗವಂತ ನಂದಗೋಪಕುಮಾರ.

ಭಗವಂತ ಜ್ಞಾನಿಗಳಿಗೋಸ್ಕರ ಹಾಗೂ ಸಾತ್ತ್ವಿಕ ಜೀವರ ಉದ್ಧಾರಕ್ಕಾಗಿ ಭೂಮಿಯಲ್ಲಿ ಇಳಿದು ಬರುತ್ತಾನೆ. ವೇದಜ್ಞರಿಗಾಗಿ ಲೋಕದಲ್ಲಿ ಅಭಿವ್ಯಕ್ತನಾಗುವ ಭಗವಂತ ಗೋವಿಂದ. "ಸಮಸ್ತ ವೇದಗಳಿಂದ ತಿಳಿಯಲ್ಪಡುವವ, ಸೂರ್ಯಕಿರಣಗಳಲ್ಲಿ ಸನ್ನಿಹಿತನಾಗಿ ನಮ್ಮನ್ನು ರಕ್ಷಿಸುವವ, ಸ್ವರ್ಗದಲ್ಲಿದ್ದು ದೇವತೆಗಳಿಗೆ ಗೋಚರನಾಗುವ ನೀನು, ನಮ್ಮಂತಹ ಸಾಮಾನ್ಯರಿಗಾಗಿ ಭೂಮಿಗಿಳಿದು ಬಂದು ದರ್ಶನ ಕೊಟ್ಟೆಯಲ್ಲಾ, ನಿನಗೆ ನನ್ನ ನಮಸ್ಕಾರ, ನಿನಗೆ ನಮಸ್ಕಾರ" ಎಂದು ಕುಂತಿ ಕೃಷ್ಣನಿಗೆ ನಮಸ್ಕರಿಸುತ್ತಾಳೆ. ಇಲ್ಲಿ ಎರಡು ಬಾರಿ ಕುಂತಿ "ನಿನಗೆ ನಮಸ್ಕಾರ" ಎಂದಿದ್ದಾಳೆ. ನಾವು ನಮ್ಮ ಅಹಂಕಾರವನ್ನು ಕಳಚಿಕೊಂಡು, ಭಗವಂತನ ಎತ್ತರವನ್ನು ತಿಳಿದು, ಆತನ ಮುಂದೆ ನಾವು ಬಹಳ ಚಿಕ್ಕವರು ಎಂದು ತಿಳಿದು, ಭಗವಂತನನ್ನು ಸ್ತುತಿಸುತ್ತಾ, ದೈಹಿಕವಾಗಿ, ನಮ್ರತೆಯಿಂದ ಆತನ ಮುಂದೆ ಮಣಿಯುವುದು ನಿಜವಾದ ನಮಸ್ಕಾರ. ಇಲ್ಲಿ ಕುಂತಿ ಪೂರ್ಣ ಶರಣಾಗತಿಯಿಂದ ಕೃಷ್ಣನಿಗೆ ನಮಿಸುವುದನ್ನು ನಾವು ಕಾಣುತ್ತೇವೆ.

**ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ ।**
**ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥೨೨॥**

ಭಗವಂತನ ಅನುಸಂಧಾನ ಹೇಗಿರಬೇಕು ಎನ್ನುವುದನ್ನು ನಾವು ಈ ಶ್ಲೋಕದಲ್ಲಿ ಕಾಣಬಹುದು. ಮೇಲ್ನೋಟದಲ್ಲಿ ನೋಡಿದರೆ ಈ ಶ್ಲೋಕ ತೀರ ಸರಳವಾದ ಶ್ಲೋಕ. ಇಲ್ಲಿ ಭಗವಂತನನ್ನು "ನೀನು ಪಂಕಜನಾಭ, ನೀನು ಪಂಕಜಮಾಲಿ, ನೀನು ಪಂಕಜನೇತ್ರ, ನೀನು ಪಂಕಜಾಂಘ್ರ. ನಿನಗೆ ನಮಸ್ಕಾರ" ಎಂದು ಕುಂತಿ ಸ್ತುತಿಸಿದ್ದಾಳೆ. ಅಂದರೆ: "ನೀನು ಹೊಕ್ಕುಳಲ್ಲಿ ಕಮಲ ಉಳ್ಳವನು, ಕೊರಳಲ್ಲಿ ತಾವರೆಯ ಮಾಲೆ ಧರಿಸಿದವನು, ತಾವರೆಯಂತಹ ಕಣ್ಣುಳ್ಳವನು ಮತ್ತು ತಾವರೆಯಂತಹ ಪಾದವುಳ್ಳವನು" ಎಂದರ್ಥ. ಆದರೆ ಈ ಶ್ಲೋಕಕ್ಕೆ ಇಷ್ಟೇ ಅರ್ಥವಲ್ಲ. ಇದರ ಹಿಂದೆ ಅಡಗಿರುವ ಅರ್ಥಸಾರವನ್ನು ನಾವು ಕೆದಕಿ ನೋಡಿದರೆ ಇಲ್ಲಿ ಭಗವಂತನ ಅನುಸಂಧಾನದ ಒಂದು ಸುಂದರ ಚಿತ್ರಣ ಕಾಣುತ್ತದೆ.

"ನಮಃ ಪಂಕಜನಾಭಾಯ" ಎಂದರೆ ನಾಭಿಯಲ್ಲಿ ತಾವರೆಯುಳ್ಳ ನಿನಗೆ ನಮಸ್ಕಾರ ಎಂದರ್ಥ. ಭಗವಂತನ ಈ ನಾಮ ವೈದಿಕ ಉಪಾಸನೆ ಹೇಗಿರಬೇಕು ಎನ್ನುವುದನ್ನು ವಿವರಿಸುತ್ತದೆ. ವೇದದಲ್ಲಿ ವಿಶ್ವಕರ್ಮ ಸೂಕ್ತ ಎನ್ನುವ ಸೂಕ್ತವೊಂದಿದೆ. ಅಲ್ಲಿ ಭಗವಂತನ ವರ್ಣನೆ ಮಾಡಿ, ಆತನನ್ನು ಹೇಗೆ ಉಪಾಸನೆ ಮಾಡಬೇಕು ಎಂದು ವಿವರಿಸಿದ್ದಾರೆ. ಅಲ್ಲಿ ಹೇಳುವಂತೆ: "**ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ವಿಶ್ವಾನಿ ಭುವನಾನಿ ತಸ್ಥುಃ**" ಅಂದರೆ "ಯಾವುದರಲ್ಲಿ ಆ ಹದಿನಾಲ್ಕು ಲೋಕಗಳು ಸೇರಿಕೊಂಡಿವೆಯೋ ಅದು ಹುಟ್ಟದವನ ಹೊಕ್ಕುಳಲ್ಲಿ ಹುಟ್ಟಿ ಬಂತು" ಎಂದರ್ಥ. ಇದು ವೇದ ಭಾಷೆ. ನಮಗೆ ತಕ್ಷಣ ಈ ಭಾಷೆ ಅರ್ಥವಾಗುವುದಿಲ್ಲ. ಅದಕ್ಕಾಗಿ ವೇದವ್ಯಾಸರು ಇದಕ್ಕೆ ಸ್ಕಾಂಧಪುರಾಣದಲ್ಲಿ ವ್ಯಾಖ್ಯಾನ ನೀಡಿದ್ದಾರೆ. ಅಲ್ಲಿ ಹೇಳುವಂತೆ: ಭಗವಂತನ ಉದರದಿಂದ ಈ ಪ್ರಪಂಚ

ಸೃಷ್ಟಿಯಾಯಿತು. ಅದು ಕಮಲ ರೂಪದಲ್ಲಿ ಆತನ ನಾಭಿಯಿಂದ ಹೊರ ಚಿಮ್ಮಿತು. ಹೀಗೆ ಹೊರ ಹೊಮ್ಮಿದ ಕಮಲದಲ್ಲಿ ಇಡೀ ವಿಶ್ವ ಸೂಕ್ಷ್ಮರೂಪದಲ್ಲಿದ್ದು, ಅದರ ಜೊತೆಗೆ ಚತುರ್ಮುಖ ಬ್ರಹ್ಮ ಕೂಡಾ ಸೃಷ್ಟನಾದ. ಹೀಗೆ ಸೃಷ್ಟನಾದ ಚತುರ್ಮುಖ ಬ್ರಹ್ಮನೊಳಗೆ ತಾನೂ ನಿಂತು, ಸೂಕ್ಷ್ಮಪ್ರಪಂಚಕ್ಕೆ ಸ್ಥೂಲ ರೂಪವನ್ನು ಭಗವಂತ ನೀಡಿದ. ಇದು ಭಗವಂತನ 'ಪಂಕಜನಾಭಃ ಅಥವಾ ಪದ್ಮನಾಭಃ' ಎನ್ನುವ ನಾಮದ ಸಂಕ್ಷಿಪ್ತ ವಿವರಣೆ. ಇಲ್ಲಿ ಸೃಷ್ಟಿ ನಿರ್ಮಾಣ ಪ್ರಕ್ರಿಯೆಯ ವಿವರಣೆ ಅಡಗಿದೆ.

ಈ ಸೃಷ್ಟಿ ನಿರ್ಮಾಣಕ್ಕೆ ಮೊದಲು ಎಲ್ಲವೂ ಭಗವಂತನ ಉದರದಲ್ಲಿತ್ತು. ನಂತರ ಭಗವಂತನ ನಾಭಿಕಮಲದಿಂದ ಪ್ರಪಂಚ ಸೃಷ್ಟಿಯಾಯಿತು. ಮುಂದೆ ಮಹಾಪ್ರಳಯದಲ್ಲಿ ಈ ವಿಶ್ವ ನಾಶವಾಗುತ್ತದೆ. ಆ ನಂತರ ಪ್ರಳಯಕಾಲದ ನಂತರ ಮರಳಿ ಭಗವಂತನಿಂದ ಈ ಸೃಷ್ಟಿ ಪುನಃ ನಿರ್ಮಾಣವಾಗುತ್ತದೆ. ಹೀಗೆ ಅನಂತಕೋಟಿ ಕಾಲದಲ್ಲಿ ಅನಂತಕೋಟಿ ಬ್ರಹ್ಮಾಂಡ ಸೃಷ್ಟಿಯಾಗಿ ನಾಶವಾಗುತ್ತಿರುತ್ತದೆ. ಇದೊಂದು ನಿರಂತರ ಪ್ರವಾಹ. ಅನಾದಿ-ಅನಂತಕಾಲದಲ್ಲಿ ಅನಂತ ಬ್ರಹ್ಮಾಂಡದ ಮಾಲೆಯ ಪರಂಪರೆಯನ್ನು ಸೃಷ್ಟಿ-ಸಂಹಾರ ಮಾಡುವ ಅನಾದಿ-ಅನಂತ ತತ್ತ್ವ ಭಗವಂತ 'ಪಂಕಜಮಾಲಿ'.

ಅನಾದಿಕಾಲದಿಂದ ಅನಂತ ಕಾಲದ ತನಕ ಸೃಷ್ಟಿ-ಸಂಹಾರ-ನಿಯಮನ ಮಾಡುವ ಭಗವಂತನನ್ನು ನಾವು ಕಾಣುವ ಬಗೆ ಹೇಗೆ? ಈ ಹಿಂದೆ ಹೇಳಿದಂತೆ ಜ್ಞಾನಾನಂದಮಯನಾದ ಭಗವಂತನನ್ನು ನಾವು ನಮ್ಮ ಆತ್ಮಸ್ವರೂಪದ ಕಣ್ಣಿನಿಂದ ಕಾಣಬೇಕು. ಆದರೆ ಇಲ್ಲಿ ಇನ್ನೊಂದು ಪ್ರಶ್ನೆ ಬರುತ್ತದೆ. ಅದೇನೆಂದರೆ: ಜ್ಞಾನಾನಂದಮಯನಾದ ಭಗವಂತನಿಗೆ ಆಕಾರವುಂಟೇ? ಈ ವಿಚಾರವಾಗಿ ಅನೇಕ ಭಿನ್ನಾಭಿಪ್ರಾಯಗಳಿವೆ. ಅನೇಕರು ಹೇಳುವಂತೆ: ಭಗವಂತನಿಗೆ ಆಕಾರವಿಲ್ಲ. ಆಕಾರವೆನ್ನುವುದು ಪಂಚಭೂತಗಳಿಂದ ಸೃಷ್ಟಿಯಾದ ದೇಹಕ್ಕೆ ಮಾತ್ರ ಇರುವಂತಹದ್ದು. ಆಕಾರ ಎಂದರೆ ಅದು ಸೀಮಿತವಾದುದು. ಆದರೆ ಜ್ಞಾನಾನಂದಮಯನೂ, ಸರ್ವಗತನೂ ಆದ ಭಗವಂತನಿಗೆ ಆಕಾರವಿಲ್ಲ ಎನ್ನುವುದು ಹಲವರ ವಾದ. ಆದರೆ ಈ ಕಲ್ಪನೆಯನ್ನು ಶಾಸ್ತ್ರದ ಮರ್ಮವನ್ನು ತಿಳಿದವರು ಒಪ್ಪುವುದಿಲ್ಲ. ಭಗವಂತ ಜ್ಞಾನಾನಂದಮಯನೂ ಹೌದು, ಸರ್ವಗತನೂ ಹೌದು. ಆದರೆ ಅವನಿಗೆ ಆಕಾರವಿದೆ. ಇದಕ್ಕೆ ಉದಾಹರಣೆ ಇಲ್ಲಿ ಕುಂತಿ ಕಾಣುತ್ತಿರುವ ಕೃಷ್ಣ. ಆಕೆಗೆ ಕೃಷ್ಣ ಸರ್ವಗತನಾಗಿ ಕಾಣುತ್ತಿಲ್ಲ. ಆಕೆಗೆ ಭಗವಂತ ಸರ್ವಗತ ಎನ್ನುವುದು ತಿಳಿದಿದೆ ಆದರೆ ಆತನನ್ನು ಆಕೆ ತನ್ನ ಮುಂದೆ ಸೀಮಿತವಾದ ಪ್ರದೇಶದಲ್ಲಿ ಕಾಣುತ್ತಿದ್ದಾಳೆ.

ಇನ್ನು ಸರ್ವಗತನಾದ ಭಗವಂತ ಬರುವುದು ಹೋಗುವುದು ಅಂದರೇನು? ಇಲ್ಲಿ ಕೃಷ್ಣ ಹಸ್ತಿನಪುರದಿಂದ ದ್ವಾರಕೆಗೆ ಹೊರಟ ಎಂದಿದ್ದಾರೆ. ಇದನ್ನು ಅರ್ಥ ಮಾಡಿಕೊಳ್ಳುವುದು ಹೇಗೆ? ಈ ಪ್ರಶ್ನೆಗೆ ಕಠೋಪನಿಷತ್ತು ಉತ್ತರಿಸುತ್ತದೆ. ಅಲ್ಲಿ ಯಮ ನಚಿಕೇತನಿಗೆ ಕೊಡುವ ವಿವರಣೆ ಹೀಗಿದೆ: **"ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ । ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ"** ॥ಕಠ-೧-೨-೨೧॥ ಅಂದರೆ: ಭಗವಂತ ಇದ್ದಲ್ಲೇ ಇರುತ್ತಾನೆ, ಆದರೆ ಎಷ್ಟು ದೂರ ಬೇಕಾದರೂ ಹೋಗುತ್ತಾನೆ. ಒಂದು ಕಡೆ ಇರುತ್ತಾನೆ, ಆದರೆ ಎಲ್ಲಾ ಕಡೆ ತುಂಬಿದ್ದಾನೆ. ಇದು ಮೇಲ್ನೋಟಕ್ಕೆ ವಿರೋಧಾಭಾಸ ಹೇಳಿಕೆಯಂತೆ ಕಾಣುತ್ತದೆ. ಆದರೆ ಸರ್ವಗತನಾದ ಭಗವಂತ ಸರ್ವಸಮರ್ಥ ಎನ್ನುವುದನ್ನು ನಾವು ಮರೆಯಬಾರದು. ಸರ್ವಗತನಾದ ಭಗವಂತ ತನ್ನ ಭಕ್ತನಿಗಾಗಿ ಒಂದು ಕಡೆ ವಿಶಿಷ್ಠವಾಗಿ ಕಾಣಿಸಿಕೊಳ್ಳಬೇಕಾಗದ ಸನ್ನಿವೇಶ ಬಂದಾಗ, ಆತ ತನ್ನ ಭಕ್ತ ಕಾಣಿಸಿಕೊಳ್ಳಬಹುದಾದ ರೂಪದಲ್ಲಿ ಕಾಣಿಸಿಕೊಳ್ಳಬಲ್ಲ. ಭಗವಂತ ಸೀಮಿತರೂಪದಲ್ಲಿ ನಮಗೆ ಕಾಣಿಸಿಕೊಳ್ಳಬಲ್ಲನೇ ಹೊರತು, ಆತನ ರೂಪ ಸೀಮಿತವಲ್ಲ. ಆತ ಅಣೋರಣೀಯನೂ ಹೌದು, ಮಹತೋಮಯನೂ ಹೌದು.

ಭಗವಂತ ನಮಗೆ ಸೀಮಿತವಾದ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ ನಿಜ, ಆದರೆ ಹಾಗೆ ಕಾಣುವ ಆತನ ರೂಪ ಪಂಚಭೂತಗಳಿಂದಾಗಿಲ್ಲ. ಉಪನಿಷತ್ತಿನಲ್ಲಿ ಹೇಳುವಂತೆ: "**ಯತ್ತೇ ರೂಪಂ ಕಲ್ಯಾಣತಮಮಮ್ ತತ್ತೇ ಪಶ್ಯಾಮಿ**". ಅದು ಜ್ಞಾನಿಗಳು ಕಾಣುವ ಪರಮಮಾಂಗಲಿಕ ರೂಪ. ಈ ರೂಪವನ್ನು ಜ್ಞಾನಿ ತನ್ನ ಸ್ವರೂಪಭೂತವಾದ ಕಣ್ಣಿನಿಂದ ಧ್ಯಾನದಲ್ಲಿ ಕಾಣುತ್ತಾನೆ. ಇದನ್ನೇ ಇಲ್ಲಿ ಕುಂತಿ 'ಪಂಕಜನೇತ್ರಾಯ, ಪಂಕಜಾಂಘ್ರಯೆ' ಎಂದು ಸ್ತುತಿಸಿದ್ದಾಳೆ. ಅಂದರೆ ಅರಳಿದ ತಾವರೆ ಎಸಳಿನಂತಹ ವಿಶಾಲವಾದ ಕಣ್ಣುಳ್ಳವನು, ತಾವರೆ ಮೊಗ್ಗಿನಂತಹ ಪಾದವುಳ್ಳವನು ಎಂದರ್ಥ. ಸೌಂದರ್ಯಕ್ಕೆ ಸಂಕೇತ ಕಣ್ಣು. 'ಅರಳಿದ ತಾವರೆಯ ಎಸಳಿನಂತಹ ವಿಶಾಲವಾದ ಕಣ್ಣು' ಇದು ವೈದಿಕವಾಗಿ ಭಗವಂತನ ರೂಪವನ್ನು ಕಾಣುವ ಬಗೆ. ಇದನ್ನೇ ಛಾಂದೋಗ್ಯ ಉಪನಿಷತ್ತಿನಲ್ಲಿ ಹೀಗೆ ಹೇಳಿದ್ದಾರೆ: "**ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ**" (೧.೬.೭). ಧ್ಯಾನದಲ್ಲಿ ನಾವು ಭಗವಂತನ ಸರ್ವಾಂಗವನ್ನು(ಪ್ರತೀಕವನ್ನು) ಕಾಣುವುದು ಅಷ್ಟು ಸುಲಭವಲ್ಲ. ಹಾಗಾಗಿ ಮೊದಲು ಆತನ ಒಂದು ಅಂಗವನ್ನು ಕೇಂದ್ರೀಕರಿಸಿ ಧ್ಯಾನ ಮಾಡಬೇಕು. ನಮ್ಮ ಮೇಲೆ ಅನುಗ್ರಹದ ವೃಷ್ಟಿಯನ್ನು ಸುರಿಸುವ ಭಗವಂತನ ಅರಳುಗಣ್ಣನ್ನು ಧ್ಯಾನದಲ್ಲಿ ಕಾಣಲು ಪ್ರಯತ್ನಿಸಬೇಕು. ಭಗವಂತ ನಮ್ಮನ್ನು ನೋಡುತ್ತಿದ್ದಾನೆ, ಅವನ ಅನುಗ್ರಹ ನಮ್ಮ ಮೇಲೆ ಬೀಳುತ್ತಿದೆ. ಆತನ ಪಾದದ ಅಂಗುಷ್ಠ, ಅಂಗುಷ್ಠದ ಕೆಂಪು ಮಣಿಯಂತಹ ನಕಾಗ್ರ, ಆ ನಕಾಗ್ರದಿಂದ ಉದಿಸುವ ಸೂರ್ಯನಂತೆ ಕೆಂಪು ಕಿರಣಗಳು ಚಿಮ್ಮುತ್ತಿವೆ ಎನ್ನುವುದನ್ನು ನಾವು ಅನುಭವಿಸಬೇಕು.

ಪಂಕಜನೇತ್ರ ಎನ್ನುವ ಭಗವಂತನ ನಾಮವನ್ನು ಇನ್ನೊಂದು ಆಯಾಮದಲ್ಲಿ ನೋಡಿದರೆ: ಅದು ಭಗವಂತನ ವಿಶ್ವ ನಿಯಮನವನ್ನು ಹೇಳುತ್ತದೆ. "**ನೇತೃತ್ವಾತಮ್ ನೇತ್ರಂ**" . ನಾಭಿಯಲ್ಲಿ ಅರಳಿದ ಕಮಲರೂಪಿ ಬ್ರಹ್ಮಾಂಡವನ್ನು ನಿಯಮನ ಮಾಡುವ ನೀನು ಪಂಕಜನೇತ್ರಃ. ಇಂತಹ ನಿನಗೆ ಈ ಬ್ರಹ್ಮಾಂಡ(ಪಂಕಜ) ಎನ್ನುವುದು, ನಿನ್ನ ಪಾದದ ಕಿರುಬೆರಳಿನ ಸಂದಿಯಲ್ಲಿನ(ಅಂಘ್ರಿ) ಒಂದು ಪುಟ್ಟ ಧೂಳಿನ ಕಣವಿದ್ದಂತೆ (ಪಂಕಜಾಂಘ್ರಯಃ). ಎಂದು ಕುಂತಿ ಕೃಷ್ಣನನ್ನು ಸ್ತುತಿಸುತ್ತಾಳೆ.

**ವಿಪದಃ ಸಂತು ನಃ ಶಶ್ವತ್ ತತ್ರತತ್ರ ಜಗತ್ಪತೇ ।**
**ಭವತೋ ದರ್ಶನಂ ಯತ್ ಸ್ಯಾದಪುನರ್ಭವದರ್ಶನಮ್ ॥೨೮॥**

ಇಲ್ಲಿ ಕುಂತಿ ಕೃಷ್ಣನಲ್ಲಿ ಕೇಳುವ ಈ ಮಾತು ತುಂಬಾ ವಿಶಿಷ್ಠವಾದುದು. ಆಕೆ ಕೇಳುತ್ತಾಳೆ: "ನನಗೆ ಏನಾದರೂ ಕೊಡುವುದಿದ್ದರೆ ನೀನು ನನ್ನ ಜೀವನದುದ್ದಕ್ಕೂ ಕಷ್ಟವನ್ನು ಕೊಡು" ಎಂದು. ನಾವು ಭಗವಂತನಲ್ಲಿ 'ಸದಾ ಸುಖವನ್ನು ಕೊಡು' ಎಂದು ಕೇಳಬಾರದು. ಏಕೆಂದರೆ ಸುಖಪುರುಷರಿಗೆ ಪ್ರಪಂಚ ಜ್ಞಾನವೇ ಇರುವುದಿಲ್ಲ. ಅವರಿಗೆ ಭಗವಂತನ ನೆನಪು ಕೂಡಾ ಇರುವುದಿಲ್ಲ. ಜೀವನದಲ್ಲಿ ಕಷ್ಟ ಬರುವುದು ಎಂದರೆ ಅದು ಜೀವ ಪಕ್ವವಾಗುವ ಕ್ರಿಯೆ. ಅದು ಶಿಕ್ಷೆ ಅಲ್ಲ, ಶಿಕ್ಷಣ. ಹೇಗೆ ಅಕ್ಕಿ ಬೆಂಕಿಯ ಕಾವಿನಲ್ಲಿ ಬೆಂದು ಅನ್ನವಾಗುತ್ತದೋ ಹಾಗೇ ಈ ಜೀವ ಕೂಡಾ. ಅದಕ್ಕೆ ಕಷ್ಟವೆಂಬ ಕಾವು ಕೊಟ್ಟಾಗ ಅದು ಪಕ್ವವಾಗುತ್ತದೆ. "ನನಗೆ ಕಷ್ಟವನ್ನೇ ಕೊಡು, ಏಕೆಂದರೆ ನೀನು ಜಗತ್ಪತಿ; ಕಷ್ಟವನ್ನು ಕೊಟ್ಟು ಅದನ್ನು ಎದುರಿಸುವ ಆತ್ಮಸ್ಥೈರ್ಯ ಕೊಡುವವನು ನೀನು. ಜಗತ್ತಿನ ಪಾಲಕನಾದ ನೀನು ಕೊಡುವ ಕಷ್ಟ ನಮಗೆ ರಕ್ಷಣೆ! ಯಾವ ಕಷ್ಟದಿಂದ ನಿನ್ನ ದರ್ಶನ ಸಾಧ್ಯವೋ ಅಂತಹ ಕಷ್ಟಕ್ಕಿಂತ ದೊಡ್ಡ ಭಾಗ್ಯ ಜೀವನದಲ್ಲಿ ಇನ್ನೊಂದಿಲ್ಲ. ನಿನ್ನ ದರ್ಶನ ಸಾಮಾನ್ಯ ವಿಷಯವೇ? ಋಷಿಗಳು ನಿನ್ನನ್ನು ಕಾಣಬೇಕು ಎಂದು ಜನ್ಮ-ಜನ್ಮದಲ್ಲಿ ಪರಿತಪಿಸುತ್ತಾರೆ.

ಹಾಗಿರುವಾಗ ಕಷ್ಟಕಾಲದಲ್ಲಿ ಅನಾಯಾಸವಾಗಿ ನಿನ್ನ ದರ್ಶನ ಭಾಗ್ಯ ಸಿಗುವುದರಿಂದ ಸದಾ ನನಗೆ ಕಷ್ಟ ಕೊಡು" ಎಂದು ಕುಂತಿ ಕೇಳುತ್ತಾಳೆ.

ಭಗವಂತನ ದರ್ಶನ ಎಂದರೆ ಅದು "ಅಪುನರ್ಭವದರ್ಶನ". 'ಪುನರ್ಭವ' ಎಂದರೆ ಮತ್ತೆಮತ್ತೆ ಹುಟ್ಟುವುದು. ಆದ್ದರಿಂದ ಅಪುನರ್ಭವದರ್ಶನ ಎಂದರೆ ಮರುಹುಟ್ಟಿಲ್ಲದ ಮೋಕ್ಷವನ್ನು ಕೊಡುವ ದರ್ಶನ. ಇಂತಹ ಮಹಾನ್ ದರ್ಶನ ಅತ್ಯಂತ ಕ್ಲಿಷ್ಟ. ಆದರೆ ಆಪತ್ತಿನಲ್ಲಿ ಭಗವಂತನ ದರ್ಶನ ಅನಾಯಾಸವಾಗಿರುವುದರಿಂದ ಇಲ್ಲಿ ಕುಂತಿ "ನನಗೆ ಕಷ್ಟವನ್ನೇ ಕೊಡು" ಎಂದು ಶ್ರೀಕೃಷ್ಣನಲ್ಲಿ ಕೇಳಿದ್ದಾಳೆ.

ಜನ್ಮೈಶ್ವರ್ಯಶ್ರುತಶ್ರೀಭಿರೇಧಮಾನಮದಃ ಪುಮಾನ್ ।
ನಾರ್ಹ ಇತ್ಯಭಿಧಾತುಂ ವೈ ತ್ವಾಮಕಿಂಚನಗೋಚರಮ್ ॥೨೬॥

ಇಂದು ನಾವು ನಮ್ಮನ್ನು ನಾಲ್ಕು ಮದಗಳಿಂದ ಹೊದ್ದುಕೊಂಡು ಬದುಕುತ್ತಿದ್ದೇವೆ. ಅವುಗಳೆಂದರೆ ೧. ಕುಲದ ಮದ, ೨. ಐಶ್ವರ್ಯ(ಅಧಿಕಾರ)ದ ಮದ, ೩. ವಿದ್ಯೆಯ ಮದ, ೪.ಧನದ ಮದ.

ನಮ್ಮ ಮನೆತನ, ಪರಂಪರೆ, ಅದರ ಬಗ್ಗೆ ಹೆಗ್ಗಳಿಕೆ, ಇವು ಅಹಂಕಾರವಾಗಿ ಬೆಳೆದಾಗ ಅದು ನಮ್ಮನ್ನು ದೇವರಿಂದ ದೂರ ಮಾಡಿಸುತ್ತದೆ. ಅದೇ ರೀತಿ: ಅಧಿಕಾರದ ಮದ, ನನ್ನಂತಹ ವಿದ್ವಾಂಸ ಯಾರಿದ್ದಾರೆ ಎನ್ನುವ ವಿದ್ಯೆಯ ಮದ, ಸಂಪತ್ತಿನ ಮದ-ಇವು ಅಹಂಕಾರವಾಗಿ ಯಾರನ್ನು ಕಾಡುತ್ತದೋ "ಅಂತವನ ಬಾಯಿಯಲ್ಲಿ ಭಗವಂತನ ಹೆಸರೇ ಬಾರದು" ಎನ್ನುತ್ತಾಳೆ ಕುಂತಿ. ಈ ಮದದ ಹೊದಿಕೆಯನ್ನು ಕಳಚಿ ಹೊರಬಂದಾಗ ಮಾತ್ರ ಭಗವಂತನ ದರ್ಶನ ಸಾಧ್ಯ.

ಅಹಂಕಾರಶೂನ್ಯನಾಗಿ ಪೂರ್ಣ ಶರಣಾಗತಿಯಾಗುವುದೊಂದೇ ಭಗವಂತನ ಅನುಗ್ರಹಕ್ಕೆ ದಾರಿ. ನಮ್ಮ ಯಾವ ಮದವೂ ನಮ್ಮನ್ನು ಭಗವಂತನತ್ತ ಒಯ್ಯುವುದಿಲ್ಲ. ಹಾಗಾಗಿ ಮೊತ್ತಮೊದಲು ನಾವು ಈ ಮದದಿಂದ ಕಳಚಿಕೊಳ್ಳಬೇಕು. ಇಲ್ಲಿ ಕುಂತಿ ಹೇಳುತ್ತಾಳೆ: "ನೀನು ಅ-ಕಿಂಚನ-ಗೋಚರ" ಎಂದು. ಅಂದರೆ ಕಷ್ಟದಲ್ಲಿರುವವರಿಗೆ ಗೋಚರನಾಗುವವ ಎಂದರ್ಥ. ಇದರರ್ಥ ಶ್ರೀಮಂತರಿಗೆ ಭಗವಂತ ಗೋಚರನಾಗುವುದಿಲ್ಲ ಎಂದರ್ಥವಲ್ಲ. ಶ್ರೀಮಂತಿಕೆ ಇದ್ದು ಶರಣಾಗತಿ ಇದ್ದಾಗ ಕೂಡಾ ಭಗವಂತ ಗೋಚರನಾಗುತ್ತಾನೆ. ನಮಗೆ ಅ-ಕಾರವಾಚ್ಯ ಭಗವಂತನೇ ಸರ್ವಸ್ವವಾದಾಗ ಆತನ ದರ್ಶನ ಸಾಧ್ಯವಾಗುತ್ತದೆ.

ವೇದದಲ್ಲಿ ಹೇಳಿದ ಮಾತನ್ನೇ ಇಲ್ಲಿ ಕುಂತಿ ಹೇಳಿರುವುದು. ಕಠೋಪನಿಷತ್ತಿನಲ್ಲಿ ಹೇಳುವಂತೆ: "**ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್ । [೧-೨-೬]**. ಇಲ್ಲಿ ಹೇಳುವಂತೆ: ವಿತ್ತದ ಮೋಹದಿಂದ ಮೂಢರಾಗಿರುವವರ ಬಳಿ ಭಗವಂತ ಸುಳಿಯುವುದಿಲ್ಲ. ಇದನ್ನೇ ಬೈಬಲ್ ನಲ್ಲಿ ಹೀಗೆ ಹೇಳಿದ್ದಾರೆ: **"Blessed are you who are poor, for yours is the kingdom of God" "It is easier for a Camel to go through the eye of a needle than for a rich person to enter the Kingdom of God".**

ನಮೋಽಕಿಂಚನವಿತ್ತಾಯ ನಿವೃತ್ತಗುಣವೃತ್ತಯೇ ।
ಆತ್ಮಾರಾಮಾಯ ಶಾಂತಾಯ ಕೈವಲ್ಯಪತಯೇ ನಮಃ ॥೨೦॥

ಇಲ್ಲಿ ಕುಂತಿ ಭಗವಂತನನ್ನು "ನೀನು ಅಕಿಂಚನ ವಿತ್ತ (ಬಡವರ ಸಂಪತ್ತು)" ಎಂದು ಸ್ತುತಿಸುತ್ತಿದ್ದಾಳೆ. ಮನುಷ್ಯನಿಗೆ ಜೀವನದಲ್ಲಿ ದೊಡ್ಡ ಸಂಪತ್ತು ಎಂದರೆ ಆನಂದ. ಆತ ದುಡ್ಡನ್ನು ಬಯಸುವುದು ಸುಖಪಡುವುದಕ್ಕಾಗಿ. ಸುಖದಲ್ಲಿ ಅತ್ಯಂತ ಶ್ರೇಷ್ಠ ಸುಖ ದುಃಖದ ಸ್ಪರ್ಶವೇ ಇಲ್ಲದ ಮೋಕ್ಷ ಸುಖ. ಅಂತಹ ಮೋಕ್ಷವನ್ನು ಕೊಡುವವನು ಆ ಭಗವಂತ. ಹೀಗಾಗಿ ಭಗವಂತನಿಗಿಂತ ದೊಡ್ಡ ಸಂಪತ್ತು ಇನ್ನೊಂದಿಲ್ಲ. ಯಾರು ಪ್ರಾಪಂಚಿಕ ಸಂಪತ್ತನ್ನು ತೊರೆಯುತ್ತಾರೋ ಅವರ ಅಪೂರ್ವ ಮತ್ತು ಅನಂತ ಸಂಪತ್ತಾಗಿ ಭಗವಂತನಿರುತ್ತಾನೆ. ಇಂತಹ ಭಗವಂತನನ್ನು ಇಲ್ಲಿ ಕುಂತಿ "ನಿವೃತ್ತಗುಣವೃತ್ತ" ಎಂದು ಸ್ತುತಿಸಿದ್ದಾಳೆ. ನಮಗೆ ತಿಳಿದಂತೆ ಪ್ರಾಪಂಚಿಕ ಸಂಪತ್ತು ಮೂರು ಗುಣಗಳ ಪ್ರವೃತ್ತಿಯನ್ನೊಳಗೊಂಡಿದೆ. ದುಡ್ಡಿನ ಬಗ್ಗೆ ಮೋಹ-ತಮೋಗುಣ, ದುಡ್ಡು ಗಳಿಸುವುದಕ್ಕಾಗಿ ಮಾಡುವ ಸಾಹಸ-ರಜೋಗುಣ. ದುಡ್ಡನ್ನು ಒಳ್ಳೆಯದಕ್ಕಾಗಿ ಬಳಸುವುದು-ಸತ್ತ್ವ ಗುಣ. ಹೀಗೆ ದುಡ್ಡಿನಲ್ಲಿ ಮೂರು ಗುಣಗಳಿದ್ದರೂ ಸಹ ಅಲ್ಲಿ ರಜಸ್ಸು ಮತ್ತು ತಮಸ್ಸಿನ ಪ್ರಭಾವವೇ ಹೆಚ್ಚು. ಆದರೆ ಭಗವಂತನೆಂಬ ಸಂಪತ್ತಿನಲ್ಲಿ ಈ ಯಾವ ಗುಣದ ಲೇಪವೂ ಇಲ್ಲ. ಅವನು ಗುಣಾತೀತ ತತ್ತ್ವ. ಇಲ್ಲಿ ಗುಣಾತೀತ ಅಂದರೆ ಆತನಲ್ಲಿ ಯಾವ ಗುಣವೂ ಇಲ್ಲ ಎಂದರ್ಥವಲ್ಲ. ಆತ ತ್ರಿಗುಣಾತೀತ ಮತ್ತು ಸರ್ವಗುಣಪೂರ್ಣ.

ತನ್ನ ಸ್ವರೂಪಾನಂದದಲ್ಲೇ ರಮಿಸುವ ಭಗವಂತನನ್ನು ಇಲ್ಲಿ ಕುಂತಿ "ಆತ್ಮಾರಾಮ" ಎಂದು ಸ್ತುತಿಸಿದ್ದಾಳೆ. ಆನಂದದಲ್ಲಿ ಎರಡು ವಿಧ. ಒಂದು ಹೊರಗಿನಿಂದ ಪಡೆಯುವ ಆನಂದ ಹಾಗೂ ಇನ್ನೊಂದು ಒಳಗೇ ಇರುವ ಆನಂದ. ನಾವು ನಮ್ಮೊಳಗೇ ಇರುವ ಆನಂದವನ್ನು ಮರೆತಾಗ ಹೊರಗಿನ ಆನಂದವನ್ನು ಪಡೆಯಲು ಬಯಸುತ್ತೇವೆ. ಸಂಸ್ಕೃತದಲ್ಲಿ ಬಾಹ್ಯಾನಂದವನ್ನು 'ಮೋದ' ಎಂದು ಕರೆಯುತ್ತಾರೆ. ಆದ್ದರಿಂದ 'ಆನಂದ' ಎನ್ನುವ ಸಂಸ್ಕೃತ ಪದ ಕೇವಲ ಅಂತರಂಗದ ಆನಂದವನ್ನು ಹೇಳುವ ಪದ. ಆದರೆ ಸಂಕೀರ್ಣವಾಗಿ ಇಂದು ಆನಂದ ಎನ್ನುವ ಪದವನ್ನು ಎಲ್ಲವುದಕ್ಕೂ ಬಳಸುತ್ತಾರೆ. ನಮ್ಮೊಳಗೆ ತಾನೇ ತಾನು ಆನಂದಮಯನಾಗಿರುವ ಭಗವಂತ "ಆತ್ಮಾರಾಮ". ಇದನ್ನೇ ಆಚಾರ್ಯ ಮಧ್ವರು ದ್ವಾದಶಸ್ತೋತ್ರದಲ್ಲಿ ಹೀಗೆ ಹಾಡಿದ್ದಾರೆ:

> **ಸ್ವಜನೋದಧಿಸಂವೃದ್ಧಿ ಪೂರ್ಣಚಂದ್ರೋಗುಣಾರ್ಣವಃ ।**
> **ಅಮನ್ದಾನಂದ ಸಾಂದ್ರೋ ನಃ ಸದಾಽವ್ಯಾದಿನ್ದಿರಾಪತಿಃ ॥**
>
> **ಅಮನ್ದಗುಣಸಾರೋಽಪಿ ಮಂದಹಾಸೇನ ವೀಕ್ಷಿತಃ ।**
> **ನಿತ್ಯಮಿಂದಿರಯಾಽನಂದ ಸಾಂದ್ರೋ ಯೋ ನೌಮಿ ತಂ ಹರಿಮ್ ॥**

ಭಗವಂತನ ಆನಂದ ಸ್ವರೂಪಭೂತವಾದಂತಹ ಆನಂದ. ಆತ್ಮಸ್ವರೂಪವೂ ಕೂಡಾ ಆನಂದಮಯ. ಆದರೆ ಭಗವಂತ ಆನಂದದ ಪರಾಕಾಷ್ಠೆ. ಹಾಗಾಗಿ ಕುಂತಿ ಕೃಷ್ಣನನ್ನು "ಶಾಂತಾಯ" ಎಂದು ಸ್ತುತಿಸಿದ್ದಾಳೆ. ಇಲ್ಲಿ 'ಶಂ' ಎಂದರೆ ಆನಂದ, 'ಅಂತ' ಎಂದರೆ ತುತ್ತತುದಿ. ಭಗವಂತ ಪೂರ್ಣಾನಂದಸ್ವರೂಪ. ಇಂತಹ ಭಗವಂತ ನಮಗೆ ದುಃಖರಹಿತ ಆನಂದವನ್ನು ಕೊಡುವ 'ಕೈವಲ್ಯಪತಿ'. ಹೀಗೆ "ದುಃಖದ ಸ್ಪರ್ಶವೇ ಇಲ್ಲದ ಸುಖಸ್ವರೂಪ ನೀನು" ಎಂದು ಭಗವಂತನನ್ನು ಕುಂತಿ ಸ್ತುತಿಸಿದ್ದಾಳೆ.

ಮನ್ಯೇ ತ್ವಾಂ ಕಾಲಮೀಶಾನಮನಾದಿನಿಧನಂ ಪರಮ್ ।
ಸಮಂ ಚರಂತಂ ಸರ್ವತ್ರ ಭೂತಾನಾಂ ಯನ್ಮಿಥಃ ಕಲಿಃ ॥೨೧॥

ಮುಂದುವರಿದು ಕುಂತಿ ಹೇಳುತ್ತಾಳೆ: "ಸಜ್ಜನರನ್ನು ಉದ್ಧಾರ ಮಾಡಲು ಬಂದ ನೀನು 'ಕಾಲಪುರುಷ' ಎನ್ನುವುದು ನನಗೆ ಗೊತ್ತು" ಎಂದು. ಇಲ್ಲಿ ಆಕೆ ಎಲ್ಲರನ್ನೂ ಸಮನಾಗಿ ಕಾಣುವ ಭಗವಂತನನ್ನು ಸ್ತುತಿಸುತ್ತಾಳೆ. ಭಗವಂತ ಎಲ್ಲೂ ತಾರತಮ್ಯ ಮಾಡುವುದಿಲ್ಲ. ಆತ ಒಬ್ಬ ತೋಟಗಾರನಂತೆ ಈ ಪ್ರಪಂಚವನ್ನು ಸೃಷ್ಟಿಮಾಡಿ, ಅಲ್ಲಿ ಜೀವವೆಂಬ ಬೀಜವನ್ನು ಬಿತ್ತುತ್ತಾನೆ. ಆ ಜೀವ ತನ್ನ ಸ್ವರೂಪಭೂತ ಯೋಗ್ಯತೆಗನುಗುಣವಾಗಿ ಈ ಪ್ರಪಂಚದಲ್ಲಿ ಬೆಳೆಯುತ್ತದೆ. ಜೀವದ ಬದುಕಿನ ಗತಿ ಅದರ ಜೊತೆಗೆ ಅನಾಧಿನಿತ್ಯವಾಗಿ ಇರುವಂತಹದ್ದು. ಅದಕ್ಕೆ ಬೇಕಾದ ಅಭಿವ್ಯಕ್ತಿಯನ್ನು ಭಗವಂತ ನೀಡುತ್ತಾನೆ. ಆತನಿಗೆ ಯಾರೂ ಮಿತ್ರರಲ್ಲ, ಯಾರೂ ಶತ್ರುಗಳಲ್ಲ. ಅವರವರ ಕರ್ಮದ ಫಲವನ್ನು ಅವರವರು ಅನುಭವಿಸುವಂತೆ ಆತ ಮಾಡುತ್ತಾನೆ ಅಷ್ಟೇ. ಭಗವಂತನಿಗೆ ಪ್ರಿಯ ಜ್ಞಾನ ಮತ್ತು ಧರ್ಮ ಹಾಗೂ ಅಪ್ರಿಯ ಅಜ್ಞಾನ-ಅಧರ್ಮ "ನಿನಗೆ ಬೇಕಾದವರು, ಬೇಡವಾದವರು ಎನ್ನುವ ವಿಭಾಗವಿಲ್ಲ, ಎಲ್ಲರನ್ನೂ ಅವರವರ ಜೀವಯೋಗ್ಯತೆಗನುಗುಣವಾಗಿ ಕಾಣುವವನು ನೀನು" ಎನ್ನುತ್ತಾಳೆ ಕುಂತಿ.

ಜನ್ಮ ಕರ್ಮ ಚ ವಿಶ್ವಾತ್ಮನ್ನಜಸ್ಯಾಕರ್ತುರಾತ್ಮನಃ ।
ತಿರ್ಯಙ್ ನೃಷಯಾದಸ್ಸು ತದತ್ಯಂತವಿಡಂಬನಮ್ ॥೩೨॥

ಭಗವಂತ ಏನೂ ಮಾಡುವುದಿಲ್ಲ ಆದರೆ ಎಲ್ಲವನ್ನೂ ಮಾಡುತ್ತಾನೆ! ಅವನಿಗೆ ಹುಟ್ಟಿಲ್ಲ, ಆದರೆ ಆತ ಭೂಮಿಯಲ್ಲಿ ಹುಟ್ಟಿ ಬರುತ್ತಾನೆ. ಎಲ್ಲರೊಳಗೆ ಅಂತರ್ಯಾಮಿಯಾಗಿರುವ ಭಗವಂತನೇಕೆ ಹುಟ್ಟಿಬರಬೇಕು? ಎಲ್ಲಾ ಕಡೆ ತುಂಬಿರುವ ಭಗವಂತನೇಕೆ ಎಲ್ಲೋ ಒಂದು ಕಡೆ ಜನಿಸುತ್ತಾನೆ? ಸಂಕಲ್ಪಮಾತ್ರದಿಂದ ಎಲ್ಲವನ್ನೂ ಮಾಡಬಲ್ಲ ಭಗವಂತ ಭೂಮಿಯಲ್ಲೇಕೆ ಹುಟ್ಟುತ್ತಾನೆ? ಕೆಲವೊಮ್ಮೆ ಜಲಚರರೂಪದಲ್ಲಿ(ಮತ್ಸ್ಯಾವತಾರ), ಇನ್ನು ಕೆಲವೊಮ್ಮೆ ಪಶು ಅಥವಾ ಮಾನವ ರೂಪದಲ್ಲಿ ಭಗವಂತನೇಕೆ ಅವತಾರ ಮಾಡುತ್ತಾನೆ ಎನ್ನುವುದನ್ನು ಇಲ್ಲಿ ಕುಂತಿ ತನ್ನ ಸ್ತುತಿಯಲ್ಲಿ ವಿವರಿಸುವುದನ್ನು ಕಾಣುತ್ತೇವೆ.

ಕೇಚಿದಾಹುರಜಂ ಜಾತಂ ಪುಣ್ಯಶ್ಲೋಕಸ್ಯ ಕೀರ್ತಯೇ ।
ಯದೋಃ ಪ್ರಿಯಸ್ಯಾನ್ವವಾಯೇ ಮಲಯಸ್ಯೇವ ಚಂದನಮ್ ॥೩೪॥

ಹುಟ್ಟೇ ಇಲ್ಲದ ಭಗವಂತ ಯದುವಂಶದಲ್ಲಿ ವಸುದೇವ-ದೇವಕಿಯರ ಮಗನಾಗಿ ಹುಟ್ಟಿಬಂದ. ಏಕೆಂದರೆ ಆತನಿಗೆ ತನ್ನ ಭಕ್ತರಾದ ಅವರನ್ನು ಉದ್ಧರಿಸಬೇಕಾಗಿತ್ತು. ಅವರ ಮನೋಭಿಲಾಷೆಯನ್ನು ಪೂರೈಸುವುದಕ್ಕಾಗಿ ಆತ ಹಾಗೆ ಹುಟ್ಟಿ ಬಂದ. ನಾವು ಯದುವಿನ ಕಥೆಯನ್ನು ನೋಡಿದರೆ ಆತ ತಂದೆಯಿಂದ ಶಾಪಕ್ಕೊಳಗಾದವ. ಆತನ ತಂದೆ ಯಯಾತಿಗೆ ಇಬ್ಬರು ಹೆಂಡತಿಯರು. ದೇವಯಾನಿ ಮತ್ತು ಶರ್ಮಿಷ್ಠೆ. ಇವರಿಗೆ ಐದು ಮಂದಿ ಮಕ್ಕಳು. ಯದು, ತುರ್ವಸು, ದ್ರುಹ್ಯು, ಅನು ಮತ್ತು ಪುರು. ಒಮ್ಮೆ ಯಯಾತಿ ತನ್ನ ಮಕ್ಕಳಲ್ಲಿ ಅವರ ಯೌವನವನ್ನು ತನಗೆ ಕೊಡುವಂತೆ ಕೇಳುತ್ತಾನೆ. ಆಗ ಯದು ಹಾಗೂ ಇತರ ಮೂರು ಮಂದಿ ಮಕ್ಕಳು ಇದಕ್ಕೆ ಒಪ್ಪುವುದಿಲ್ಲ. ಕೊನೆಯ

ಮಗ 'ಪುರು' ತಂದೆಯ ಮುದಿತನವನ್ನು ತಾನು ಸ್ವೀಕರಿಸಿ, ತನ್ನ ಯೌವನವನ್ನು ತಂದೆಗೆ ಧಾರೆಯರೆಯಲು ಒಪ್ಪುತ್ತಾನೆ. ಆಗ ಯಯಾತಿ 'ಪುರು'ವನ್ನು ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸುತ್ತಾನೆ ಹಾಗೂ ಇತರ ನಾಲ್ವರನ್ನು ನೀವು ರಾಜ್ಯಭ್ರಷ್ಟರಾಗಿ ಎಂದು ಶಪಿಸುತ್ತಾನೆ. ತಂದೆಯ ಆಶೀರ್ವಾದ ಪಡೆದ 'ಪುರು' ವಂಶದಲ್ಲಿ ಪಾಂಡವರು ಜನಿಸುತ್ತಾರೆ. ಶಾಪಕ್ಕೊಳಗಾದ ನಾಲ್ವರಲ್ಲಿ 'ಯದು' ಮಹಾನ್ ವಿಷ್ಣುಭಕ್ತನಾಗಿದ್ದುದರಿಂದ ಭಗವಂತ ಆತನ ವಂಶದಲ್ಲಿ ಅವತಾರವೆತ್ತಿ ಆತನನ್ನು ಉದ್ಧರಿಸುತ್ತಾನೆ. "ಹೇಗೆ ಗಂಧದ ಮರಗಳಿಂದ ಮಲಯ ಪರ್ವತದ ಹೆಸರು ಅಜರಾಮರವಾಯಿತೋ ಹಾಗೇ ನಿನ್ನ ಅವತಾರ ಯದುವಂಶದಲ್ಲಾದ್ದರಿಂದ ಆ ವಂಶದ ಹೆಸರು ಕೀರ್ತಿಭಾಜನವಾಯಿತು" ಎನ್ನುತ್ತಾಳೆ ಕುಂತಿ.

ಅಪರೇ ವಸುದೇವಸ್ಯ ದೇವಕ್ಯಾಂ ಯಾಚಿತೋಽಭ್ಯಗಾತ್ ।
ಅಜಸ್ತ್ವಮಸ್ಯ ಕ್ಷೇಮಾಯ ವಧಾಯ ಚ ಸುರದ್ವಿಷಾಮ್ ॥೩೬॥

ಭಾರಾವತರಣಾಯಾನ್ಯೇ ಭುವೋ ನಾವ ಇವೋದಧೌ ।
ಸೀದಂತ್ಯಾ ಭೂರಿಭಾರೇಣ ಜಾತೋ ಹ್ಯಾತ್ಮಭುವಾಽರ್ಥಿತಃ ॥೩೭॥

ಭಗವಂತ ತನ್ನ ಕೃಷ್ಣಾವತಾರದಲ್ಲಿ ಕೇವಲ ಯದುವನ್ನಷ್ಟೇ ಉದ್ಧರಿಸಿದ್ದಲ್ಲ, ವಸುದೇವ-ದೇವಕಿಯರ ಅಭಿಲಾಷೆಯನ್ನೂ ಈಡೇರಿಸಿದ. ವಸುದೇವ-ದೇವಕಿಯರು ಮೂಲರೂಪದಲ್ಲಿ (ಕಶ್ಯಪ-ಅದಿತಿ) ಭಗವಂತನೇ ತಮ್ಮ ಮಗನಾಗಿ ಹುಟ್ಟಬೇಕೆಂದು ತಪಸ್ಸು ಮಾಡಿದ್ದರು. "ಅವರ ಪ್ರಾರ್ಥನೆಯನ್ನು ಮನ್ನಿಸಿ ನೀನು ಅವರಲ್ಲಿ ಹುಟ್ಟಿ ಬಂದೆ" ಎನ್ನುತ್ತಾಳೆ ಕುಂತಿ. ಯದುವನ್ನು ಉದ್ದರಿಸುವುದು, ಅದಿತಿ-ಕಶ್ಯಪರ ಪ್ರಾರ್ಥನೆಯನ್ನು ಈಡೇರಿಸುವುದಷ್ಟೇ ಭಗವಂತನ ಅವತಾರದ ಉದ್ದೇಶವಲ್ಲ. ಭಗವಂತನ ಸಮಸ್ತ ಅವತಾರವು ಭೂ-ಭಾರದ ಹರಣಕ್ಕೋಸ್ಕರವಾಗುತ್ತದೆ. ಈ ಭೂಮಿ ಒಂದು ದೋಣಿಯಂತೆ. ಅಲ್ಲಿ ಅಧರ್ಮ ಹೆಚ್ಚಾದಾಗ ಆ ಭಾರವನ್ನು ಭೂತಾಯಿ ಹೊರಲಾರಳು. ಭೂಮಿಯಲ್ಲಿ ದೌರ್ಜನ್ಯ ಹೆಚ್ಚಾಗಿ ಅದು ಮುಳುಗುವ ಪರಿಸ್ಥಿತಿ ಬಂದಾಗ ಭಗವಂತ ಭೂಮಿಯ ಮೇಲೆ ಅವತಾರ ರೂಪಿಯಾಗಿ ಇಳಿದು ಬರುತ್ತಾನೆ. "ಬ್ರಹ್ಮ-ರುದ್ರಾದಿಗಳ ಪ್ರಾರ್ಥನೆಯನ್ನು ಮನ್ನಿಸಿ, ಭೂಮಿಯಲ್ಲಿ ಅವತರಿಸಿ, ಧರ್ಮ ಸಂಸ್ಥಾಪನೆ ಮಾಡಿ, ಭೂಮಿಯ ಭಾರವನ್ನು ಕಡಿಮೆ ಮಾಡುವುದು ನಿನ್ನ ಅವತಾರದ ಮೂಲ ಉದ್ದೇಶ" ಎನ್ನುತ್ತಾಳೆ ಕುಂತಿ.

ಭವೇಽಸ್ಮಿನ್ ಕ್ಲಿಶ್ಯಮಾನಾನಾಮವಿದ್ಯಾಕಾಮಕರ್ಮಭಿಃ ।
ಶ್ರವಣಸ್ಮರಣಾರ್ಹಾಣಿ ಕರಿಷ್ಯನ್ನಿತಿ ಕೇಚನ ॥೩೮॥

ಕೇವಲ ಭೂಮಿಯ ಭಾರವನ್ನು ಇಳಿಸಲಿಕ್ಕಾಗಿ ಭಗವಂತ ಅವತರಿಸುವುದಲ್ಲ. ಆತನ ಅವತಾರದ ಮೂಲ ಉದ್ದೇಶ: ಸಂಸಾರದಲ್ಲಿ ಅವಿದ್ಯೆ-ಕಾಮ-ಕರ್ಮದಲ್ಲಿ ತೊಡಗಿದ ಜನರಿಗೆ ತನ್ನ ಮಹಿಮೆಯ ಜ್ಞಾನವನ್ನು ಒದಗಿಸಿ, ತನ್ನ ಲೀಲೆಗಳಿಂದ ಒಂದೊಂದು ಜೀವಕ್ಕೂ ತನ್ನನ್ನು ಪ್ರತ್ಯಕ್ಷ ಕಾಣುವ, ಪ್ರತ್ಯಕ್ಷ ಕೇಳಿ ಸ್ಮರಿಸುವ ಆನಂದ ಕೊಡುವುದು. ನಾವು ಭಗವಂತನ ಅವತಾರದ ಕಥೆಗಳನ್ನು ಕೇಳಿ, ಧ್ಯಾನದಲ್ಲಿ ಅದನ್ನು ಅಳವಡಿಸಿಕೊಂಡು ಆಧ್ಯಾತ್ಮಿಕವಾಗಿ ಮುಂದುವರಿದು, ಸಂಸಾರದಿಂದ ಬಿಡುಗಡೆ ಹೊಂದಲಿ ಎನ್ನುವ ಕಾರುಣ್ಯಕ್ಕಾಗಿ ಆತ ಭೂಮಿಯಲ್ಲಿ ಅವತರಿಸುತ್ತಾನೆ.

ಈ ಅವತಾರಗಳಿಂದಾಗಿ ನಮಗೆ ಆತನನ್ನು ಧ್ಯಾನದಲ್ಲಿ ಸ್ಮರಿಸುವ ಅವಕಾಶ ಲಭಿಸಿದೆ. ಒಂದು ವೇಳೆ ಭಗವಂತ ಕೃಷ್ಣಾವತಾರ ಮಾಡದೇ ಇದ್ದಿದ್ದರೆ ಇಂದು ನಾವು ಧ್ಯಾನದಲ್ಲಿ ಕೊಳಲನ್ನೂದುವ ಆ ಸುಂದರ ಮೂರ್ತಿಯನ್ನು ಕಾಣಲು ಸಾಧ್ಯವಿತ್ತೇ?

ಅಥ ವಿಶ್ವೇಶ ವಿಶ್ವಾತ್ಮನ್ ವಿಶ್ವಮೂರ್ತೇ ಸ್ವಕೇಷು ಮೇ ।
ಸ್ನೇಹಪಾಶಮಿಮಂ ಛಿಂಧಿ ದೃಢಂ ಪಾಂಡುಷು ವೃಷ್ಣಿಷು ॥೪೪॥

ಇಲ್ಲಿ ಕುಂತಿ ಕೃಷ್ಣನಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದಾಳೆ: "ನಾನು 'ಇಂತಹ ಮನೆತನಕ್ಕೆ ಸೇರಿದವಳು' ಎನ್ನುವ ಭಾವನೆಯನ್ನು ಅಳಿಸಿ ಹಾಕು ಕೃಷ್ಣ" ಎಂದು. ಭಗವಂತ ಯದುವಂಶ ಅಥವಾ ಪುರುವಂಶಕ್ಕಷ್ಟೇ ಮೀಸಲಾದವನಲ್ಲ. ಆತ ಇಡೀ ವಿಶ್ವದ ಸೊತ್ತು. ಆತ ವಿಶ್ವೇಶ. ವಿಶ್ವದ ಒಡೆಯನಾಗಿ ಇಡೀ ವಿಶ್ವದಲ್ಲಿ ತತ್ತದ್ ರೂಪದಲ್ಲಿ ತುಂಬಿರುವವನು ಆತ. ಆದ್ದರಿಂದ "ನನ್ನ ಕುಲ ಎನ್ನುವ ಸ್ನೇಹಪಾಶ ನನ್ನನ್ನು ಕಾಡದಂತೆ ಅದನ್ನು ಹರಿದುಬಿಡು. ಈ ಸ್ನೇಹಪಾಶ ಮತ್ತೆ ನನ್ನನ್ನು ಸಂಸಾರದಲ್ಲಿ ಸಿಲುಕಿಸುವುದು ಬೇಡ" ಎಂದು ಕುಂತಿ ಪ್ರಾರ್ಥಿಸುತ್ತಾಳೆ. ಮಹಾಭಾರತದಲ್ಲಿ ನಾವು ಕುಂತಿಯ ಕಥೆಯನ್ನು ನೋಡಿದರೆ, ಕೊನೆಯಲ್ಲಿ ಆಕೆ ಎಲ್ಲಾ ಸ್ನೇಹಪಾಶವನ್ನು ಕಳಚಿಕೊಂಡು, ಸರ್ವಸ್ವವನ್ನೂ ತೊರೆದು, ಕಾಡಿಗೆ ಹೋಗುವುದನ್ನು ಕಾಣುತ್ತೇವೆ. ಅಂತಹ ಮಹಾಯೋಗಿನಿ ಆಕೆ.

ಶ್ರೀಕೃಷ್ಣ ಕೃಷ್ಣಸಖ ವೃಷ್ಣಿವೃಷ ಅವನಿಧ್ರುಗ್ರಾಜನ್ಯವಂಶದಹನ ಅಮರವಂದ್ಯವೀರ್ಯ ।
ಗೋವಿಂದ ಗೋದ್ವಿಜಸುರಾರ್ತಿಹರಾವತಾರ ಯೋಗೇಶ್ವರ ಅಖಿಲಗುರೋ ಭಗವನ್ನಮಸ್ತೇ ॥೪೬॥

ಇಲ್ಲಿ ಕುಂತಿ ಕೃಷ್ಣನನ್ನು ಸ್ತುತಿಸುತ್ತಿದ್ದಾಳೆ: ಅರ್ಜುನನ ಸಖನಾಗಿ ನಿಂತು, ಅವನನ್ನು ಉದ್ಧರಿಸಿದ ಕೃಷ್ಣನೇ, ವೃಷ್ಣಿ ವಂಶದ ತಿಲಕಪ್ರಾಯನಾಗಿ ಅವತರಿಸಿ ಬಂದ ಭಗವಂತನೇ, ಭೂಮಿಗೆ ದ್ರೋಹ ಮಾಡಿದ ದುಷ್ಟ ಕ್ಷತ್ರಿಯರನ್ನು ಸುಟ್ಟು ನಾಶಮಾಡಿದವನೇ, ಜ್ಞಾನಿಗಳ ಮತ್ತು ಸುರರ ದುಃಖವನ್ನು ಪರಿಹರಿಸಿ, ಗೋವುಗಳಿಗೆ ಹಾಗೂ ಭೂಮಿಗೆ ಸಂತಸವನ್ನು ಕೊಟ್ಟ ಗೋವಿಂದನೇ, ಸಮಸ್ತ ಯೋಗಮಾರ್ಗ ಪ್ರವೃತ್ತಕ ಯೋಗೇಶ್ವರನೇ, ಇಡೀ ಜಗತ್ತಿಗೆ ಗುರುವಾಗಿರುವ ಪ್ರಾಣದೇವರಿಗೂ ಗುರುವಾಗಿರುವ ಭಗವಂತನೇ ನಿನಗೆ ನಮಸ್ಕಾರ.

ಸೂತ ಉವಾಚ-

ಪೃಥಯೇತ್ಥಂ ಕಳಪದೈಃ ಪರಿಗೀತಾಖಿಲೋದಯಃ ।
ಮಂದಂ ಜಹಾಸ ವೈಕುಂಠೋ ಮೋಹಯನ್ ಯೋಗಮಾಯಯಾ ॥೪೭॥

ತಾಂ ಬಾಢಮಿತ್ಯುಪಾಮಂತ್ರ್ಯ ಪ್ರವಿಶ್ಯ ಗಜಸಾಹ್ವಯಮ್ ।
ಸ್ತ್ರಿಯಶ್ಚ ಸ್ವಪುರಂ ಯಾಸ್ಯನ್ ಪ್ರೇಮ್ಣಾ ರಾಜ್ಞಾ ನಿವಾರಿತಃ ॥೪೮॥

ಕುಂತಿಯ ಸ್ತೋತ್ರವನ್ನು ಕೃಷ್ಣ ನಕ್ಕು ಸ್ವೀಕರಿಸಿದನಂತೆ. ಆ ನಂತರ ಹೊರಟುನಿಂತ ಕೃಷ್ಣನನ್ನು ದ್ರೌಪದಿ ಮೊದಲಾದ ಅಂತಃಪುರದ ಸ್ತ್ರೀಯರು  ಹಠಮಾಡಿ, ಹಸ್ತಿನಪುರದಲ್ಲೇ ಇರಬೇಕೆಂದು ಪ್ರಾರ್ಥಿಸಿಕೊಂಡಾಗ, ಕೃಷ್ಣ ಅಲ್ಲೇ ನಿಲ್ಲುತ್ತಾನೆ. ಮಹಾಭಾರತದ ಈ ಹಂತದಲ್ಲಿ ಇನ್ನೂ ಭೀಷ್ಮರ ಉಪದೇಶ ಭಾಗ ಮುಗಿದಿಲ್ಲ. ಅದು ಮುಗಿಯುವ ತನಕ ಕೃಷ್ಣ ಹಸ್ತಿನಪುರದಲ್ಲೇ ನಿಲ್ಲಬೇಕಾಗಿದೆ. ಅದಕ್ಕೋಸ್ಕರ ಆತ ನಿಲ್ಲುತ್ತಾನೆ.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಅಷ್ಟಮೋऽಧ್ಯಾಯಃ ॥**

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಎಂಟನೇ ಅಧ್ಯಾಯ ಮುಗಿಯಿತು.

*********

# ನವಮೋऽಧ್ಯಾಯಃ

## ಧರ್ಮರಾಯ ಮತ್ತು ಭೀಷ್ಮಾಚಾರ್ಯರ ಭೇಟಿ

ಧರ್ಮರಾಯನಿಗೆ ರಾಜ್ಯಾಭಿಷೇಕವಾಗಿದೆ. ಎಲ್ಲರೂ ಆನಂದವಾಗಿದ್ದಾರೆ. ಆದರೆ ಧರ್ಮರಾಯ ಮಾತ್ರ ತಲೆಕೆಡಿಸಿಕೊಂಡು ಕುಳಿತಿದ್ದಾನೆ. ಆತನಿಗೆ ಸಮಾಧಾನವಿಲ್ಲ. ಇಷ್ಟು ದೊಡ್ಡ ಹತ್ಯಾಕಾಂಡಕ್ಕೆ ತಾನು ಜವಾಬ್ದಾರ ಎನ್ನುವ ಅಪರಾಧಿ ಪ್ರಜ್ಞೆ ಅವನನ್ನು ಕಾಡುತ್ತಿತ್ತು.

**ಸೂತ ಉವಾಚ-**

ವ್ಯಾಸಾದ್ಯೈರೀಶ್ವರೇಹಾಜ್ಞೈಃ ಕೃಷ್ಣೇನಾದ್ಭುತಕರ್ಮಣಾ ।
ಪ್ರಬೋಧಿತೋऽಪೀತಿಹಾಸ್ಯೈಃ ನಾಬುಧ್ಯತ ಶುಚಾರ್ಪಿತಃ ॥೧॥

ವೇದವ್ಯಾಸರು, ಭಗವಂತನ ಸಂಕಲ್ಪ ತಿಳಿದ ಅನೇಕ ಋಷಿಗಳು ಧರ್ಮರಾಯನನ್ನು ಸಂತೈಸುತ್ತಾರೆ. ಸ್ವಯಂ ಶ್ರೀಕೃಷ್ಣ ಸಮಾಧಾನ ಹೇಳುತ್ತಾನೆ. "ನೀನು ಯುದ್ಧ ಮಾಡಲು ಬಯಸಲಿಲ್ಲ. ನಿನ್ನ ಮೇಲೆ ಯುದ್ಧ ಹೇರಲಾಯಿತು" ಎಂದು ಅನೇಕ ರೀತಿಯಲ್ಲಿ ಸಂತೈಸುತ್ತಾರೆ. "ಅನ್ಯಾಯದ ವಿರುದ್ಧ ಹೋರಾಡುವುದು ಪಾಪವಲ್ಲ" ಎಂದು ಇತಿಹಾಸದ ಉದಾಹರಣೆಯೊಂದಿಗೆ ಹೇಳಿದರೂ ಕೂಡಾ, ಆತನ ಮನಸ್ಸು ಸಮಾಧಾನವಾಗುವುದಿಲ್ಲ.

ಅಹೋ ಮೇ ಪಶ್ಯತಾಜ್ಞಾನಂ ಹೃದಿ ರೂಢಂ ದುರಾತ್ಮನಃ ।
ಪಾರಕ್ಯಸ್ಯೈವ ದೇಹಸ್ಯ ಬಹ್ವ್ಯೋ ಮೇऽಕ್ಷೌಹಿಣೀರ್ಹತಾಃ ॥೩॥

ಬಾಲದ್ವಿಜಸುಹೃನ್ಮಿತ್ರ ಪಿತೃಭ್ರಾತೃಗುರುದ್ರುಹಃ ।
ನ ಮೇ ಸ್ಯಾನ್ನಿರಯಾನ್ಮೋಕ್ಷೋ ಹ್ಯಪಿ ವರ್ಷಶತಾಯುತೈಃ ॥೪॥

"ನನಗಾಗಿ ಹದಿನೆಂಟು ಅಕ್ಷೋಹಿಣಿ ಸೇನೆ ನಾಶವಾಯಿತಲ್ಲಾ, ರಾಜ್ಯದ ಲೋಭದಿಂದ ಯುದ್ಧ ವಿರಾಮ ಘೋಷಣೆ ಮಾಡದೇ, ನನ್ನ ಅಜ್ಞಾನದಿಂದ ರಕ್ತಪಾತಕ್ಕೆ ನಾನು ಕಾರಣನಾದೆ" ಎಂದು ತನ್ನನ್ನೇ ತಾನು ಹಳಿದುಕೊಳ್ಳುತ್ತಾನೆ ಧರ್ಮರಾಯ. "ನಾನು ಮಾಡಿದ ಪಾಪಕ್ಕೆ ನನಗೆ ನರಕ ಕಟ್ಟಿಟ್ಟ ಬುತ್ತಿ. ನರಕದಲ್ಲಿ ಲಕ್ಷಾಂತರ ವರ್ಷ ಕಳೆದರೂ ಅಲ್ಲಿಂದ ನನಗೆ ಬಿಡುಗಡೆ ದೊರೆಯದು" ಎಂದು ಆತ ಪರಿತಪಿಸುತ್ತಾನೆ.

ನೈನೋ ರಾಜ್ಞಃ ಪ್ರಜಾಭರ್ತುಃ ಧರ್ಮ್ಯೇ ಯುದ್ಧೇ ವಧೋ ದ್ವಿಷಾಮ್ ।
ಇತಿ ಮೇ ನ ತು ಬೋಧಾಯ ಕಲ್ಪತೇ ಶಾಶ್ವತಂ ವಚಃ ॥೫॥

ಋಷಿಗಳು ವಿವಿಧ ರೀತಿಯಲ್ಲಿ ಧರ್ಮರಾಯನಿಗೆ ತಿಳಿಹೇಳುತ್ತಾರೆ. ವೇದದ ಉಕ್ತಿಗಳಿಂದ ಅವನನ್ನು ಸಂತೈಸುತ್ತಾರೆ. ವೇದದಲ್ಲಿ ಹೇಳುವಂತೆ: ಅನ್ಯಾಯದ ವಿರುದ್ಧ ಹೋರಾಡುವಾಗ ಒಬ್ಬ ಸೈನಿಕನನ್ನು ಕೊಂದರೆ ಅದು ಒಬ್ಬ ವೈದಿಕ

ಚಾತುರ್ಮಾಸ ಆಚರಣೆ ಮಾಡಿದ ಪುಣ್ಯಕ್ಕೆ ಸಮಾನ; ಒಬ್ಬ ಕುದುರೆ ಸವಾರನನ್ನು ಕೊಂದರೆ ಅಗ್ನಿಷ್ಟೋಮಯಾಗ ಮಾಡಿದಷ್ಟು ಪುಣ್ಯ; ಒಬ್ಬ ಆನೆ ಸವಾರ ಅಥವಾ ಒಬ್ಬ ರಥಿಕನನ್ನು ಕೊಂದರೆ ಅಶ್ವಮೇಧಯಾಗ ಮಾಡಿದಷ್ಟು ಪುಣ್ಯ. ಆದರೆ ಇಲ್ಲಿ ಭಯಗ್ರಸ್ತನಾದ ಧರ್ಮರಾಯನಿಗೆ ಅನಾಧಿನಿತ್ಯವಾದ, ಅಪೌರುಷೇಯವಾದ ವೇದದ ಮಾತೇ ತಿಳಿಯುತ್ತಿಲ್ಲ. "ಅದು ಹೇಗೆ ಪಾಪವಲ್ಲ? ನನಗೇನೂ ಅರ್ಥವಾಗುತ್ತಿಲ್ಲ" ಎನ್ನುತ್ತಾನೆ ಆತ.
ಧರ್ಮರಾಯನ ಮಾತನ್ನು ಕೇಳಿದ ಋಷಿಗಳು "ನೀನು ಪುಣ್ಯ ಸಂಪಾದನೆಗಾಗಿ ಅಶ್ವಮೇಧಯಾಗ ಮಾಡು" ಎನ್ನುವ ಸಲಹೆ ಕೊಡುತ್ತಾರೆ.

ಯಥಾ ಪಂಕೇನ ಪಂಕಾಂಭಃ ಸುರಯಾ ವಾ ಸುರಾಕೃತಮ್ ।
ಭೂತಹತ್ಯಾಂ ತಥೈವೈನಾಂ ನ ಯಜ್ಞೋ ಮಾರ್ಷ್ಟುಮರ್ಹತಿ ॥೭॥

ಋಷಿಗಳ ಮಾತನ್ನು ಕೇಳಿ ಧರ್ಮರಾಯನಿಗೆ ಇನ್ನಷ್ಟು ಗಾಬರಿಯಾಗುತ್ತದೆ. "ಇಲ್ಲಿಯ ತನಕ ನರಹತ್ಯೆ ಮಾಡಿದ್ದಾಯ್ತು, ಇನ್ನು ಆ ಪಾಪ ಪರಿಹಾರಕ್ಕಾಗಿ ಮತ್ತಷ್ಟು ಮೂಕ ಪ್ರಾಣಿಗಳನ್ನು ಕೊಲ್ಲಬೇಕೇ? ಕೈ ಕೆಸರಾಯಿತು ಎಂದು ಮತ್ತೆ ಕೆಸರಿನಲ್ಲಿ ಕೈ ಮುಳುಗಿಸುವುದೇ? ಸುರಪಾನ ಮಾಡಿದ ತಪ್ಪಿಗೆ ಮತ್ತೆ ಪಾನ ಮಾಡುವುದೇ? ಯಾವ ಯಜ್ಞವೂ ನನ್ನನ್ನು ಉದ್ಧಾರ ಮಾಡಲಾರದು" ಎಂದು ಹೆದರಿ ನುಡಿಯುತ್ತಾನೆ ಯುಧಿಷ್ಠಿರ.

ಸೂತ ಉವಾಚ-

ಇತಿ ಭೀತಃ ಪ್ರಜಾದ್ರೋಹಾತ್ ಸರ್ವಧರ್ಮವಿವಿತ್ಸಯಾ ।
ತತೋ ವಿಶಸನಂ ಪ್ರಾಯಾದ್ ಯತ್ರ ದೇವವ್ರತೋಽಪತತ್ ॥೮॥

ಈ ರೀತಿ ಜನಾಂಗ ಹತ್ಯೆಯ ಭಯದಲ್ಲಿರುವ ಧರ್ಮರಾಯನನ್ನು ಕಂಡ ಕೃಷ್ಣ, ಆತನಿಗೆ ಆತನ ವಿರೋಧಪಕ್ಷದಲ್ಲಿ ನಿಂತು ಯುದ್ಧ ಮಾಡಿದ ಬೀಷ್ಮಾಚಾರ್ಯರಿಂದಲೇ ಉಪದೇಶ ನೀಡಬೇಕು ಎನ್ನುವ ನಿರ್ಧಾರ ಮಾಡುತ್ತಾನೆ. ಇತ್ತ ಧರ್ಮರಾಯ ಭೀತಿಯಿಂದ ಏನೇನೋ ಯೋಚಿಸುತ್ತಿದ್ದಾನೆ. ಆತನಿಗೆ ಧರ್ಮದ ಸೂಕ್ಷ್ಮತೆಯನ್ನು ವಿಶ್ಲೇಷಿಸಲು ಸಾಧ್ಯವಾಗದೇ ಧರ್ಮದ ಎಲ್ಲಾ ಮುಖಗಳನ್ನು ತಿಳಿದುಕೊಳ್ಳಬೇಕು ಎನ್ನುವ ಆಸೆ ಹುಟ್ಟುತ್ತದೆ.

ಇನ್ನೊಂದೆಡೆ ಭೀಷ್ಮಾಚಾರ್ಯರು ಶರಶಯ್ಯೆಯಲ್ಲಿ ಮಲಗಿದ್ದಾರೆ. ಉತ್ತರಾಯಣ ಸಮೀಪಿಸುತ್ತಿರುವುದರಿಂದ ಅವರು ತಮ್ಮ ಹೆಚ್ಚಿನ ಕ್ಷಣವನ್ನು ಭಗವಂತನ ಧ್ಯಾನದಲ್ಲಿ ಕಳೆಯಬೇಕು ಎಂದು ಕಣ್ಮುಚ್ಚಿ ಧ್ಯಾನ ಮಾಡುತ್ತಿದ್ದಾರೆ. ಶರಶಯ್ಯೆಯಲ್ಲಿ ಭೀಷ್ಮಾಚಾರ್ಯರು ಮಾಡಿದ ಭಗವಂತನ ಸ್ತೋತ್ರವನ್ನು ಭೀಷ್ಮಸ್ತವರಾಜ ಎಂದು ಕರೆಯುತ್ತಾರೆ. ಇತಿಹಾಸದಲ್ಲಿ ಇಂತಹ ಎರಡು ಭೀಷ್ಮಸ್ತವರಾಜವನ್ನು ನಾವು ಕಾಣಬಹುದು. ಒಂದು ಪಾಂಡವರಿಗೆ ಧರ್ಮೋಪದೇಶ ಮಾಡುವ ಮೊದಲು ಭೀಷ್ಮಾಚಾರ್ಯರು ಮಾಡಿದ ಭಗವಂತನ ಸ್ತೋತ್ರ ಹಾಗೂ ಇನ್ನೊಂದು ಧರ್ಮೋಪದೇಶ ಮಾಡಿದ ನಂತರ ಮಾಡಿದ ಸ್ತೋತ್ರ. ಒಂದು ಭಾರತದಲ್ಲಿ ದಾಖಲೆಯಾಗಿದ್ದರೆ, ಇನ್ನೊಂದು ಭಾಗವತದಲ್ಲಿ ದಾಖಲಾಗಿದೆ. ಎರಡೂ ಒಂದಕ್ಕೊಂದು ಪೂರಕ.

ಇತ್ತ ಭೀಷ್ಮಾಚಾರ್ಯರು ಶರಶಯ್ಯೆಯಲ್ಲಿ ಮಲಗಿ ಭಗವಂತನ ಧ್ಯಾನ ಮಾಡುತ್ತಿದ್ದರೆ, ಅತ್ತ ಪಾಂಡವರು ಅರಮನೆಯಲ್ಲಿದ್ದಾರೆ. ಶ್ರೀಕೃಷ್ಣ ಕೂಡಾ ಹಸ್ತಿನಪುರದಲ್ಲೇ ಇದ್ದಾನೆ. ಒಂದು ದಿನ ಧರ್ಮರಾಯ ಕೃಷ್ಣನನ್ನು ಭೇಟಿಯಾಗಲು ಬಂದಾಗ ಆತ ಕೃಷ್ಣ ಅತ್ಯಂತ ಗಂಭೀರವಾಗಿರುವುದನ್ನು ನೋಡುತ್ತಾನೆ. ಕಾರಣವೇನೆಂದು ಕೇಳಿದಾಗ ಕೃಷ್ಣ ಹೇಳುತ್ತಾನೆ: "ಜ್ಞಾನದ ಸೂರ್ಯ ಮುಳುಗುತ್ತಿದ್ದಾನೆ. ಆತ ಮುಳುಗಿದರೆ ಈ ದೇಶದಲ್ಲಿ ಜ್ಞಾನ ಪರಂಪರೆ ಮುಳುಗಿ ಹೋಗುತ್ತದೆ. ಹಾಗಾಗಿ ಆತ ಮುಳುಗುವ ಮೊದಲು ಅಲ್ಲಿರುವ ಜ್ಞಾನವನ್ನು ಹೀರಿಕೋ. ತಕ್ಷಣ ಹೊರಡು" ಎಂದು. ಆದರೆ ಧರ್ಮರಾಯ ಭೀಷ್ಮಾಚಾರ್ಯರ ಬಳಿ ಹೋಗಲು ಹಿಂಜರಿದಾಗ, ಸ್ವಯಂ ಶ್ರೀಕೃಷ್ಣ ಆತನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಭೀಷ್ಮಾಚಾರ್ಯರಿದ್ದೆಡೆಗೆ ಬರುತ್ತಾನೆ. ಅಲ್ಲಿಯೂ ಕೂಡಾ ಧರ್ಮರಾಯ ಭೀಷ್ಮಾಚಾರ್ಯರಿಗೆ ಮುಖ ತೋರಿಸಲು ಹಿಂಜರಿಯುತ್ತಾನೆ. ಆಗ ಕೃಷ್ಣ ಭೀಷ್ಮಾಚಾರ್ಯರಿದ್ದಲ್ಲಿಗೆ ಹೋಗಿ, "ಧರ್ಮರಾಯ ಬಂದಿದ್ದಾನೆ, ಆದರೆ ನೀವು ಬಯ್ಯುತ್ತೀರಿ ಎಂದು ಅಲ್ಲೇ ನಿಂತಿದ್ದಾನೆ" ಎನ್ನುತ್ತಾನೆ. ಆಗ ಧರ್ಮದ ಪರ ಹೋರಾಡಿ ಗೆದ್ದ ಧರ್ಮರಾಯನನ್ನು ಭೀಷ್ಮಾಚಾರ್ಯರು ಕೊಂಡಾಡುತ್ತಾರೆ. "ಒಂದು ವೇಳೆ ನೀನು ಅನ್ಯಾಯದ ವಿರುದ್ಧದ ಈ ಯುದ್ಧದಲ್ಲಿ ಹೋರಾಡದೇ ಇದ್ದಿದ್ದರೆ ನಿನ್ನನ್ನು ಹೇಡಿ ಎನ್ನುತ್ತಿದ್ದೆ" ಎನ್ನುತ್ತಾರೆ ಭೀಷ್ಮಾಚಾರ್ಯರು. ಈ ಮಾತಿನಿಂದ ಧರ್ಮರಾಯನಲ್ಲಿದ್ದ ಪಾಪಪ್ರಜ್ಞೆ ಹೊರಟುಹೋಗಿ ಆತ ತನಗೆ ಧರ್ಮೋಪದೇಶ ಮಾಡಬೇಕೆಂದು ಭೀಷ್ಮಾಚಾರ್ಯರಲ್ಲಿ ಕೇಳಿಕೊಳ್ಳುತ್ತಾನೆ. ಈ ರೀತಿ ಭೀಷ್ಮಾಚಾರ್ಯರ ಧರ್ಮೋಪದೇಶ ಪ್ರಾರಂಭವಾಗುತ್ತದೆ.

## ಭೀಷ್ಮಾಚಾರ್ಯರ ಧರ್ಮೋಪದೇಶ

**ಭೀಷ್ಮ ಉವಾಚ-**

**ಯತ್ರ ಧರ್ಮಸುತೋ ರಾಜಾ ಗದಾಪಾಣಿರ್ವೃಕೋದರಃ ।**
**ಕೃಷ್ಣೋಽಸ್ತ್ರೀ ಗಾಂಡಿವಂ ಚಾಪಂ ಸುಹೃತ್ ಕೃಷ್ಣಸ್ತತೋ ವಿಪತ್ ॥೧೨॥**

ಭೀಷ್ಮಾಚಾರ್ಯರು ಧರ್ಮರಾಯನಲ್ಲಿ ಹೇಳುತ್ತಾರೆ: "ಎಲ್ಲವೂ ಕಾಲಪುರುಷನ ಮಹಿಮೆ. ಇಲ್ಲದಿದ್ದರೆ ನಿಮ್ಮಂತವರಿಗೂ ಈ ರೀತಿ ಆಗುವುದೇ? ಇದು ನಂಬಲಸಾಧ್ಯ. ಸ್ವಯಂ ಧರ್ಮದೇವತೆ ರಾಜನಾಗಿದ್ದು, ಜಗತ್ತನ್ನು ನಡುಗಿಸಬಲ್ಲ ವೃಕೋಧರ ಭೀಮ; ಗಾಂಡೀವಧಾರಿ, ಅಸ್ತ್ರವಿದ್ಯಾ ಪ್ರವೀರ ಅರ್ಜುನ ರಕ್ಷಕರಾಗಿದ್ದು; ಸ್ವಯಂ ಶ್ರೀಕೃಷ್ಣ ಮಾರ್ಗದರ್ಶಕನಾಗಿ ಜೊತೆಗಿದ್ದರೂ ಕೂಡಾ, ಇಷ್ಟೆಲ್ಲಾ ವಿಪತ್ತು ಬಂದಿತಲ್ಲಾ? ಕಾಲಪುರುಷನ ಸಂಕಲ್ಪವನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ಭಗವಂತ ಕಾಲಪುರುಷನಾಗಿ ಏನು ಮಾಡಬಯಸಿದ್ದಾನೆ ಎನ್ನುವುದು ಯಾರಿಂದಲೂ ತಿಳಿಯಲು ಸಾಧ್ಯವಿಲ್ಲ. ತಿಳಿದರೂ, ಅದನ್ನು ತಡೆಯಲು ಸಾಧ್ಯವಿಲ್ಲ. ಇಡೀ ಜಗತ್ತು ಭಗವಂತನ ಸಂಕಲ್ಪದಂತೆ ನಡೆಯುತ್ತದೆ ಹಾಗೂ ಅದಕ್ಕನುಗುಣವಾಗಿ ನಾವು ನಡೆಯಬೇಕು ಅಷ್ಟೇ. ಹಾಗಾಗಿ ಅನಾಥರಾದ ಜನರನ್ನು ರಕ್ಷಣೆ ಮಾಡುವ ಹೊಣೆ ನಿನ್ನದು. ಅದನ್ನು ಭಗವಂತನ ಮೇಲೆ ಭಾರ ಹಾಕಿ ನಿರ್ವಹಿಸು. ಪ್ರಜಾರಕ್ಷಣೆ ಮಾಡು" ಎನ್ನುತ್ತಾರೆ.

**ಏಷ ವೈ ಭಗವಾನ್ ಸಾಕ್ಷಾದಾದ್ಯೋ ನಾರಾಯಣಃ ಪುಮಾನ್ ।**
**ಮೋಹಯನ್ ಮಾಯಯಾ ಲೋಕಂ ಗೂಢಶ್ಚರತಿ ವೃಷ್ಣಿಷು ॥೧೫॥**

ಶ್ರೀಕೃಷ್ಣನನ್ನು ತೋರಿಸಿ, ಭೀಷ್ಮಾಚಾರ್ಯರು ಹೇಳುತ್ತಾರೆ: "ಇವನ್ಯಾರು ಗೊತ್ತಾ? ಈತ ನಿನ್ನ ಸಹೋದರಮಾವನ ಮಗನಲ್ಲ. ಭೂಮಿಗಿಳಿದು ಬಂದ ಭಗವಂತ ಈತ. ಈ ಲೋಕದಲ್ಲಿ ಮಾಯೆಯನ್ನು ತುಂಬಿ, ತನ್ನ ವ್ಯಕ್ತಿತ್ತ್ವವನ್ನು ತೋರ್ಪಡದೇ, ಒಬ್ಬ ಸಾಮಾನ್ಯ ಮನುಷ್ಯನಂತೆ ನಮಗೆ ಕಾಣಿಸುತ್ತಿದ್ದಾನೆ" ಎಂದು.

**ಯಂ ಮನ್ಯಸೇ ಮಾತುಲೇಯಂ ಪ್ರಿಯಂ ಮಿತ್ರಂ ಸುಹೃತ್ತಮಮ್ ।**
**ಅಕರೋಃ ಸಚಿವಂ ದೂತಂ ಸೌಹೃದಾದಥ ಸಾರಥಿಮ್ ॥೨೭॥**

ಯಾರನ್ನು ನಿನ್ನ ಸಂಬಂಧಿ ಎಂದು ನೀನು ತಿಳಿದಿದ್ದೀಯೋ, ಆತ ನಿನ್ನ ಬಹಳ ಹತ್ತಿರದ ಗೆಳೆಯ. ನಿನ್ನ ಸಾರಥಿಯಾಗಿರುವಷ್ಟು ಸಲಿಗೆ ಕೊಟ್ಟವನು ಆತ. ಆದರೆ ಆತ ನಿನ್ನ ಸಹೋದರಮಾವನ ಮಗನೂ ಅಲ್ಲ, ನಿನ್ನ ಸಾರಥಿಯೂ ಅಲ್ಲ. ಆತ ಸ್ವಯಂ ಭಗವಂತ.

**ತಥಾಪ್ಯೇಕಾಂತಭಕ್ತೇಷು ಪಶ್ಯ ಭೂಪಾನುಕಂಪಿತಮ್ ।**
**ಯನ್ಮೇಽಸೂಂಸ್ತ್ಯಜತಃ ಸಾಕ್ಷಾತ್ ಕೃಷ್ಣೋ ದರ್ಶನಮಾಗತಃ ॥೩೯॥**

ಭಗವಂತನಿಗೆ ತನ್ನ ಭಕ್ತರಮೇಲೆ ಅದೆಂತಹ ಕಾರುಣ್ಯ? ನಾನು 'ಅಂತ್ಯಕಾಲದಲ್ಲಿ ಕೃಷ್ಣನ ಸ್ಮರಣೆ ಮಾಡಬೇಕು' ಎಂದುಕೊಂಡಾಕ್ಷಣ ನನ್ನ ಮುಂದೇ ಬಂದು ನಿಂತನಲ್ಲಾ! ಇದು ಸಾಮಾನ್ಯವಾದ ಕಾರುಣ್ಯವೇ? ಎಂದು ಹೇಳಿದ ಭೀಷ್ಮಾಚಾರ್ಯರು, ಧರ್ಮರಾಯನಿಗೆ ರಾಜಧರ್ಮ, ಸ್ತ್ರೀಧರ್ಮ, ಪುರುಷಧರ್ಮ, ಆಪದಧರ್ಮ, ದಾನಧರ್ಮ, ಭಗವದ್ ಧರ್ಮ, ಮೋಕ್ಷಧರ್ಮ, ಸಮಾಜಧರ್ಮ, ಎಲ್ಲವನ್ನೂ ಉಪದೇಶ ಮಾಡುತ್ತಾರೆ.[ಇದು ಮಹಾಭಾರತದ ಶಾಂತಿಪರ್ವ ಮತ್ತು ಅನುಶಾಸನಪರ್ವದಲ್ಲಿ ವಿಸ್ತಾರವಾಗಿ ಬಂದಿದೆ]
ಭೀಷ್ಮಾಚಾರ್ಯರ ಈ ಉಪದೇಶ ಅಲ್ಲಿ ಸೇರಿದ ಸಮಸ್ತ ಋಷಿಸಮುದಾಯ ಮತ್ತು ವೇದವ್ಯಾಸರ ಸಮ್ಮುಖದಲ್ಲಿ ಅನೇಕದಿನಗಳ ಕಾಲ ನಿರಂತರ ನಡೆಯುತ್ತದೆ. ಎಲ್ಲಾ ಧರ್ಮದ ಉಪದೇಶ ಮುಗಿದ ನಂತರ, ಉತ್ತರಾಯಣ ಪುಣ್ಯಕಾಲ ಬಂದು ತನ್ನ ಅವಸಾನ ಕಾಲ ಸಮೀಪಿಸಿತು ಎನ್ನುವಾಗ, ಭೀಷ್ಮಾಚಾರ್ಯರು ಮೌನವ್ರತದಲ್ಲಿ ಕಣ್ಮುಚ್ಚಿ ಭಗವಂತನ ಧ್ಯಾನ ಮಾಡಲಾರಂಭಿಸುತ್ತಾರೆ. ಆದರೆ ಆಶ್ಚರ್ಯವೆಂದರೆ ಅವರಿಗೆ ತಾನು ಬಯಸಿದ ಭಗವಂತನ ರೂಪ ಕಾಣುವುದಿಲ್ಲ! ಬದಲಾಗಿ ತಾನು ಮಾಡಿದ ಪಾಪಪ್ರಜ್ಞೆ ಕಾಡುತ್ತದೆ. ನಗುತ್ತಿರುವ ಕೃಷ್ಣನ ಬದಲು 'ಯುದ್ಧರಂಗದಲ್ಲಿ ನಿಂತ ಕೃಷ್ಣ' ಕಾಣುತ್ತಾನೆ!

## ಭೀಷ್ಮ ನಿರ್ಯಾಣ

**ಭೀಷ್ಮ ಉವಾಚ-**

**ಸಪದಿ ಸಖಿವಚೋ ನಿಶಮ್ಯ ಮಧ್ಯೇ ನಿಜಪರಯೋರ್ಬಲಯೋ ರಥಂ ಪ್ರವೇಶ್ಯ ।**
**ಸ್ಥಿತವತಿ ಪರಸೈನಿಕಾಯುರಕ್ಷ್ಣಾ ಹೃತವತಿ ಪಾರ್ಥಸಖೇ ರತಿರ್ಮಮಾಸ್ತು ॥೪೨॥**

ಅರ್ಜುನನ ಬಯಕೆಯಂತೆ ಸೇನೆಯ ಮಧ್ಯದಲ್ಲಿ ರಥವನ್ನು ನಿಲ್ಲಿಸಿದ ಕೃಷ್ಣ, ಅರ್ಜುನನಿಗೆ ಉಭಯ ಪಂಗಡಗಳಲ್ಲಿರುವ ವೀರರನ್ನು ತೋರಿದ. ಈ ರೀತಿ ತೋರಿಸಿ, ತಾನೂ ಕೂಡಾ ಕೌರವರ ಕಡೆಗಿನ ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ನೋಡಿದ. ಆಗಲೇ ಆತ ಆ ಹನ್ನೊಂದು ಅಕ್ಷೋಹಿಣಿ ಸೈನ್ಯದ ಆಯಸ್ಸನ್ನು ಹೀರಿದ್ದ! ಅರ್ಜುನನಿಗೆ ಮೋಹ ಬಂದಾಗ ಅವನಿಗೆ ಭಗವದ್ಗೀತೆಯ ಉಪದೇಶ ಮಾಡಿ, ಆತನನ್ನು ತತ್ತ್ವಜ್ಞಾನದ ದಾರಿಯಲ್ಲಿ ನಿಲ್ಲಿಸಿದ ಕೃಷ್ಣ. ತಾನು ಅಸ್ತ್ರ ಹಿಡಿಯುವುದೇ ಇಲ್ಲ ಎಂದು ಪ್ರತಿಜ್ಞೆ ಮಾಡಿದ್ದರೂ ಕೂಡಾ, ತನ್ನ ಭಕ್ತನ ಪ್ರತಿಜ್ಞೆಯನ್ನು ಈಡೇರಿಸುವುದಕ್ಕಾಗಿ ತನ್ನ ಪ್ರತಿಜ್ಞೆಯನ್ನು ಮುರಿದು, ರಥದ ಚಕ್ರವನ್ನೇ ಅಸ್ತ್ರವಾಗಿರಿಸಿಕೊಂಡು ಮುನ್ನುಗ್ಗಿಬಂದ ಕರುಣಾಳು ಆತ. ಹೀಗೆ ಬೀಷ್ಮಾಚಾರ್ಯರಿಗೆ ಇಲ್ಲಿ ಯುದ್ಧರಂಗದ ದೃಶ್ಯ ಹಾಗೂ ತನ್ನ ಬಾಣದಿಂದ ಗಾಯಗೊಂಡು ರಕ್ತಸುರಿಯುತ್ತಿರುವ ಮೈಯ ಕೃಷ್ಣ ಕಾಣಿಸುತ್ತಿದ್ದಾನೆ. "ಇಂತಹ ದ್ರೋಹಿಯ ಮೇಲೆ ಕೂಡಾ ಅದೆಂತಹ ಕರುಣೆ, ಆ ಮೋಕ್ಷಪ್ರದ ಭಗವಂತ ಎಲ್ಲರಿಗೂ ಆನಂದವನ್ನು ಕೊಡಲಿ" ಎನ್ನುತ್ತಾ ಭೀಷ್ಮಾಚಾರ್ಯರು ದೇಹತ್ಯಾಗ ಮಾಡುತ್ತಾರೆ. ಧರ್ಮರಾಯ ತನ್ನೆಲ್ಲಾ ಹಿರಿಯರೊಡಗೂಡಿ, ಬಂಧುಬಳಗದೊಂದಿಗೆ ಬೀಷ್ಮಾಚಾರ್ಯರ ಅಂತ್ಯಕ್ರಿಯೆ ಮಾಡುತ್ತಾನೆ. ಆನಂತರ ಧೃತರಾಷ್ಟ್ರ ಗಾಂಧಾರಿಯನ್ನು ಎಲ್ಲರೂ ಸಂತೈಸುತ್ತಾರೆ.

**ಸೂತ ಉವಾಚ-**

ಪಿತ್ರಾ ಚಾನುಮತೋ ರಾಜಾ ವಾಸುದೇವಾನುಮೋದಿತಃ ।
ಚಕಾರ ರಾಜ್ಯಂ ಧರ್ಮೇಣ ಪಿತೃಪೈತಾಮಹಂ ವಿಭುಃ ॥೫೭॥

ಧರ್ಮರಾಯ ಧೃತರಾಷ್ಟ್ರನ ಅನುಮತಿ ಪಡೆದು, ವಾಸುದೇವನ ಅನುಮೋದನೆ ಪಡೆದು, ಧರ್ಮದಿಂದ ತಮ್ಮ ಪಿತೃಪಿತಾಮಹರಿಂದ ಹರಿದುಬಂದಂತಹ ರಾಜ್ಯವನ್ನು, ಧರ್ಮಬದ್ಧವಾಗಿ, ಧಾರ್ಮಿಕವಾಗಿ, ಜನತೆಗೆ ಹಿತಕರವಾಗುವ ರೀತಿಯಲ್ಲಿ ರಾಜ್ಯಭಾರ ಮಾಡುತ್ತಾನೆ.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ನವಮೋऽಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಒಂಬತ್ತನೇ ಅಧ್ಯಾಯ ಮುಗಿಯಿತು.

*********

# ದಶಮೋಽಧ್ಯಾಯಃ

## ಹಸ್ತಿನಾವತಿಯಿಂದ ಬೀಳ್ಕೊಂಡು ದ್ವಾರಕೆಗೆ ಬಂದಿಳಿದ ಶ್ರೀಕೃಷ್ಣ

**ಸೂತ ಉವಾಚ-**

**ನಿಶಮ್ಯ ಭೀಷ್ಮೋಕ್ತಮಥಾಚ್ಯುತೋದಿತಂ ಪ್ರವೃತ್ತವಿಜ್ಞಾನವಿಧೂತವಿಭ್ರಮಃ ।**
**ಶಶಾಸ ಗಾಮಿಂದ್ರ ಇವಾಜಿತಾಶ್ರಯಃ ಪಣಿಧ್ಯುಪಾತ್ತಾಮನುಜಾನುವರ್ತಿತಃ ॥೪॥**

ಶ್ರೀಕೃಷ್ಣನ ಸಮ್ಮುಖದಲ್ಲಿ ಭೀಷ್ಮರಿಂದ ಉಪದೇಶ ಪಡೆದ ಧರ್ಮರಾಯ ತನ್ನೆಲ್ಲಾ ಭ್ರಮೆಯನ್ನು ನಿವಾರಿಸಿಕೊಂಡ ಹಾಗೂ ಮುಂದೆ ಇಂದ್ರ ಸ್ವರ್ಗವನ್ನಾಳುವಂತೆ ತಮ್ಮಂದಿರ ಸಹಾಯದಿಂದ 'ಪಣಿಧಿ'ಯಿಂದ ಕೂಡಿದ ದೇಶವನ್ನಾಳಿದ. ಇಲ್ಲಿ 'ಪಣಿಧಿ' ಎಂದರೆ ಏನು ಎನ್ನುವುದರ ವಿವರಣೆ ಬ್ರಹ್ಮಾಂಡ ಪುರಾಣದಲ್ಲಿ ಬರುತ್ತದೆ. ಅಲ್ಲಿ ಹೇಳುವಂತೆ: **ಅಮಾತ್ಯಾ, ಮಂತ್ರಿಣೋ ದೂತಾಃ ಶ್ರೇಣಯಶ್ಚ ಪುರೋಹಿತಾಃ । ಪುರಂ ಜನಪದಂ ಚೇತಿ ಸಪ್ತ ಪ್ರಣಿಧಯಃ ಸ್ಮೃತಾಃ ।:** ಅಂದರೆ ಅಮಾತ್ಯರು, ಮಂತ್ರಿಗಳು, ದೂತರು, ಅಂಗರಕ್ಷಕರು, ಪುರೋಹಿತರು, ರಾಜಧಾನಿ ಮತ್ತು ದೇಶ ಹೀಗೆ ಏಳು ಬಗೆಯಲ್ಲಿ ರಾಜನಿಗೆ ಪಣಿಧಿಗಳಿರುತ್ತವೆ.

**ಅಶ್ರೂಯಂತಾಶಿಷಃ ಸತ್ಯಾಸ್ತತ್ರತತ್ರ ದ್ವಿಜೇರಿತಾಃ ।**
**ನಾನುರೂಪಾನುರೂಪಾಶ್ಚ ನಿರ್ಗುಣಸ್ಯ ಗುಣಾತ್ಮನಃ ॥೧೦॥**

ಹಸ್ತಿನಪುರದಲ್ಲಿ ಇನ್ನೂ ಸ್ವಲ್ಪ ಕಾಲ ಇದ್ದ ಕೃಷ್ಣ ದ್ವಾರಕೆಗೆ ಹೊರಟು ರಥವನ್ನೇರಿದ. ಆಗ ದ್ವಿಜರು ಮಾಡಿದ ನಿರ್ಗುಣನೂ- ಸರ್ವಗುಣಪೂರ್ಣನೂ, ಅನುರೂಪ-ಅನನುರೂಪನೂ ಆದ ಭಗವಂತನ ಗುಣಗಾನ ಕೇಳಿಬರುತ್ತದೆ. [ಇಲ್ಲಿ ಭಗವಂತನನ್ನು ನಿರ್ಗುಣ ಎಂತಲೂ ಗುಣಾತ್ಮನಃ ಎಂತಲೂ ಹೇಳಿದ್ದಾರೆ. ನಾವು ಈ ಕುರಿತ ವಿವರಣೆಯನ್ನು ಈ ಹಿಂದೆಯೇ ನೋಡಿದ್ದೇವೆ]. ಇಲ್ಲಿ ಭಗವಂತನನ್ನು ಅನುರೂಪ-ಅನನುರೂಪ ಎಂದು ಹೇಳಿರುವುದನ್ನು ಕಾಣುತ್ತೇವೆ. ಪದ್ಮ ಪುರಾಣವನ್ನು ಪ್ರಮಾಣವಾಗಿರಿಸಿಕೊಂಡು ಆಚಾರ್ಯರು ಈ ಕುರಿತು ವಿವರಿಸುತ್ತಾ ಹೀಗೆ ಹೇಳುತ್ತಾರೆ: **ಪಾಲನಾನುಗ್ರಹ ಜಯಾನ ಗೌಣೇಽಂಡೇ ಸಂಸ್ಥಿತೋ ಹರಿಃ । ಕರೋತ್ಯಸೌ ಬಹಿಃ ಸಂಸ್ಥೋ ನ ಕರೋತೀವ ನಿರ್ಗುಣಃ ॥ ಇತಿ ಪಾದ್ಮೇ । ಅತೋ ನಾನುರೂಪಾನುರೂಪಾಶ್ಚ ॥**

**ಸ್ತ್ರಿಯ ಊಚುಃ**

**ಸ ವೈ ಕಿಲಾಯಂ ಪುರುಷಃ ಪುರಾತನೋ ಯ ಏಕ ಆಸೀದವಿಶೇಷ ಆತ್ಮನಿ ।**
**ಅಗ್ರೇ ಗುಣೇಭ್ಯೋ ಜಗದಾತ್ಮನೀಶ್ವರೇ ನಿಮೀಲಿತಾತ್ಮಾನಿಶಿ ಸುಪ್ತಶಕ್ತಿಷು ॥೧೧॥**

**ಸ ಏವ ಭೂಯೋ ನಿಜವೀರ್ಯಚೋದಿತಾಂ ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಮ್ ।**
**ಅನಾಮರೂಪಾತ್ಮನಿ ರೂಪನಾಮನೀ ವಿಧಿತ್ಸಮಾನೋಽನುಸಸಾರ ಶಾಸ್ತ್ರಕೃತ್ ॥೧೨॥**

ರಥವನ್ನೇರಿ ದ್ವಾರಕೆಗೆ ಹೊರಟು ನಿಂತ ಕೃಷ್ಣನನ್ನು ಕುರಿತು ಹಸ್ತಿನಾವತಿಯ ಸ್ತ್ರೀಯರು ಮಾತನಾಡಿಕೊಳ್ಳುತ್ತಾರೆ. ಅವರು ಹೇಳುತ್ತಾರೆ: "ಮಹಾಪ್ರಳಯ ನಂತರ ಸತ್ವಾದಿ ಗುಣಗಳು ಇನ್ನೂ ಸುಪ್ತವಾಗಿರುವಾಗ ಯಾರು ಆ ಪ್ರಳಯ ಸಾಗರದಲ್ಲಿ ಪವಡಿಸಿ ಯೋಗನಿದ್ರೆಯಲ್ಲಿರುತ್ತಾನೋ ಆ ಪುರುಷೋತ್ತಮನೇ ಈ ಶ್ರೀಕೃಷ್ಣ" ಎಂದು. ಇಲ್ಲಿ **"ನಿಶಿ ಸುಪ್ತಶಕ್ತಿಷು"** ಎಂದರೆ **ಸತ್ವಾದಿ ಶಕ್ತಿಷು** ॥ ಎನ್ನುವ ವಿವರಣೆಯನ್ನು ಆಚಾರ್ಯರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ನೀಡಿದ್ದಾರೆ.

ಹಸ್ತಿನಾವತಿಯ ನಾರಿಯರು ಮುಂದುವರಿದು ಹೇಳುತ್ತಾರೆ: ಶ್ರೀಕೃಷ್ಣ ಕೇವಲ ಸಂಹಾರಕರ್ತನಲ್ಲ, ಸೃಷ್ಟಿಕರ್ತನೂ ಅವನೇ ಎಂದು. ಸರ್ವನಿಯಾಮಕನಾದ ಶ್ರೀಹರಿ ನಾಮಾತ್ಮಕ ಮತ್ತು ರೂಪಾತ್ಮಕ ಪ್ರಪಂಚ ನಿರ್ಮಾಣದ ಸಂಕಲ್ಪ ತೊಟ್ಟು ತನ್ನ ಪತ್ನಿ, ಪ್ರಕೃತಿಮಾತೆ, ಜೀವಮಾಯೆ ಶ್ರೀಲಕ್ಷ್ಮಿಯಲ್ಲಿ ಗರ್ಭಾಧಾನ ಮಾಡಿದ. ಆ ಶ್ರೀಹರಿಯೇ ಈ ಶ್ರೀಕೃಷ್ಣ; ದುಷ್ಟಸಂಹಾರಕ್ಕಾಗಿ ನಾನಾ ಅವತಾರಗಳನ್ನು ತಾಳುವ ಈ ಶ್ರೀಕೃಷ್ಣನ ಪತ್ನಿಯರು ಧನ್ಯರು ಎಂದು ಹೊಗಳುತ್ತಾರೆ ಹಸ್ತಿನಾವತಿಯ ಸ್ತ್ರೀಯರು.

ಹೀಗೆ ಎಲ್ಲರಿಂದ ಬೀಳ್ಕೊಂಡು, ಧರ್ಮರಾಯ ಸ್ನೇಹಮಾತ್ರದಿಂದ ಕಳುಹಿಸಿದ ಚತುರಂಗ ಸೇನೆಯೊಂದಿಗೆ ಹಸ್ತಿನಾವತಿಯಿಂದ ಹೊರಟು, ಅನೇಕ ದೇಶಗಳನ್ನು ದಾಟಿ, ದ್ವಾರಕೆಯನ್ನು ತಲುಪುತ್ತಾನೆ ಶ್ರೀಕೃಷ್ಣ. ದ್ವಾರಕೆಯ ಪ್ರಜೆಗಳು ಭಕ್ತಿಪೂರ್ವಕವಾಗಿ ಶ್ರೀಕೃಷ್ಣನನ್ನು ಸ್ವಾಗತಿಸುತ್ತಾರೆ. ಶ್ರೀಕೃಷ್ಣನನ್ನು ಕಾಣದ ದಿನಗಳು ಅವರ ಪಾಲಿಗೆ ಕೋಟಿ ವರ್ಷದಷ್ಟು ಧೀರ್ಘವಾಗಿ ಕಂಡಿದ್ದರಿಂದ, ಅವರು ಇಲ್ಲಿ ಕೃಷ್ಣನನ್ನು ಕಂಡು ಬಹಳ ಸಂತಸಗೊಳ್ಳುತ್ತಾರೆ. ದ್ವಾರಕೆಯಲ್ಲಿ ತನ್ನ ಪತ್ನಿಯರೊಂದಿಗಿದ್ದೂ, ಯಾವ ಲೇಪವೂ ಇಲ್ಲದೇ ತನ್ನ ಸರ್ವೋತ್ತಮತ್ವವನ್ನು ಮೆರೆಯುತ್ತಾನೆ ಶ್ರೀಕೃಷ್ಣ.

॥ **ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ದಶಮೋಽಧ್ಯಾಯಃ** ॥

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹತ್ತನೇ ಅಧ್ಯಾಯ ಮುಗಿಯಿತು.

*********

# ಏಕಾದಶೋಽಧ್ಯಾಯಃ

## ಪರೀಕ್ಷಿತನ ಜನನ

ಉಗ್ರಶ್ರವಸ್ಸರ ಮಾತನ್ನು ಆಲಿಸುತ್ತಿರುವ ಶೌನಕಾದಿಗಳು ಸೂತ ಪುರಾಣಿಕರಲ್ಲಿ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ಸಂರಕ್ಷಿಸಲ್ಪಟ್ಟ ಮಗುವಿನ ಕಥನವನ್ನು ಕೇಳಲು ಇಚ್ಛಿಸುತ್ತಾರೆ. ಅವರ ಇಚ್ಛೆಗನುಗುಣವಾಗಿ ಸೂತರು ಮಗುವಿನ ಜನ್ಮ ಕಥನವನ್ನು ವಿವರಿಸುತ್ತಾರೆ:

ತಾಯಿಯ ಗರ್ಭದಲ್ಲಿರುವಾಗಲೇ ಭಗವಂತನ ದರ್ಶನಭಾಗ್ಯ ಪಡೆದ ಪಾಂಡವರ ವಂಶದ ಕುಡಿ ಪರೀಕ್ಷಿತನ ಜನನ ಒಂದು ಶುಭ ಘಳಿಗೆಯಲ್ಲಿ ಆಗುತ್ತದೆ. ತಾಯಿ ಉತ್ತರೆಗೆ ಪ್ರಸವವಾದಾಗ ಮಗು ಉಸಿರಾಡುತ್ತಿರಲಿಲ್ಲ. ಆದರೆ ಶ್ರೀಕೃಷ್ಣ ಆ ಮಗುವನ್ನು ತನ್ನ ಕೈಯಿಂದ ಎತ್ತಿಹಿಡಿದು ಮರುಜೀವ ತುಂಬುತ್ತಾನೆ.  ಮಹಾವಿಷ್ಣುವಿನ ಕೃಪಾಕಟಾಕ್ಷದಿಂದ ಸಂರಕ್ಷಿಸಲ್ಪಟ್ಟು ಹುಟ್ಟಿರುವುದರಿಂದ ಆ ಮಗು 'ವಿಷ್ಣುರಾತ' ಎನ್ನುವ ಹೆಸರನ್ನು ಪಡೆಯುತ್ತದೆ. ಪಾಂಡವರ ವಂಶದ ಕುಡಿ ಭೂಮಿಯಲ್ಲಿ ಜನಿಸಿದಾಗ ಎಲ್ಲರಿಗೂ ಅಪಾರ ಆನಂದವಾಗುತ್ತದೆ. ಧರ್ಮರಾಯನಿಗಂತೂ ಮುಂದೆ ದೇಶವನ್ನಾಳುವ ಈ ಮಗುವಿನ ಭವಿಷ್ಯ ತಿಳಿದುಕೊಳ್ಳಬೇಕು ಎನ್ನುವ ಆಸೆ. ಅದಕ್ಕಾಗಿ ಆತ ತಮ್ಮ ಮನೆತನದ ದೈವಜ್ಞ(ಜ್ಯೋತಿಷಿ)ರನ್ನು ಕರೆಸಿ ಮಗುವಿನ ಭವಿಷ್ಯವನ್ನು ತಿಳಿಸಬೇಕಾಗಿ ಕೇಳಿಕೊಳ್ಳುತ್ತಾನೆ.

**ಬ್ರಾಹ್ಮಣಾ ಊಚುಃ**

ಪಾರ್ಥ ಪ್ರಜಾವಿತಾ ಸಾಕ್ಷಾದಿಕ್ಷ್ವಾಕುರಿವ ಮಾನವಃ ।
ಬ್ರಹ್ಮಣ್ಯಃ ಸತ್ಯಸಂಧಶ್ಚ ರಾಮೋ ದಾಶರಥಿರ್ಯಥಾ ॥೧೯॥

ದೈವಜ್ಞರು ಮಗುವಿನ ಜನ್ಮಕ್ಕನುಗುಣವಾಗಿ, ಅವನ ಗ್ರಹಗತಿಯನ್ನು ನುಡಿಸಿ ಹೇಳುತ್ತಾರೆ: "ಇವನು ಮುಂದೆ ಪ್ರಜೆಗಳ ರಕ್ಷಕನಾಗಿ ಒಳ್ಳೆಯ ರಾಜ ಎನಿಸುತ್ತಾನೆ" ಎಂದು. ಎಷ್ಟು ಒಳ್ಳೆಯ ರಾಜನಾಗುತ್ತಾನೆ ಎಂದರೆ, ಈ ಮನ್ವಂತರದ ಮೊದಲಿಗ, ವೈವಸ್ವತ ಮನುವಿನ ಪುತ್ರ ಇಕ್ಷ್ವಾಕುವಿನಂತೆ  ಪ್ರಸಿದ್ಧನಾಗುತ್ತಾನೆ ಎನ್ನುತ್ತಾರೆ ದೈವಜ್ಞರು. ಅಷ್ಟೇ ಅಲ್ಲ, ದಶರಥಪುತ್ರ ಶ್ರೀರಾಮಚಂದ್ರನಂತೆ ಇವನು ಬ್ರಹ್ಮಣ್ಯನೂ ಸತ್ಯಸಂಧನೂ ಆಗುತ್ತಾನೆ ಎನ್ನುತ್ತಾರೆ. ನಮಗೆ ತಿಳಿದಂತೆ ಶ್ರೀರಾಮಚಂದ್ರ ಒಮ್ಮೆ ಆಡಿದ ಮಾತನ್ನು ಮತ್ತೆ ಹಿಂದೆಗೆದುಕೊಂಡವನಲ್ಲ. ರಾಮಾವತಾರವಾಗಿರುವುದೇ ಸತ್ಯದ ಆವಿಷ್ಕಾರಕ್ಕಾಗಿ. ಸತ್ಯವನ್ನು ಪೂರ್ಣಪ್ರಮಾಣದಲ್ಲಿ ತನ್ನ ಅವತಾರದಲ್ಲಿ ನಡೆದು ತೋರಿದ ರಾಮಚಂದ್ರ ಸತ್ಯಸಂಧತೆಯ ಪರಾಕಾಷ್ಠೆ. "ಅಂತಹ ಶ್ರೀರಾಮಚಂದ್ರನಂತೆ ಈ ಮಗು ಬ್ರಹ್ಮಣ್ಯನೂ, ಸತ್ಯಸಂಧನೂ ಆಗುತ್ತಾನೆ" ಎನ್ನುತ್ತಾರೆ ದೈವಜ್ಞರು.  ಇಲ್ಲಿ ಬ್ರಹ್ಮಣ್ಯಃ ಎಂದರೆ ಭಗವಂತನನ್ನು ಪ್ರತಿಪಾದಿಸುವ ವೇದಗಳನ್ನು ಬಲ್ಲ ಜ್ಞಾನಿಗಳನ್ನು ಸದಾ ಗೌರವಿಸುವವ ಎಂದರ್ಥ.

ಇಲ್ಲಿ ಪರೀಕ್ಷಿತನನ್ನು ಶ್ರೀರಾಮಚಂದ್ರನಿಗೆ ಹೋಲಿಸಲಾಗಿದೆ. ಇಂತಹ ಉಪಮಾನ ಹೇಗೆ ಸಾಧ್ಯ? ಪರೀಕ್ಷಿತನೆಲ್ಲಿ, ಶ್ರಿರಾಮಚಂದ್ರನೆಲ್ಲಿ ಎನ್ನುವ ಪ್ರಶ್ನೆ ಪ್ರತಿಯೊಬ್ಬರಿಗೂ ಬರುತ್ತದೆ. ಇದಕ್ಕೆ ಆಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ಸುಂದರವಾದ ವಿವರಣೆ ನೀಡಿದ್ದಾರೆ. ದೃಷ್ಟಾಂತದಲ್ಲಿ ಮೂರು ವಿಧ. ಅಧಿಕ, ಸಮ ಮತ್ತು ಹೀನ. ಉದಾಹರಣೆಗೆ ಜೀವರಿಗೆ ಭಗವಂತನ ದೃಷ್ಟಾಂತ-ಅಧಿಕ ದೃಷ್ಟಾಂತ, ಭಗವಂತನ ಒಂದು ರೂಪಕ್ಕೆ ಆತನ ಇನ್ನೊಂದು ರೂಪದ

ದೃಷ್ಟಾಂತ-ಸಮ ದೃಷ್ಟಾಂತ ಮತ್ತು ಭಗವಂತನಿಗೆ ಜೀವದ ದೃಷ್ಟಾಂತ-ಹೀನ ದೃಷ್ಟಾಂತ. ಇಲ್ಲಿ ಕಥಾನಾಯಕನಾದ ಪರೀಕ್ಷಿತ ರಾಜನ ಹಿರಿಮೆಯನ್ನು ಒತ್ತಿ ಹೇಳುವುದಕ್ಕಾಗಿ ಅಧಿಕ ದೃಷ್ಟಾಂತವನ್ನು ಬಳಸಲಾಗಿದೆ.

ದೈವಜ್ಞರು 'ವಿಷ್ಣುರಾತ'ನ ಭವಿಷ್ಯವನ್ನೂ ವಿವರಿಸುತ್ತಾ ಹೇಳುತ್ತಾರೆ: "ಈತ ಅತ್ಯಂತ ಯಶಸ್ವೀ ರಾಜನಾಗುತ್ತಾನೆ. ಆದರೆ, ಒಂದು ದಿನ ಋಷಿ ಶಾಪಕ್ಕೊಳಗಾಗಿ ಸರ್ಪದೋಷದಿಂದ ಸಾಯುತ್ತಾನೆ. ಇದಕ್ಕೆ ಯಾವುದೇ ಪರಿಹಾರವಿಲ್ಲ" ಎಂದು! ವಿಷ್ಣುರಾತನ ಕುರಿತಾದ ಈ ಭವಿಷ್ಯ ಎಲ್ಲರಿಗೂ ತಿಳಿದಿತ್ತು. ಆದ್ದರಿಂದ ಆತ ದೊಡ್ಡವನಾದಾಗ ಆತನಿಗೂ ಈ ವಿಚಾರ ತಿಳಿಯಿತು. ಹಾಗಾಗಿ ಆತನಿಗೆ ಯಾವಾಗಲೂ ಹಾವಿನ ನೆನಪು ಕಾಡುತ್ತಿತ್ತು. ಇದರಿಂದಾಗಿ ವಿಷ್ಣುರಾತ ಹೆಜ್ಜೆ ಇಡುವಾಗಲೆಲ್ಲಾ ಪರೀಕ್ಷಿಸಿ ಹೆಜ್ಜೆ ಇಡುತ್ತಿದ್ದ. ಹೀಗೆ ಪರೀಕ್ಷಿಸಿ ಹೆಜ್ಜೆ ಇಡುತ್ತಿದ್ದುದರಿಂದ ಆತನಿಗೆ 'ಪರೀಕ್ಷಿತ' ಎನ್ನುವ ಹೆಸರು ಬರುತ್ತದೆ ಮತ್ತು ಆತ ಅದೇ ಹೆಸರಿನಿಂದ ವಿಖ್ಯಾತನಾಗುತ್ತಾನೆ.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಏಕಾದಶೋಽಧ್ಯಾಯಃ ॥

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹನ್ನೊಂದನೇ ಅಧ್ಯಾಯ ಮುಗಿಯಿತು.

*********

# ದ್ವಾದಶೋಽಧ್ಯಾಯಃ

## ಹಸ್ತಿನಪುರಕ್ಕೆ ವಿದುರನ ಆಗಮನ

ಪರೀಕ್ಷಿತನ ಜನನಾನಂತರ ಧರ್ಮರಾಯ ಮೂರು ಅಶ್ವಮೇಧಯಾಗ ಮಾಡುತ್ತಾನೆ. ಅಷ್ಟೇ ಅಲ್ಲ, ಹಸ್ತಿನಪುರದಲ್ಲಿ ನಿರಂತರ ಯಜ್ಞ-ಯಾಗಾದಿಗಳು ನಡೆಯುತ್ತಿರುತ್ತವೆ. ಪ್ರತಿಯೊಂದು ಯಜ್ಞ-ಯಾಗದಿಗಳಲ್ಲಿ ಶ್ರೀಕೃಷ್ಣ ಪಾಂಡವರ ಜೊತೆಗಿದ್ದು ಅವರನ್ನು ಹರಸುತ್ತಾನೆ.

ಪರೀಕ್ಷಿತನಿಗೆ ಸುಮಾರು ಹತ್ತು ವರ್ಷ ಹಾಗೂ ಧರ್ಮರಾಯನಿಗೆ ಸುಮಾರು ಎಂಬತ್ತೆರಡು ವರ್ಷವಾಗಿರುವಾಗ ಯಾದವ ವಂಶದಲ್ಲಿ ಒಂದು ಘಟನೆ ನಡೆಯುತ್ತದೆ. ಜಾಂಬವತಿ ಪುತ್ರ 'ಸಾಂಬ' ಋಷಿಗಳಿಂದ ಶಾಪಗ್ರಸ್ಥನಾಗುತ್ತಾನೆ. "ಇವನ ಹೊಟ್ಟೆಯಲ್ಲಿ ಹುಟ್ಟುವ ಸಂತಾನದಿಂದಲೇ ಯದುವಂಶ ನಾಶವಾಗಲಿ" ಎಂದು ಋಷಿಗಳು ಅವನಿಗೆ ಶಾಪವೀಯುತ್ತಾರೆ.  ಈ ಶಾಪದ ವಿಚಾರ ಉದ್ಧವನಿಗೆ ತಿಳಿಯುತ್ತದೆ. ಇದು ಭಗವಂತನ ಲೀಲೆ, ಶ್ರೀಕೃಷ್ಣ ತನ್ನ ಅವತಾರ ಸಮಾಪ್ತಿ ಮಾಡುತ್ತಿದ್ದಾನೆ ಎನ್ನುವ ಸತ್ಯವನ್ನು ಆತ ಅರಿಯುತ್ತಾನೆ.

ಉದ್ಧವನ ಪ್ರಾರ್ಥನೆಯಂತೆ ಶ್ರೀಕೃಷ್ಣ ಆತನಿಗೆ ಜ್ಞಾನೋಪದೇಶ ಮಾಡುತ್ತಾನೆ ಮತ್ತು ಅದನ್ನು ಬದರಿಗೆ ಹೋಗಿ ಅಲ್ಲಿರುವ ಋಷಿಗಳಿಗೆ ಉಪದೇಶಿಸಬೇಕೆಂದು ಹೇಳುತ್ತಾನೆ.[ಈ ಕುರಿತ ಅದ್ಭುತ ವಿವರಣೆ, 'ಉದ್ಧವಗೀತೆ' ಭಾಗವತದ ಹನ್ನೊಂದನೇ ಸ್ಕಂಧದಲ್ಲಿದೆ]. ಉದ್ಧವ ಶ್ರೀಕೃಷ್ಣನ ಆದೇಶದಂತೆ ಬದರಿಗೆ ಹೋಗಿ ಅಲ್ಲಿರುವ ಋಷಿಗಳಿಗೆ ಭಗವಂತನ ಜ್ಞಾನಸಂದೇಶವನ್ನು ಬಿತ್ತರಿಸಿ, ಮರಳಿ ಬಂದು ಶ್ರೀಕೃಷ್ಣನ ಜೊತೆಯಲ್ಲೇ ಇರುತ್ತಾನೆ.

**ಸೂತ ಉವಾಚ--**

**ವಿದುರಸ್ತೀರ್ಥಯಾತ್ರಾಯಾಂ ಮೈತ್ರೇಯಾದಾತ್ಮನೋ ಗತಿಮ್ ।**
**ಜ್ಞಾತ್ವಾಽಽಗಾದ್ಧಾಸ್ತಿನಪುರಂ ತಯಾಽವಾಪ್ತವಿವಿತ್ಸಿತಃ ॥೧॥**

ಉದ್ಧವನಿಗೆ ಉಪದೇಶ ಮಾಡಿದ ಕಾಲದಲ್ಲೇ ಶ್ರೀಕೃಷ್ಣ ವೇದವ್ಯಾಸ ಶಿಷ್ಯ ಮೈತ್ರೇಯನಿಗೂ ಜ್ಞಾನೋಪದೇಶ ಮಾಡಿರುತ್ತಾನೆ ಮತ್ತು ಆ ಅಧ್ಯಾತ್ಮ ಸಂದೇಶವನ್ನು ವಿದುರನಿಗೆ ತಲುಪಿಸುವಂತೆ  ಹೇಳಿರುತ್ತಾನೆ. ಭಗವಂತನ ಆದೇಶದಂತೆ  ಮೈತ್ರೇಯ ಶ್ರೀಕೃಷ್ಣನ ಜ್ಞಾನಸಂದೇಶವನ್ನು ವಿದುರನಿಗೆ ಉಪದೇಶಿಸುತ್ತಾನೆ. [ಈ ಕುರಿತ ಅದ್ಭುತ ವಿವರಣೆ ಭಾಗವತದ ಮೂರು ಮತ್ತು ನಾಲ್ಕನೇ ಸ್ಕಂಧದಲ್ಲಿದೆ]

ಕುರುಕ್ಷೇತ್ರ ಯುದ್ಧ ಪ್ರಾರಂಭವಾದಂದಿನಿಂದ ವಿದುರ ತನ್ನ ಹೆಚ್ಚಿನ ಸಮಯವನ್ನು ತೀರ್ಥಯಾತ್ರೆಯಲ್ಲೇ ಕಳೆಯುತ್ತಿದ್ದ ಹಾಗೂ ಆಗಾಗ ಹಸ್ತಿನಪುರಕ್ಕೂ ಬಂದು ಹೋಗುತ್ತಿದ್ದ. ಹೀಗೆ ತೀರ್ಥಯಾತ್ರೆಯಲ್ಲಿರುವಾಗ ಆತ ಒಮ್ಮೆ ಉದ್ಧವನನ್ನು ಭೇಟಿಯಾಗುತ್ತಾನೆ. ಶ್ರೀಕೃಷ್ಣನ ಅಂತರಂಗ ಭಕ್ತರಿಗಷ್ಟೇ ತಿಳಿದಿರುವ, ಮುಂದೆ ಸುಮಾರು ಇಪ್ಪತ್ತಾರು ವರ್ಷಗಳ ನಂತರ ನಡೆಯಲಿರುವ, 'ಭಗವಂತ ಅವತಾರ ಸಮಾಪ್ತಿ ಮಾಡಲಿರುವ' ದುಃಖದ ವಿಷಯವನ್ನು ಉದ್ಧವ ತಡೆಯಲಾಗದೇ, ಪರಮ ಆತ್ಮೀಯನಾದ ವಿದುರನಿಗೆ ತಿಳಿಸುತ್ತಾನೆ. ಈ ವಿಚಾರವನ್ನು ತಿಳಿದ ವಿದುರ ಹಸ್ತಿನಪುರಕ್ಕೆ ಬಂದಿದ್ದಾನೆ.

**ಪ್ರತ್ಯುಜ್ಜಗ್ಮುಃ ಪ್ರಹರ್ಷೇಣ ಪ್ರಾಣಾಂಸ್ತನ್ವ ಇವಾಗತಾನ್ ।**
**ಅಭಿಸಂಗಮ್ಯ ವಿಧಿವತ್ ಪರಿಷ್ವಂಗಾಭಿವಾದನೈಃ ॥೫॥**

ಹಸ್ತಿನಪುರಕ್ಕೆ ಆಗಮಿಸಿದ ವಿದುರನನ್ನು ಎಲ್ಲರೂ ಅತ್ಯಂತ ಸಂಭ್ರಮದಿಂದ ಸ್ವಾಗತಿಸುತ್ತಾರೆ. ಪ್ರಾಣಶಕ್ತಿ ಇಲ್ಲದೇ ನಿಸ್ತೇಜವಾಗಿರುವ ಶರೀರದೊಳಗೆ ಪ್ರಾಣಶಕ್ತಿ ಪ್ರವೇಶಿಸಿದರೆ ಹೇಗೆ ಆ ಶರೀರ ಎದ್ದು ನಿಲ್ಲಬಹುದೋ, ಆ ರೀತಿ ಪಾಂಡವರಿಗೆ ವಿದುರನ ಆಗಮನದಿಂದ ಸಂತೋಷವಾಗುತ್ತದೆ. ಕಿರಿಯರು ನಮಸ್ಕರಿಸುವ ಮೂಲಕ, ಹಿರಿಯರು ಒಬ್ಬರನ್ನೊಬ್ಬರು ತಬ್ಬಿಕೊಳ್ಳುವ ಮುಖೇನ ಬಹಳ ಸಂಭ್ರಮದಿಂದ ವಿದುರನನ್ನು ಸ್ವಾಗತಿಸಲಾಗುತ್ತದೆ.
ಇಲ್ಲಿ ಕೊಟ್ಟಿರುವ ದೃಷ್ಟಾಂತ "**ಪ್ರಾಣಾಂಸ್ತನ್ವ ಇವಾಗತಾನ್**" ಉಪನಿಷತ್ತಿನಲ್ಲಿ ಉಕ್ತವಾಗಿದೆ. ಪ್ರಶ್ನೋಪನಿಷತ್ತಿನಲ್ಲಿ ಪ್ರಾಣದೇವರ ಮಹಿಮೆಯನ್ನು ವಿವರಿಸುವ ಒಂದು ಕಥೆಯಿದೆ. ಅಲ್ಲಿ ಹೇಳುವಂತೆ: ಎಲ್ಲಾ ತತ್ತ್ವಾಭಿಮಾನಿ ದೇವತೆಗಳು ದೇಹವನ್ನು ಪ್ರವೇಶಿಸದರೂ ಕೂಡಾ, ದೇಹ ಎದ್ದು ನಿಲ್ಲುವುದಿಲ್ಲ. ಆದರೆ ಪ್ರಾಣದೇವರು ಪ್ರವೇಶಿಸಿದಾಗ- "**ತತ್ ಪ್ರಾಣೇ ಪ್ರಪನ್ನ ಉದತಿಷ್ಠತ್**" -ಶರೀರ ಎದ್ದು ನಿಲ್ಲುತ್ತದೆ(ಪ್ರಶ್ನೋಪನಿಷತ್-ಅಧ್ಯಾಯ-೨). ಇಲ್ಲಿ ಆ ಕಥೆಯನ್ನೇ ದೃಷ್ಟಾಂತವಾಗಿ ಹೇಳಲಾಗಿದೆ. ಇಂದ್ರಿಯ ದೇವತೆಗಳು ಪ್ರಾಣದೇವರನ್ನು ಇದಿರುಗೊಂಡಂತೆ, ಪ್ರಾಣದೇವರು ಬ್ರಹ್ಮಶರೀರವನ್ನು ಪ್ರವೇಶಿಸಿದಾಗ ಆ ಶರೀರ ಹೇಗೆ ಎದ್ದು ನಿಲ್ಲುತ್ತದೋ ಹಾಗೇ, ಪಾಂಡವರು ವಿದುರನನ್ನು ಸ್ವಾಗತಿಸಿದರು.
ವಿದುರನನ್ನು ಸ್ವಾಗತಿಸಿ ಕರೆತಂದ ಧರ್ಮರಾಯ ಆತನಲ್ಲಿ ತೀರ್ಥಯಾತ್ರೆಯ ವಿವರವನ್ನೂ, ಯಾದವರ ಕ್ಷೇಮ ಸಮಾಚಾರದ ವಿವರವನ್ನೂ ಕೇಳುತ್ತಾನೆ.

**ಇತ್ಯುಕ್ತೋ ಧರ್ಮರಾಜೇನ ಸರ್ವಂ ತತ್ ಸಮವರ್ಣಯತ್ ।**
**ಯಥಾನುಭೂತಂ ಭ್ರಮತಾ ವಿನಾ ಯದುಕುಲಕ್ಷಯಮ್ ॥೧೨॥**

ಧರ್ಮರಾಯನಿಗೆ ವಿದುರ ತಾನು ತನ್ನ ತೀರ್ಥಯಾತ್ರೆಯಲ್ಲಿ ಕಂಡ ಘಟನೆಗಳನ್ನೂ, ಅನುಭವಗಳನ್ನೂ ಸುವಿವರವಾಗಿ ಹೇಳುತ್ತಾನೆ. ಆದರೆ ಆತ ಮುಂದೆ ನಡೆಯಲಿರುವ ಯದುವಂಶ ನಾಶದ ವಿಚಾರವನ್ನು ಮಾತ್ರ ಹೇಳುವುದಿಲ್ಲ! ಏಕೆಂದರೆ ಧರ್ಮರಾಯನಿಗೆ 'ಶ್ರೀಕೃಷ್ಣ ಅವತಾರ ಸಮಾಪ್ತಿ ಮಾಡಲಿದ್ದಾನೆ' ಎನ್ನುವ ವಿಚಾರವನ್ನು ಕೇಳಿ ಸಹಿಸಿಕೊಳ್ಳುವ ಶಕ್ತಿ ಇಲ್ಲ ಎನ್ನುವ ಸತ್ಯ ವಿದುರನಿಗೆ ತಿಳಿದಿತ್ತು.
ಕೆಲವು ಭಾಷ್ಯಕಾರರು "ಯದುಕುಲ ಕ್ಷಯವಾದ ವಿಚಾರವನ್ನು ವಿದುರ ಧರ್ಮರಾಯನಿಗೆ ಹೇಳಲಿಲ್ಲ" ಎಂದು ಬರೆಯುತ್ತಾರೆ. ಈ ರೀತಿ ಹೇಳಿದರೆ 'ವಿದುರ ಧರ್ಮರಾಯನನ್ನು ಭೇಟಿಯಾಗುವ ಮೊದಲೇ ಯದುಕುಲ ನಾಶವಾಗಿತ್ತು' ಎಂದರ್ಥವಾಗುತ್ತದೆ. ಆದರೆ ಆ ವಿಚಾರ ಸರಿಯಲ್ಲ. ಏಕೆಂದರೆ ವಿದುರ ದೇಹತ್ಯಾಗ ಮಾಡಿ ಹಲವು ವರ್ಷಗಳ ನಂತರ ಯದುಕುಲ ಕ್ಷಯವಾಗುತ್ತದೆ. ಈ ವಿಷಯ ಮುಂದೆ ಭಾಗವತದಲ್ಲೇ ನಮಗೆ ತಿಳಿಯುತ್ತದೆ.

**ಅಬಿಭ್ರದರ್ಯಮಾ ದಂಡಂ ಯಥಾಘಮಘಕಾರಿಷು ।**
**ಯಾವದ್ ಬಭಾರ ಶೂದ್ರತ್ವಂ ಶಾಪಾದ್ ವರ್ಷಶತಂ ಯಮಃ ॥೧೫॥**

ಪಾಂಡವರಿಗೆ ಮಾರ್ಗದರ್ಶಕನಾಗಿದ್ದು, ಹಲವು ಬಾರಿ ಅವರನ್ನು ಆಪತ್ತಿನಿಂದ ರಕ್ಷಿದ ವಿದುರ ಏಕೆ ಒಬ್ಬ ಶೂದ್ರ ಯೋನಿಯಲ್ಲಿ ಹುಟ್ಟಿ, ಶೂದ್ರನಂತೆ ಬದುಕಿದ ಎನ್ನುವ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರವಿದೆ. ಒಮ್ಮೆ ಮಾಂಡವ್ಯ ಮಹರ್ಷಿಗಳ ಮೇಲೆ ಕಳ್ಳತನದ ಆರೋಪ ಬರುತ್ತದೆ. ಹಾಗಾಗಿ ಅಲ್ಲಿಯ ಅರಸ ಅವರನ್ನು ಶೂಲಕ್ಕೇರಿಸಲು ಆಜ್ಞೆ ಮಾಡುತ್ತಾನೆ. ಆದರೆ ಶೂಲಕ್ಕೇರಿಸಿದ ಸಮಯದಲ್ಲಿ ಅರಸನಿಗೆ ಮುನಿವರ್ಯರು ನಿರಪರಾಧಿ ಎನ್ನುವ ಸತ್ಯ ತಿಳಿಯುತ್ತದೆ. ತಕ್ಷಣ ಅರಸ ತನ್ನ ತಪ್ಪನ್ನು ತಿದ್ದಿಕೊಂಡು ಋಷಿಗಳಲ್ಲಿ ಕ್ಷಮೆ ಯಾಚಿಸುತ್ತಾನೆ. ಆದರೆ ಮಾಂಡವ್ಯರಿಗೆ ಅರಸನ ಕ್ಷಮೆಯಾಚನೆಯಿಂದ ಸಮಾಧಾನವಾಗುವುದಿಲ್ಲ. ಅವರು ನೇರವಾಗಿ ಯಮಧರ್ಮರಾಯನಲ್ಲಿಗೆ ಹೋಗಿ "ನನಗೇಕೆ ಈ ಶಿಕ್ಷೆ" ಎಂದು ಕೇಳುತ್ತಾರೆ. ಅದಕ್ಕೆ ಯಮ ವಿನೋದವಾಗಿ "ನೀವು ನಿಮ್ಮ ಬಾಲ್ಯದಲ್ಲಿ ಒಂದು ಪತಂಗದ ರೆಕ್ಕೆಯನ್ನು ದರ್ಭೆಯಿಂದ ಚುಚ್ಚಿ ಹಿಂಸಿಸಿದ್ದೀರಿ ಅದಕ್ಕೆ ಈ ಶಿಕ್ಷೆ" ಎನ್ನುತ್ತಾನೆ. ಈ ಉತ್ತರದಿಂದ ಮಾಂಡವ್ಯ ಮುನಿಗೆ ಕೋಪ ಬರುತ್ತದೆ. ಯಾವಾಗಲೂ, ಹದಿನಾಲ್ಕು ವಯಸ್ಸಿನ ಮೊದಲು ತಿಳಿಯದೇ ಮಾಡುವ ಬಾಲಾಪರಾಧಗಳಿಗೆ ಕರ್ಮಫಲವಿಲ್ಲ. ಹಾಗಿರುವಾಗ ಬಾಲ್ಯದಲ್ಲಿ ತಿಳಿಯದೇ ಮಾಡಿದ ತಪ್ಪಿಗೆ ಇದೆಂತಹ ಶಿಕ್ಷೆ ಎಂದು ಪ್ರಶ್ನಿಸಿದ ಅವರು "ನೀನು ಭೂಲೋಕದಲ್ಲಿ ಶೂದ್ರಯೋನಿಯಲ್ಲಿ ಜನಿಸಿ ಶತವರ್ಷ ಬದುಕಿರು" ಎಂದು ಯಮನಿಗೆ ಶಾಪವನ್ನೀಯುತ್ತಾರೆ. ಈ ಕಾರಣದಿಂದ ಯಮ ವಿದುರನಾಗಿ ಹುಟ್ಟಿ ಶೂದ್ರನಂತೆ ಬದುಕುತ್ತಾನೆ. ಇದೊಂದು ದೈವ ಲೀಲೆ. ವೇದವ್ಯಾಸರ ಮಗನಾಗಿ ಹುಟ್ಟಿದ ವಿದುರ ಶೂದ್ರನಂತೆ ನೂರು ವರ್ಷ ಭೂಲೋಕದಲ್ಲಿ ಬದುಕಿದ.

ಈ ಶ್ಲೋಕದಲ್ಲಿ "ಯಮ-ಶಾಪದಿಂದಾಗಿ ಶೂದ್ರನಾಗಿ ಭೂಮಿಯಲ್ಲಿ ೧೦೦ ವರ್ಷಗಳ ಕಾಲ ಇದ್ದ ಸಮಯದಲ್ಲಿ, ಆತನ ಸ್ಥಾನದಲ್ಲಿ ಅರ್ಯಮ ಎನ್ನುವ ಆದಿತ್ಯ ಆತನ ಪ್ರಭಾರನಾಗಿ**(Incharge)** ಕೆಲಸ ಮಾಡಿದ; ಪಾಪ ಮಾಡಿದವರಿಗೆ ಅವರ ಪಾಪಕ್ಕೆ ತಕ್ಕನಾದ ದಂಡನೆ ಕೊಡುವ ಹೊಣೆಗಾರಿಕೆಯನ್ನು ಅರ್ಯಮ ವಹಿಸಿದ" ಎಂದು ಹೇಳಿದಂತೆ ಕಾಣುತ್ತದೆ. ಆದರೆ ಈ ರೀತಿ ಅರ್ಥ ಚಿಂತನೆ ಸರಿಯಲ್ಲ. ಏಕೆಂದರೆ ದೇವತೆಗಳು ಎಂದೂ ಪೂರ್ಣರೂಪದಲ್ಲಿ ಭೂಮಿಗಿಳಿದು ಬರುವುದಿಲ್ಲ. ಅವರು ಒಂದು ಅಂಶದಲ್ಲಿ ದೇವಲೋಕದಲ್ಲಿದ್ದರೆ ಇನ್ನೊಂದು ರೂಪದಲ್ಲಿ ಭೂಲೋಕದಲ್ಲಿರಬಲ್ಲರು. ಇದಕ್ಕಾಗಿ ಅವರಿಗೆ 'ಸಾಂಶ ಜೀವರು' ಎಂದು ಕರೆಯುತ್ತಾರೆ. ಹೀಗಾಗಿ ದೇವತೆಗಳು ಭೂಲೋಕದಲ್ಲಿ ಅವತಾರವೆತ್ತಿದಾಗ ಅವರ ಪದವಿಗೆ ಇನ್ನೊಬ್ಬ ಪ್ರಭಾರ ಇರುವುದಿಲ್ಲ. ಅವರು ತಮ್ಮ ಪದವಿಯನ್ನು ಸ್ವಯಂ ನಿರ್ವಹಿಸುತ್ತಿರುತ್ತಾರೆ. ಅವರು ಏಕಕಾಲದಲ್ಲಿ ಅನೇಕ ರೂಪಧಾರಣೆ ಮಾಡಬಲ್ಲರು.

ಮೇಲಿನ ಶ್ಲೋಕದಲ್ಲಿ "ಅರ್ಯಮ ದಂಡವನ್ನು ಧಾರಣೆ ಮಾಡಿದ" ಎಂದಿದ್ದಾರೆ. ಇಲ್ಲಿ ಅರ್ಯಮ ಎಂದರೆ ದ್ವಾದಶಾದಿತ್ಯರಲ್ಲಿ ಒಬ್ಬನಲ್ಲ, ಬದಲಿಗೆ ಸೂರ್ಯಪುತ್ರನಾದ ಯಮನನ್ನೇ ಇಲ್ಲಿ ಅರ್ಯಮ ಎಂದು ಕರೆದಿರುವುದು. 'ಅರ್ಯಮ' ಎಂದರೆ ಸಂಹಾರ ಶಕ್ತಿ ಎಂದರ್ಥ. ಸಂಹಾರಶಕ್ತಿಯಾದ ಭಗವಂತನ ಸಂಕರ್ಷಣ ರೂಪಕ್ಕೂ ಕೂಡಾ 'ಅರ್ಯಮ' ಎನ್ನುತ್ತಾರೆ. ನಾವು ಮಾಡಿದ ಪಾಪ-ಪುಣ್ಯಗಳಿಗೆ ಫಲವನ್ನು ಕೊಡುವ ಯಮನೂ ಅರ್ಯಮ. ಯಾರು ಪಾಪಿಗಳಿಗೆ ದಂಡನೆ ಕೊಡುವ ಯಮನೋ, ಅವನೇ ಮಾಂಡವ್ಯ ಮುನಿಯ ಶಾಪದ ನೆಪದಲ್ಲಿ, ಸ್ವಇಚ್ಛೆಯಿಂದ ಭೂಲೋಕದಲ್ಲಿ ವಿದುರನಾಗಿ, ಶೂದ್ರಯೋನಿಯಲ್ಲಿ ಜನಿಸಿ, ನೂರು ವರ್ಷಗಳ ಕಾಲ ಬದುಕಿದ. ಧರ್ಮರಾಯ ಕೂಡಾ ಯಮನ ಇನ್ನೊಂದು ಅವತಾರ ರೂಪ ಎನ್ನುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು.

ಇಲ್ಲಿ ಇನ್ನೊಂದು ಪ್ರಶ್ನೆ ಏನೆಂದರೆ: ವಿದುರ ಧೃತರಾಷ್ಟ್ರನೊಂದಿಗೆ ಕಾಡಿಗೆ ಹೊರಟಾಗ ಧರ್ಮರಾಯನಿಗೆ ಸುಮಾರು ೮೬ ವರ್ಷ. ಕಾಡಿಗೆ ಹೋದ ಸುಮಾರು ಆರು ತಿಂಗಳಲ್ಲಿ ವಿದುರ ದೇಹತ್ಯಾಗ ಮಾಡುತ್ತಾನೆ. ವಿದುರ ಭೂಮಿಯಲ್ಲಿ ಇದ್ದದ್ದು ಒಂದು ಶತಮಾನ ಕಾಲ ಎನ್ನುತ್ತಾರೆ. ಹಾಗಿದ್ದರೆ ಧರ್ಮರಾಯನ ಚಿಕ್ಕಪ್ಪನಾದ ವಿದುರನಿಗೆ ಧರ್ಮರಾಯ ಹುಟ್ಟುವಾಗ ಕೇವಲ ೧೨ ವರ್ಷ ವಯಸ್ಸಾಗಿತ್ತೇ? ವಿದುರನಿಗಿಂತ ಒಂದು ವರ್ಷ ಹಿರಿಯನಾದ ವಿದುರನ ಅಣ್ಣ,

ಧರ್ಮರಾಯನ ತಂದೆ ಪಾಂಡು ರಾಜನಿಗೆ ಹದಿಮೂರು ವರ್ಷ ವಯಸ್ಸಿನವನಿದ್ದಾಗ ಧರ್ಮರಾಯನ ಜನನವಾಯಿತೇ? ಇತ್ಯಾದಿ ಪ್ರಶ್ನೆ ನಮ್ಮನ್ನು ಕಾಡುತ್ತದೆ. ಇದು ಸರಿಯಾಗಿ ಅರ್ಥವಾಗಬೇಕಾದರೆ ನಾವು ಇಲ್ಲಿ ಹೇಳಿರುವ 'ಶತಮಾನ' ಪದದ ಅರ್ಥ ತಿಳಿಯಬೇಕು. ವೇದದಲ್ಲಿ ಮನುಷ್ಯನ ಬದುಕೆಂದರೆ ಅದು 'ಶತಮಾನಂ ಭವತಿ' ಎನ್ನುತ್ತಾರೆ. ಅದೇ ವೇದದಲ್ಲಿ ಇನ್ನೊಂದು ಕಡೆ ಮನುಷ್ಯನ ಬದುಕಿನಲ್ಲಿ ೨೪ ವರ್ಷ ಪ್ರಾತಃಸವನ, ೪೪ ವರ್ಷ ಮಾಧ್ಯಂದಿನ ಸವನ, ೪೮ ವರ್ಷ ಸಾಯಂಸವನ ಎನ್ನಲಾಗಿದೆ. ಅಂದರೆ ಒಟ್ಟು ೧೧೬ ವರ್ಷಗಳು. ಆದ್ದರಿಂದ ಇಲ್ಲಿ 'ಶತಮಾನಂ' ಎಂದರೆ ಶಾಸ್ತ್ರೀಯ ಪರಿಭಾಷೆಯಲ್ಲಿ ನೂರಕ್ಕಿಂತ ಸ್ವಲ್ಪ ಹೆಚ್ಚು ವರ್ಷಗಳಾಗುತ್ತದೆ. ಗ್ರಹಚಕ್ರದ ಒಂದು ಪರಿಭ್ರಮಣೆಗೆ ೧೨೦ ವರ್ಷಗಳು. ಅದನ್ನೂ ಕೂಡಾ ಒಂದು ಶತಮಾನ ಎಂದು ಕರೆಯಲಾಗುತ್ತದೆ. ಈ ರೀತಿ ಸಮನ್ವಯ ಮಾಡಿಕೊಂಡು ನೋಡಿದಾಗ ಧರ್ಮರಾಯನಿಗೆ ೮೬ ವರ್ಷವಿದ್ದಾಗ ವಿದುರನಿಗೆ ಸುಮಾರು ೧೧೫ವರ್ಷ, ಧೃತರಾಷ್ಟ್ರನಿಗೆ ೧೧೭ ವರ್ಷ ಮತ್ತು ಪರೀಕ್ಷಿತನಿಗೆ ೧೫ ವರ್ಷ.

**ಸ ರಾಜಪುತ್ರೋ ವವೃಧ ಆಶು ಶುಕ್ಲ ಇವೋಡುಪಃ ।**
**ಆಪೂರ್ಯಮಾಣಃ ಪಿತೃಭಿಃ ಕಾಷ್ಠಾಭಿರಿವ ಸೋಽನ್ವಹಮ್** ॥೧೧-೩೧॥

ಹದಿನೈದು ವರ್ಷ ತುಂಬಿ ಹದಿನಾರಕ್ಕೆ ಕಾಲಿಡುತ್ತಿರುವ ಪರೀಕ್ಷಿತ ಹೇಗೆ ಕಾಣುತ್ತಿದ್ದ ಎನ್ನುವುದನ್ನು ಈ ಶ್ಲೋಕದಲ್ಲಿ ಒಂದು ಸುಂದರವಾದ ದೃಷ್ಟಾಂತದೊಂದಿಗೆ ವರ್ಣಿಸಲಾಗಿದೆ. ಇಲ್ಲಿ ಹೇಳುತ್ತಾರೆ:. "ಹೇಗೆ ದಿಗ್ದೇವತೆಗಳಿಂದ ಶುಕ್ಲಪಕ್ಷದ ಚಂದ್ರ ಶಕ್ತಿ ಪಡೆಯುತ್ತಾನೋ ಹಾಗೇ, ಪಂಚಪಾಂಡವರಿಂದ ಶಕ್ತಿ ಪಡೆದು, ಪೂರ್ಣಚಂದ್ರನಂತೆ ಪರೀಕ್ಷಿತ ಬೆಳೆದ" ಎಂದು.

ಇಲ್ಲಿ ಬಳಸಿರುವ 'ಚಂದ್ರನ' ಉಪಮಾನದ ಹಿಂದೆ ಒಂದು ವಿಶಿಷ್ಟ ವಿಚಾರವಿದೆ. ಚಂದ್ರ ವನಸ್ಪತಿಗಳ ದೇವತೆ. ವನಸ್ಪತಿಗಳಿಗೆ ವಿಶೇಷ ಶಕ್ತಿ ಬರುವುದು ಚಂದ್ರನಿಂದ. ಚಂದ್ರನಿಂದ ಬರುವ ಬೆಳಕು ಬರೀ ಬೆಳದಿಂಗಳಲ್ಲ. ಅದು ಧನ್ವಂತರೀ ಶಕ್ತಿ; ಅಮೃತಕಲಶದಿಂದ ಸುರಿಯುವ ಅಮೃತಪಾನವದು. ಚಂದ್ರ ನಮ್ಮ ಮನಸ್ಸಿನ ದೇವತೆ ಕೂಡಾ ಹೌದು. ಅಮಾವಾಸ್ಯೆಯಿಂದ ಹುಣ್ಣಿಮೆ ತನಕ ಚಂದ್ರನಿಂದಾಗುವ ಶಕ್ತಿ ಪಾತದಲ್ಲಿ ಪ್ರತೀದಿನ ವ್ಯತ್ಯಾಸವಾಗುತ್ತದೆ. ಪೂರ್ಣಚಂದ್ರನಿಂದಾಗುವ ಶಕ್ತಿಪಾತ ಅಪಾರ ಮತ್ತು ಅದು ಇತರ ದಿನಗಳಲ್ಲಿರುವುದಿಲ್ಲ. ಈ ಶಕ್ತಿ ಚಂದ್ರನಿಗೆ ದಿಗ್ದೇವತೆಗಳಾದ ಯಮ, ಮಿತ್ರ, ವರುಣ,ಮತ್ತು ಕುಬೇರ-ಇವರಿಂದ ಬರುತ್ತದೆ. ಇದೇ ರೀತಿ ಇಲ್ಲಿ ಹದಿನೈದು ವರ್ಷ ತುಂಬಿ ಹದಿನಾರಕ್ಕೆ ಕಾಲಿಟ್ಟಿರುವ ಪರೀಕ್ಷಿತ, ಪಂಚಪಾಂಡವರಿಂದ ಶಕ್ತಿ ಪಡೆದು, ಪೂರ್ಣಚಂದ್ರನಂತೆ ಕಂಗೊಳಿಸುತ್ತಿದ್ದಾನೆ. "ಅಜ್ಜಂದಿರರಾದ ಪಂಚಪಾಂಡವರು(ಧರ್ಮರಾಯ-ಯಮ, ಭೀಮ-ವಾಯು, ಅರ್ಜುನ-ಇಂದ್ರ, ನಕುಲಸಹದೇವರು-ಆಶ್ವೀದೇವತೆಗಳು) ಆತನನ್ನು ತಂದೆಯಂತೆ ಬೆಳೆಸಿದರು" ಎನ್ನುತ್ತಾರೆ ವ್ಯಾಸರು. ಇಂತಹ ಸಂದರ್ಭದಲ್ಲಿ ವಿದುರ ಹಸ್ತಿನಪುರದಲ್ಲಿದ್ದಾನೆ. ಧೃತರಾಷ್ಟ್ರ ಅರಮನೆಯಲ್ಲಿ ನಿಶ್ಚಿಂತನಾಗಿ ಕಾಲಹರಣ ಮಾಡುತ್ತಿದ್ದಾನೆ!

## ವಿದುರನಿಂದ ಧೃತರಾಷ್ಟ್ರನಿಗೆ ಹಿತನುಡಿ

ಸುಮಾರು ೧೧೭ ವಯಸ್ಸಿನ ವೃದ್ಧ ಧೃತರಾಷ್ಟ್ರ ವಾನಪ್ರಸ್ಥ ಸ್ವೀಕರಿಸಿ ಅಧ್ಯಾತ್ಮ ಚಿಂತನೆಯಲ್ಲಿ ತೊಡಗುವುದನ್ನು ಬಿಟ್ಟು, ಅರಮನೆಯ ಭೋಗದಲ್ಲಿ ಜೀವನ ಸಾಗಿಸುತ್ತಿರುವುದು ಅಂದಿನ ಕಾಲದಲ್ಲಿ ವಿಚಿತ್ರ ಸಂಗತಿ. ಆತನಿಗೆ ಇನ್ನೂ ವೈರಾಗ್ಯ ಬಂದಿಲ್ಲದ್ದನ್ನು ನೋಡಿ, ಒಮ್ಮೆ ಭೀಮ ಆತನಿಗೆ ಕೇಳಿಸುವಂತೆ ಹೇಳುತ್ತಾನೆ: "ಈತನ ಮಕ್ಕಳೆಲ್ಲಾ ಈ ನನ್ನ

ತೋಳಿನ ನಡುವೆ ಸಿಕ್ಕಿಯೇ ಸತ್ತಿರುವುದು" ಎಂದು. ಇಂತಹ ಮಾತನ್ನು ಕೇಳಿಸಿಕೊಂಡೂ ಧೃತರಾಷ್ಟ್ರ ಅರಮನೆಯಲ್ಲಿಯೇ ವಾಸವಿರುತ್ತಾನೆ! ಇನ್ನೊಮ್ಮೆ ಧೃತರಾಷ್ಟ್ರ ದುರ್ಯೋಧನನ ಶ್ರಾದ್ಧ ಮಾಡಿಸಲು ಅಗತ್ಯ ಸಾಮಾನು ಕಳುಹಿಸಬೇಕೆಂದು ಕೇಳಿಕೊಳ್ಳುತ್ತಾನೆ. ಆಗ ರಾಜಕೋಶದ ಜವಾಬ್ದಾರಿ ಹೊತ್ತ ಭೀಮ ಹೇಳುತ್ತಾನೆ: "ಅಯೋಗ್ಯನಾದ ಆ ದುರ್ಯೋಧನನ ಶ್ರಾದ್ಧಕ್ಕಾಗಿ ಸಮಾಜದ ದುಡ್ಡನ್ನೇಕೆ ವ್ಯರ್ಥ ಮಾಡಬೇಕು? ಸಮಾಜದ ಧರ್ಮ ರಕ್ಷಣೆಗಿರುವ ಸಂಪತ್ತನ್ನು ಒಬ್ಬ ನೀಚನ ಶ್ರಾದ್ಧಕ್ಕೋಸ್ಕರ ಬಳಸುವುದು ಸಾಧ್ಯವಿಲ್ಲ. ಒಬ್ಬ ಸಮಾಜಕಂಟಕನಾಗಿ ಬದುಕಿದ ದುರ್ಯೋಧನನ ಶ್ರಾದ್ಧ ಮಾಡಿ ಏನು ಉಪಯೋಗ" ಎಂದು. ಈ ಎಲ್ಲಾ ಘಟನೆಗಳಿಂದ ಧೃತರಾಷ್ಟ್ರನಿಗೆ ಅವಮಾನವಾಗುತ್ತದೆ ಮತ್ತು ಆತ ಈ ವಿಚಾರವನ್ನು ವಿದುರನಲ್ಲಿ ಹೇಳಿಕೊಳ್ಳುತ್ತಾನೆ.

ಧೃತರಾಷ್ಟ್ರನ ಮಾತನ್ನು ಕೇಳಿದ ವಿದುರ ಹೇಳುತ್ತಾನೆ: ಭೀಮಸೇನ ಮಾಡಿರುವುದು ತಪ್ಪಲ್ಲ. ಏಕೆಂದರೆ ಭೀಮಸೇನನ ನ್ಯಾಯ ದಾಕ್ಷಿಣ್ಯದ ನ್ಯಾಯವಲ್ಲ. ಆತ ದಾಕ್ಷಿಣ್ಯಕ್ಕೋಸ್ಕರ ಅನ್ಯಾಯದ ಜೊತೆಗೆ ಎಂದೂ ರಾಜಿ ಮಾಡಿಕೊಂಡವನಲ್ಲ. ಭೀಮ ಎಂತಹ ಸಂದರ್ಭದಲ್ಲೂ ನಿಷ್ಠುರವಾಗಿ ಮಾತನಾಡುವವನಾದ್ದರಿಂದ, ನಿರ್ದಾಕ್ಷಿಣ್ಯವಾಗಿ ಮಾತನಾಡಿದ ಮತ್ತು ಅದೇ ನಿಜವಾದ ಭಾಗವತ ಧರ್ಮ. ಇಷ್ಟು ವಯಸ್ಸಾದರೂ ನಿನಗೆ ವೈರಾಗ್ಯ ಬರುತ್ತಿಲ್ಲ. ಅದಕ್ಕಾಗಿ ಚುಚ್ಚು ಮಾತಿನಿಂದಾಗಿಯಾದರೂ ನೀನು ವೈರಾಗ್ಯ ತಾಳಿ ಉದ್ಧಾರವಾಗಲಿ ಎಂದು ಆತ ಆಡಿದ ಮಾತುಗಳವು. ಆತನ ಮಾತಿನ ಹಿಂದಿರುವುದು ನಿನ್ನ ಒಳಿತಿನ ಒಳ ದೃಷ್ಟಿಯೇ ಹೊರತು, ದ್ವೇಷ-ಅಸೂಯೆ ಅಲ್ಲ. ನಿನಗೆ ಇನ್ನಾದರೂ ವೈರಾಗ್ಯ ಬರಬೇಕು. ಇಷ್ಟೆಲ್ಲಾ ಘಟನೆ ನಡೆದರೂ, ನೀನಿನ್ನೂ ಅರಮನೆಯಲ್ಲಿರಲು ಬಯಸುತ್ತಿದ್ದೀಯಲ್ಲ-ಎಂದು ಕೇಳುತ್ತಾನೆ ವಿದುರ.

ಪ್ರತಿಕ್ರಿಯಾ ನ ಯಸ್ಯೇಹ ಕುತಶ್ಚಿತ್ ಕರ್ಹಿಚಿತ್ ಪ್ರಭೋ ।
ಸ ಏಷ ಭಗವಾನ್ ಕಾಲಃ ಸರ್ವೇಷಾಂ ನಃ ಸಮಾಗತಃ ॥೨೦॥

ಯಾವುದನ್ನು ನಾವು ಮುಂದೂಡಲಾರೆವೋ, ಯಾವುದನ್ನು ತಡೆಹಿಡಿಯುವ ಶಕ್ತಿ ಈ ಪ್ರಪಂಚದಲ್ಲಿ ಯಾವ ಕಾಲದಲ್ಲೂ ಇಲ್ಲವೋ, ಅಂತಹ ಕಾಲಪುರುಷನಾದ ಭಗವಂತ "ನಮ್ಮ ಅವಸಾನಕಾಲ ಸಮೀಪಿಸಿತು" ಎಂದು ಸೂಚಿಸುತ್ತಿದ್ದಾನೆ. ನಾವು ಅದಕ್ಕೆ ಪ್ರತಿಸ್ಪಂದಿಸಬೇಡವೇ? "ನೀನಿನ್ನೂ ಅರಮನೆಯ ಭೋಗದಲ್ಲೇ ಮುಳುಗಿದ್ದೀಯ. ಕೊನೆಗಾಲದಲ್ಲಿ ಭಗವಂತನ ಚಿಂತನೆಯತ್ತ ನಿನ್ನ ಮನಸ್ಸೇಕೆ ಹೊರಳಲಿಲ್ಲ" ಎಂದು ಧೃತರಾಷ್ಟ್ರನನ್ನು ಪ್ರಶ್ನಿಸುತ್ತಾನೆ ವಿದುರ.

ಪಿತೃಭ್ರಾತೃಸುಹೃತ್ಪುತ್ರಾ ಹತಾಸ್ತೇ ವಿಗತಂ ವಯಃ ।
ಆತ್ಮಾ ಚ ಜರಯಾ ಗ್ರಸ್ತಃ ಪರಗೇಹಮುಪಾಸಸೇ ॥೨೨॥

ವಿದುರ ಸದ್ಯದ ಧೃತರಾಷ್ಟ್ರನ ಪರಿಸ್ಥಿತಿ ಏನೆಂಬುದನ್ನು ಅವನಿಗೆ ಮನವರಿಕೆ ಮಾಡಿಸುತ್ತಾನೆ. ತಂದೆ ಸ್ಥಾನದಲ್ಲಿದ್ದ ಭೀಷ್ಮಾದಿಗಳು ಹೊರಟುಹೋದರು; ಪಾಂಡು ಇತ್ಯಾದಿ ಸಹೋದರರೂ ಇಲ್ಲ; ಪ್ರೀತಿಸುವ ಆತ್ಮೀಯರು, ಪುತ್ರರು ಎಲ್ಲರನ್ನೂ ಆತ ಕಳೆದುಕೊಂಡಿದ್ದಾನೆ. "ಆದರೂ ಈ ಸಂಸಾರ ನಶ್ವರ ಎನ್ನುವ ಸತ್ಯ ನಿನಗೆ ಹೊಳೆಯಲಿಲ್ಲವಲ್ಲಾ"

ಎಂದು ಪ್ರಶ್ನಿಸುತ್ತಾನೆ ವಿದುರ. ಎಲ್ಲವನ್ನೂ ಕಳೆದುಕೊಂಡು ಪಾಂಡವರ ಮನೆಯಲ್ಲಿ ವಾಸಿಸುತ್ತಿರುವ ಧೃತರಾಷ್ಟ್ರನಿಗೆ ಎಂದೂ ತಪಸ್ಸನ್ನಾಚರಿಸಬೇಕು ಎಂದು ಹೊಳೆಯಲೇ ಇಲ್ಲವಲ್ಲಾ ಎಂದು ಆಶ್ಚರ್ಯ ವ್ಯಕ್ತಪಡಿಸುತ್ತಾನೆ ಆತ.

**ಅಹೋ ಮಹೀಯಸೀ ಜಂತೋರ್ಜೀವಿತಾಶಾ ಯಯಾ ಭವಾನ್ ।**
**ಭೀಮಾಪವರ್ಜಿತಂ ಪಿಂಡಮಾದತ್ತೇ ಗೃಹಪಾಲವತ್ ॥೨೩॥**

ಆಶ್ಚರ್ಯದ ಉದ್ಗಾರದೊಂದಿಗೆ ವಿದುರ ಹೇಳುತ್ತಾನೆ: ಒಂದು ಪ್ರಾಣಿಗೆ 'ಬದುಕಬೇಕು' ಎನ್ನುವ ಆಸೆ ಅದೆಷ್ಟು ಭಯಾನಕ? ಭೀಮ ಕಳುಹಿಸುವ ಪಿಂಡಕ್ಕಾಗಿ ಕಾದುಕುಳಿತಿರುವ ಮನೆ ನಾಯಿಯಂತೆ ಬದುಕುತ್ತಿದ್ದೀಯಲ್ಲಾ? ಇದಕ್ಕಿಂತ ಹೆಚ್ಚಿನ ನಾಚಿಕೆಗೇಡು ಇನ್ನೇನಿದೆ? ಏಕೆ ಬೇಕು ನಿನಗೆ ಇಂತಹ ಬದುಕು? ಎಂದು ಧೃತರಾಷ್ಟ್ರನತ್ತ ಮಾತಿನ ಚಾಟಿ ಬೀಸುತ್ತಾನೆ ವಿದುರ.

## ಧೃತರಾಷ್ಟ್ರನಿಗೆ ಜ್ಞಾನೋದಯ-ಕಾಡಿಗೆ ಹೋಗುವ ಸಿದ್ಧತೆ

ವಿದುರನ ತೀಕ್ಷ್ಣವಾದ ಮಾತಿನ ಚಾಟಿಯಿಂದ, "ಬಾ, ನಾನೂ ನಿನ್ನೊಂದಿಗೆ ಬರುತ್ತೇನೆ, ಕಾಡಿಗೆ ಹೋಗೋಣ" ಎನ್ನುವ ಹುರಿದುಂಬಿಸುವ ಹಿತನುಡಿಯಿಂದಾಗಿ, ಧೃತರಾಷ್ಟ್ರನಿಗೆ ಜ್ಞಾನೋದಯವಾಗುತ್ತದೆ. "ಹೌದು, ನಾನೆಂದೂ ಈ ಬಗ್ಗೆ ಯೋಚಿಸಿರಲಿಲ್ಲ. ಸಾಯುವ ಕಾಲದಲ್ಲಿ ಭಗವಂತನ ಸ್ಮರಣೆಯಲ್ಲಿ ಕಾಲ ಕಳೆಯಬೇಕು ಎನ್ನುವ ವಿಚಾರವೇ ನನಗೆ ಹೊಳೆಯಲಿಲ್ಲ. ಬಹಳ ಒಳ್ಳೆಯ ಮಾತನ್ನಾಡಿ ನನ್ನ ಕಣ್ಣು ತೆರೆಸಿದೆ ನೀನು" ಎನ್ನುತ್ತಾ ಧೃತರಾಷ್ಟ್ರ "ಖಂಡಿತವಾಗಿ ಕಾಡಿಗೆ ಹೋಗೋಣ" ಎಂದು ಎದ್ದು ನಿಲ್ಲುತ್ತಾನೆ.

ಧೃತರಾಷ್ಟ್ರ ವಿದುರನೊಂದಿಗೆ ಕಾಡಿಗೆ ಹೊರಟು ನಿಂತಾಗ ಅವರ ಜೊತೆಗೆ ಗಾಂಧಾರಿ, ಸಂಜಯ ಮತ್ತು ಕುಂತಿ ತಾವೂ ಬರುತ್ತೇವೆಂದು ಹೊರಟು ನಿಲ್ಲುತ್ತಾರೆ. ಈ ಹಿಂದೆ ಹೇಳಿದಂತೆ-ಕುಂತಿ ಒಬ್ಬ ಮಹಾಮಹಿಳೆ. ಆಕೆ ತನ್ನ ಜೀವಮಾನದುದ್ದಕ್ಕೂ ಕಷ್ಟವನ್ನು ಎದುರಿಸಿದವಳು. ಇದೀಗ ತನ್ನ ಮಗ ರಾಜ್ಯಭಾರ ಮಾಡುತ್ತಿದ್ದರೂ, ಆ ರಾಜಭೋಗದ ಆಸೆ ಅವಳನ್ನು ಕಾಡಲಿಲ್ಲ. "ನನ್ನ ಮಗ ಸಿಂಹಾಸನವೇರಿರುವುದನ್ನು, ಆತ ನಿಜವಾದ ವೀರಪುರುಷ ಎನ್ನುವುದನ್ನು ಕಂಡೆ. ಕ್ಷತ್ರಿಯ ವಂಶದಲ್ಲಿ ಹುಟ್ಟಿದ್ದಕ್ಕೆ ಸಾರ್ಥಕವಾಯಿತು. ಇನ್ನೇನಾಗಬೇಕು ನನಗೆ" ಎಂದು ಕುಂತಿ ಎಲ್ಲರೊಂದಿಗೆ ಕಾಡಿಗೆ ಹೊರಡಲು ಸಿದ್ಧಳಾಗುತ್ತಾಳೆ.

ಎಲ್ಲರೂ ಕಾಡಿಗೆ ಹೊರಡಲು ಸಿದ್ಧರಾಗಿ ಧರ್ಮರಾಯನಲ್ಲಿ ಅನುಮತಿ ಬೇಡುತ್ತಾರೆ. ಆದರೆ ಧರ್ಮರಾಯ ಒಪ್ಪಿಗೆ ಕೊಡುವುದಿಲ್ಲ. "ನೀವೆಲ್ಲರೂ ಹಿರಿಯರು. ನಿಮ್ಮನ್ನು ಕಾಡಿಗೆ ಕಳುಹಿಸಿ ನಾನು ರಾಜ್ಯಭಾರ ಮಾಡಲಾರೆ. ನೀವು ನನ್ನ ಕಣ್ಮುಂದೆ ಇರಬೇಕು, ನಾನು ನಿಮ್ಮ ಶುಶ್ರೂಷೆ ಮಾಡಿಕೊಂಡು ಆಡಳಿತ ಮಾಡಬೇಕು. ಇದನ್ನು ಬಿಟ್ಟು ನಿಮ್ಮನ್ನೆಲ್ಲಾ ಕಾಡಿಗೆ ಕಳುಹಿಸಿ ನಾನು ರಾಜ್ಯಭಾರ ಮಾಡಲಾಗದು. ನಾನೂ ನಿಮ್ಮೊಂದಿಗೆ ಕಾಡಿಗೆ ಬರುತ್ತೇನೆ" ಎಂದು ಹಠತೊಡುತ್ತಾನೆ ಆತ. ಯಾರು ಏನೇ ಹೇಳಿದರೂ ಧರ್ಮರಾಯ ಒಪ್ಪುವುದಿಲ್ಲ. ಆಗ ಧೃತರಾಷ್ಟ್ರ: "ಕಾಡಿಗೆ ಹೋಗಲು ಅನುಮತಿ ಕೊಡದೇ ಇದ್ದರೆ ನಾನು ಊಟ ಮಾಡುವುದಿಲ್ಲ" ಎಂದು ಸತ್ಯಾಗ್ರಹ ಮಾಡುತ್ತಾನೆ. ಇದರಿಂದಾಗಿ ಅನಿವಾರ್ಯವಾಗಿ ಧರ್ಮರಾಯ ಅನುಮತಿ ನೀಡುತ್ತಾನೆ.

**ಅಥೋದೀಚೀಂ ದಿಶಂ ಯಾತು ಸ್ವೈರಜ್ಞಾತಗತಿರ್ಭವಾನ್ ।**
**ಇತೋSರ್ವಾಕ್ ಪ್ರಾಯಶಃ ಕಾಲಃ ಪುಂಸಾಂ ಗುಣವಿಕರ್ಷಣಃ ॥೨೮॥**

ಕಾಡಿನಲ್ಲಿ ಎಲ್ಲಿ ತಪಸ್ಸನ್ನಾಚರಿಸಬಹುದು ಎನ್ನುವುದನ್ನು ವಿವರಿಸುತ್ತಾ ವಿದುರ ಹೇಳುತ್ತಾನೆ: "ಉತ್ತರ ದಿಕ್ಕಿನಲ್ಲಿ ತಪಸ್ಸಿಗೆ ಯೋಗ್ಯವೆಂದು ಕಾಣುವ ಒಂದು ಸ್ಥಳದಲ್ಲಿ ಕುಳಿತು ತಪಸ್ಸು ಮಾಡೋಣ" ಎಂದು. [ಹಸ್ತಿನಪುರದ ಉತ್ತರ ದಿಕ್ಕಿನಲ್ಲಿ ಹಿಮಾಲಯವಿದೆ. ಹಸ್ತಿನಪುರದಿಂದ ಹರಿದ್ವಾರಕ್ಕಿರುವುದು ಸುಮಾರು ೬೦ ಕಿ.ಮೀ ದೂರ ಎನ್ನುವುದನ್ನು ಓದುಗರು ಗಮನಿಸಬೇಕು].

ಈ ಶ್ಲೋಕದಲ್ಲಿ "ಸ್ವೈರಜ್ಞಾತಗತಿ" ಎನ್ನುವ ಪದ ಬಳಕೆಯಾಗಿದೆ. ಇದನ್ನು ಸ್ವೈಃ-ಅಜ್ಞಾತಗತಿಃ ಎಂದು ಪದಚ್ಛೇದ ಮಾಡಿ ಕೆಲವರು ಬಳಸುತ್ತಾರೆ. ಹಾಗೆ ಮಾಡಿದರೆ 'ಕಾಡಿನಲ್ಲಿ ಯಾರಿಗೂ ತಿಳಿಯದ ಅಜ್ಞಾತ ಸ್ಥಳ' ಎಂದಾಗುತ್ತದೆ. ಆದರೆ ಇದು ಮಹಾಭಾರತಕ್ಕೆ ವಿರೋಧ. ನಮಗೆ ತಿಳಿದಂತೆ ಮಹಾಭಾರತದಲ್ಲಿ 'ಪಾಂಡವರು ಧೃತರಾಷ್ಟ್ರ ಮತ್ತು ಇತರರನ್ನು ತಪಸ್ಸು ಮಾಡುವ ಸ್ಥಳಕ್ಕೆ ಬಿಟ್ಟು ಬಂದರು ಮತ್ತು ಧರ್ಮರಾಯ ಆಗಾಗ ಆ ಸ್ಥಳಕ್ಕೆ ಭೇಟಿ ಕೊಡುತ್ತಿದ್ದ' ಎಂದಿದೆ. ಆದ್ದರಿಂದ ಅದು ಯಾರಿಗೂ ತಿಳಿಯದ ಅಜ್ಞಾತ ಸ್ಥಳವಲ್ಲ. ಆಚಾರ್ಯರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಈ ಶಬ್ದದ ಪದಚ್ಛೇದವನ್ನು "ಸ್ವೈರಜ್ಞಾತಗತಿಃ ವಿವಿಕ್ತಗತಿಃ" ಎಂದು ವಿವರಿಸಿದ್ದಾರೆ. ಅಂದರೆ ಸ್ವೈರ--ಜ್ಞಾತಗತಿಃ "ಯಾವ ಸ್ಥಳದಲ್ಲಿ ತಪಸ್ಸುಮಾಡೋಣ ಅನಿಸುತ್ತದೋ ಅಲ್ಲಿ ತಪಸ್ಸು ಮಾಡೋಣ" ಎಂದರ್ಥ.

## ವಿದುರ ನಿರ್ಯಾಣ

ಕಾಡಿಗೆ ಹೋದ ಸುಮಾರು ಆರು ತಿಂಗಳಲ್ಲಿ ವಿದುರ ದೇಹತ್ಯಾಗ ಮಾಡಿ ಧರ್ಮರಾಯನಲ್ಲಿ ಐಕ್ಯನಾಗುತ್ತಾನೆ. ಇತರರು ತಮ್ಮ ತಪಸ್ಸನ್ನು ಮುಂದುವರಿಸುತ್ತಾರೆ. ಹೀಗೆ ಸುಮಾರು ಮೂರು ವರ್ಷ ಕಳೆಯುತ್ತದೆ. ಧೃತರಾಷ್ಟ್ರನಿಗೆ ಸುಮಾರು ೧೨೦ವರ್ಷ, ಧರ್ಮರಾಯನಿಗೆ ಸುಮಾರು ೯೦ ಮತ್ತು ಪರೀಕ್ಷಿತನಿಗೆ ಸುಮಾರು ಹದಿನೆಂಟರ ಪ್ರಾಯ. ಈ ಸಂದರ್ಭದಲ್ಲಿ ಒಂದು ಘಟನೆ ಘಟಿಸುತ್ತದೆ.

## ಧೃತರಾಷ್ಟ್ರ-ಗಾಂಧಾರಿ ಮತ್ತು ಕುಂತಿ ದೇಹತ್ಯಾಗ

**ಅಜಾತಶತ್ರುಃ ಕೃತಮೈತ್ರೋ ಹುತಾಗ್ನಿರ್ವಿಪ್ರಾನ್ ನತ್ವಾ ತಿಲಗೋವಸ್ತ್ರರುಗ್ಮೈಃ ।**
**ಗೃಹಾನ್ ಪ್ರವಿಷ್ಟೋ ಗುರುವಂದನಾಯ ನ ಚಾಪಶ್ಯತ್ ಪಿತರೌ ಸೌಬಲೀಂ ಚ ॥೩೧॥**

ಎಂದೂ ಯಾರನ್ನೂ ಹಗೆಯೆಂದು ಕಾಣದ ಅಜಾತಶತ್ರು ಧರ್ಮರಾಯ ಒಂದು ದಿನ ಎಂದಿನಂತೆ ಸೂರ್ಯನಲ್ಲಿರುವ ಸೂರ್ಯನಾರಾಯಣನನ್ನು ಗಾಯತ್ರಿ ಮಂತ್ರದಿಂದ ಉಪಾಸನೆ ಮಾಡಿ, ಅಗ್ನಿಮುಖೇನ ಭಗವಂತನನ್ನು ಆರಾಧಿಸಿ, ವಿಪ್ರರಿಗೆ(ವಿಷ್ಣುವಿನ ಪರಮಪದವನ್ನು ತಿಳಿದವರು) ನಮಸ್ಕರಿಸಿ, ಅಲ್ಲಿ ಸೇರಿದ್ದ ವಿದ್ವಾಂಸರಿಗೆ ತಿಲ/ವಸು(ಸಂಪತ್ತು), ಗೋವು, ಭೂಮಿ/ವಸ್ತ್ರ, ರುಗ್ಮ(ಚಿನ್ನ) ದಾನ ಮಾಡಿ, ತನ್ನ ಹಿರಿಯರನ್ನು ಅವರ ಆಸನ ಪ್ರತೀಕದಲ್ಲಿ ನಮಸ್ಕರಿಸಲು ಧೃತರಾಷ್ಟ್ರನಿದ್ದ ಕೋಣೆಗೆ ಹೋಗುತ್ತಾನೆ. ಆಗ ಎಂದಿನಂತೆ ಆತನ ಅಂತರಂಗಕ್ಕೆ ಕುಂತಿ-ಧೃತರಾಷ್ಟ್ರ(ಪಿತರೌ)

ಮತ್ತು ಗಾಂಧಾರಿಯ ದರ್ಶನವಾಗುವುದಿಲ್ಲ. ಇದರಿಂದಾಗಿ ಆತ ಗಾಭರಿಗೊಂಡು ಹೊರಬರುತ್ತಾನೆ. ಹೊರಬಂದು ನೋಡಿದರೆ ಅಲ್ಲಿ ಕುರುಡ ಧೃತರಾಷ್ಟ್ರನಿಗೆ ಕಾಡಿನಲ್ಲಿ ಸೇವಕನಾಗಿ ಕಾರ್ಯನಿರ್ವಹಿಸುತ್ತಿದ್ದ ಗಾವದ್ಗಣನ ಪುತ್ರ ಸಂಜಯ ಕಾಣಿಸುತ್ತಾನೆ!

ತತ್ರ ಸಂಜಯಮಾಸೀನಂ ಪಪ್ರಚ್ಛೋದ್ವಿಗ್ನಮಾನಸಃ ।
ಗಾವದ್ಗಣೇ ಕ್ವ ನಸ್ತಾತೋ ವೃದ್ಧೋ ಹೀನಶ್ಚ ನೇತ್ರಯೋಃ ।
ಅಂಬಾ ವಾ ಹತಪುತ್ರಾರ್ತಾ ಪಿತೃವ್ಯಃ ಕ್ವ ಗತಃ ಸುಹೃತ್ ॥೩೨॥

ಯಾವುದೋ ಕೆಟ್ಟ ವಿಷಯದ ಮುನ್ಸೂಚನೆಯಿಂದ ಹೊರಬಂದ ಧರ್ಮರಾಯನಿಗೆ ಸಂಜಯನನ್ನು ನೋಡಿ ಮತ್ತಷ್ಟು ಗಾಭರಿಯಾಗುತ್ತದೆ. ಆತ ಉದ್ವಿಗ್ನತೆಯಿಂದ ಕೇಳುತ್ತಾನೆ: ಎಲ್ಲಿ ನಮ್ಮ ಅಪ್ಪ? ನೀನು ಅಪ್ಪನ ಜೊತೆಗಿದ್ದವನು ಒಬ್ಬನೇ ಏಕೆ ಬಂದೆ? ಕಣ್ಣಿಲ್ಲದ ನಮ್ಮ ಅಪ್ಪ; ಮಕ್ಕಳನ್ನು ಕಳೆದುಕೊಂಡ ದುರ್ದೈವಿ ದೊಡ್ಡಮ್ಮ ಎಲ್ಲಿ? ಸಾಮ್ರಾಜ್ಯಕಟ್ಟಿಯೂ ತಾಯಿಯನ್ನು ಸುಖವಾಗಿಡದ ನಮ್ಮಂತಹ ದುರ್ದೈವಿ ಮಕ್ಕಳನ್ನು ಪಡೆದ ನಮ್ಮ ತಾಯಿ ಕುಂತಿ ಎಲ್ಲಿ?" ಎಂದು. [ಪಿತೃವ್ಯಃ ಎಂದರೆ ಗಾಂಧಾರಿ ಮತ್ತು ಧೃತರಾಷ್ಟ್ರ. ಇಲ್ಲಿ ಧರ್ಮರಾಯ ದೊಡ್ಡಪ್ಪನನ್ನು 'ಅಪ್ಪ' ಎಂದು ಅತ್ಯಂತ ಗೌರವಪೂರ್ವಕವಾಗಿ ಸಂಬೋಧಿಸಿರುವುದನ್ನು ಓದುಗರು ಗಮನಿಸಬೇಕು.]

ಪಿತರ್ಯುಪರತೇ ಪಾಂಡೌ ಸರ್ವಾನ್ ನಃ ಸುಹೃದಃ ಶಿಶೂನ್ ।
ಅರಕ್ಷತಾಂ ವ್ಯಸನತಃ ಪಿತೃವ್ಯೌ ಕ್ವ ಗತಾವಿತಃ ॥೩೪॥

ನಮ್ಮನ್ನು ತಂದೆ-ತಾಯಿರಂತೆ ಸಾಕಿ, ಕಷ್ಟ ಕಾಲದಲ್ಲಿ ನಮ್ಮ ರಕ್ಷಣೆಗೆ ನಿಂತ ಹಿರಿಯರಾದ ನಮ್ಮ ದೊಡ್ಡಪ್ಪ ದೊಡ್ಡಮ್ಮ ಎಲ್ಲಿದ್ದಾರೆ, ಹೇಗಿದ್ದಾರೆ-ಹೇಳು ಎಂದು ಧರ್ಮರಾಯ ಉದ್ವಿಗ್ನತೆಯಿಂದ ಸಂಜಯನನ್ನು ಕೇಳುತ್ತಾನೆ.

ಸಂಜಯ ಉವಾಚ--

ಅಹಂ ಚ ವ್ಯಂಸಿತೋ ರಾಜನ್ ಪಿತ್ರೋರ್ವಃ ಕುಲನಂದನ ।
ನ ವೇದ ಸಾಧ್ವಾ ಗಾಂಧಾರ್ಯಾ ಮುಷಿತೋSಸ್ಮಿ ಮಹಾತ್ಮಭಿಃ ॥೩೭॥

ಈ ಶ್ಲೋಕವನ್ನು ಮೇಲ್ನೋಟದಲ್ಲಿ ನೋಡಿದರೆ: "ಅವರು ಎಲ್ಲಿಗೆ ಹೋದರು ಎನ್ನುವುದು ನನಗೂ ತಿಳಿದಿಲ್ಲ" ಎಂದು ಸಂಜಯ ಉತ್ತರಿಸಿದಂತೆ ಕಾಣುತ್ತದೆ. ಆದರೆ ಮಹಾಭಾರತದಲ್ಲಿ ಹೇಳುವಂತೆ: ಧೃತರಾಷ್ಟ್ರಾದಿಗಳು ಗಾಳ್ಗಿಚ್ಚಿನಲ್ಲಿ ದೇಹತ್ಯಾಗ ಮಾಡಿರುತ್ತಾರೆ ಮತ್ತು ಆ ವಿಷಯ ಸಂಜಯನಿಗೆ ತಿಳಿದಿರುತ್ತದೆ. ಆದ್ದರಿಂದ ಆತ ಇಲ್ಲಿ ಹೇಳುತ್ತಿರುವುದು: ಸತ್ತ ನಂತರ ಅವರು ಯಾವ ಗತಿಯನ್ನು ಪಡೆದರು ಎನ್ನುವುದು ನನಗೆ ತಿಳಿದಿಲ್ಲ ಎಂದೇ ಹೊರತು, ಅವರು ಎಲ್ಲಿದ್ದಾರೆಂದು ನನಗೆ ಗೊತ್ತಿಲ್ಲ ಎಂದಲ್ಲ. ಆತ ಹೇಳುತ್ತಾನೆ: " ಕುಂತಿ-ಧೃತರಾಷ್ಟ್ರ ಮತ್ತು ಗಾಂಧಾರಿಯನ್ನು ಕಳೆದುಕೊಂಡು ನಾನು ಒಂದು ಕೈ ಮುರಿದವನಂತಾಗಿದ್ದೇನೆ. ಅವರು ನನ್ನನ್ನು ಬಿಟ್ಟು ಹೊರಟು ಹೋದರು" ಎಂದು.

## ಹಸ್ತಿನಪುರಕ್ಕೆ ನಾರದರ ಆಗಮನ

ಸೂತ ಉವಾಚ–

ಏತಸ್ಮಿನ್ನಂತರೇ ವಿಪ್ರಾ ನಾರದಃ ಪ್ರತ್ಯದೃಶ್ಯತ ।
ವೀಣಾಂ ತ್ರಿತಂತ್ರೀಂ ಧನ್ವಯನ್ ಭಗವಾನ್ ಸಹತುಂಬುರುಃ ॥೩೮॥

ಈ ರೀತಿ ಸಂಜಯ ಮತ್ತು ಧರ್ಮರಾಯ ಮಾತನಾಡುತ್ತಿರುವಾಗ ಅಲ್ಲಿಗೆ ತುಂಬುರನೊಂದಿಗೆ, ತನ್ನ ವೀಣೆಯಲ್ಲಿ ವೇದಮಂತ್ರಗಳನ್ನು ಮೂರು ಸ್ವರದಲ್ಲಿ ನುಡಿಸುತ್ತಾ, ನಾರದರು ಆಗಮಿಸುತ್ತಾರೆ. [ಇಲ್ಲಿ ಓದುಗರು ಒಂದು ವಿಷಯವನ್ನು ಗಮನಿಸಬೇಕು. ನಾರದರ ವೀಣೆ ಏಳು ತಂತಿಯ ವೀಣೆ. ಅದನ್ನು 'ವಿಪಂಚಿ' ಎಂದು ಕರೆಯುತ್ತಾರೆ. ಆದರೆ ಇಲ್ಲಿ 'ತ್ರಿತಂತಿ' ಎನ್ನುವ ಶಬ್ದ ಬಳಸಲಾಗಿದೆ. ನಾರದರು ಮೂರು ಸ್ವರಗಳಲ್ಲಿ ವೇದ ಮಂತ್ರಗಳನ್ನು ಗಾನ ಮಾಡುತ್ತಾ ಬಂದರು ಎನ್ನುವುದು 'ತ್ರಿತಂತಿ' ಎನ್ನುವ ಶಬ್ದದ ಹಿಂದಿರುವ ಒಂದು ಅರ್ಥ. ಇದಕ್ಕೆ ಇನ್ನೂ ಅನೇಕ ಒಳಾರ್ಥಗಳಿರಬಹುದು. ಇನ್ನು ಇಲ್ಲಿ ನಾರದರನ್ನು ಭಗವಾನ್ ಎನ್ನುವ ವಿಶೇಷಣದಿಂದ ಸಂಬೋಧಿಸಲಾಗಿದೆ. ಇದರ ಅರ್ಥ ಭಗವಂತನನ್ನು ತಿಳಿದವರು, ಸದಾ ಭಗವಂತನ ಭಜನೆ ಮಾಡುವವರು, ಇತ್ಯಾದಿ]

ಯುಧಿಷ್ಠಿರ ಉವಾಚ--

ನಾಹಂ ವೇದ ಗತಿಂ ಪಿತ್ರೋರ್ಭಗವನ್ ಕ್ವ ಗತಾವಿತಃ ।
ಕರ್ಣಧಾರ ಇವಾಪಾರೇ ಸೀದತಾಂಪಾರದರ್ಶನಃ ॥೪೦॥

ನಾರದರು ಆಗಮಿಸಿದ ತಕ್ಷಣ ಧರ್ಮರಾಯ ನಾರದರಲ್ಲಿ ಕೇಳುತ್ತಾನೆ: "ನಮ್ಮ ತಂದೆ-ತಾಯಿಯರ ಗತಿ ಏನಾಯ್ತು? ಅವರಿಗೆ ಸದ್ಗತಿ ದೊರೆಯಿತೇ? ದಿಕ್ಕೆಟ್ಟು ನಿಂತ ನಮ್ಮಲ್ಲಿಗೆ ದಡಹಾಯಿಸುವ ಅಂಬಿಗನಂತೆ ನೀವು ಬಂದಿದ್ದೀರಿ. ನೀವೇ ನಮಗೆ ದಾರಿ ತೋರಿಸಬೇಕು" ಎಂದು.

## ಧರ್ಮರಾಯನಿಗೆ ನಾರದರ ಉಪದೇಶ

ನಾರದ ಉವಾಚ--

ಮಾ ಕಂಚನ ಶುಚೋ ರಾಜನ್ ಯುದೀಶ್ವರವಶಂ ಜಗತ್ ।
ಸ ಸಂಯುನಕ್ತಿ ಭೂತಾನಿ ಸ ಏವ ವಿಯುನಕ್ತಿ ಚ ॥೪೧॥

"ಯಾರ ಬಗ್ಗೆಯೂ ದುಃಖಪಟ್ಟು ಉಪಯೋಗವಿಲ್ಲ. ದುಃಖಿಸುವುದರಿಂದ ಅವರು ಮರಳಿ ಬರುವುದಿಲ್ಲ. ಯಾವ ಜೀವಗಳನ್ನು ಭಗವಂತ ಎಂದು ಒಂದುಗೂಡಿಸುತ್ತಾನೆ, ಎಂದು ಬೇರ್ಪಡಿಸುತ್ತಾನೆ ಎನ್ನುವುದು ನಮಗೆ ತಿಳಿದಿಲ್ಲ" ಎಂದು ಧರ್ಮರಾಯನನ್ನು ಸಂತೈಸುತ್ತಾರೆ ನಾರದರು.

ಹುಟ್ಟು-ಸಾವು ನಮ್ಮ ವಶದಲ್ಲಿಲ್ಲ. ಎಂತಹ ಪುಣ್ಯಾತ್ಮರಾದರೂ ಕೂಡಾ ಅವರಿಗೆ ಸಾವು ತಪ್ಪಿದ್ದಲ್ಲ. ದುರಂತದ ಸಾವು ಕೇವಲ ಪಾಪಾತ್ಮರ ಲಕ್ಷಣವೇನೂ ಅಲ್ಲ. ಪುಣ್ಯಾತ್ಮರೂ ಕೂಡಾ ದುರಂತದಲ್ಲಿ ಸಾಯಬಹುದು. ಅದು ಅವರ ಪ್ರಾರಬ್ಧ

ಕರ್ಮಕ್ಕನುಗುಣವಾಗಿ ನಡೆಯುತ್ತದೆ ಅಷ್ಟೇ. ಸಾವು ಸಹಜ ಕ್ರಿಯೆ ಹಾಗೂ ಎಂದು ಏನು ಆಗಬೇಕೋ ಅದು ಆಗಿಯೇ ತೀರುತ್ತದೆ. ಹಾಗಾಗಿ ಯಾರ ಸಾವೇ ಇರಲೀ, ಎಂತಹ ಸಾವೇ ಇರಲೀ, ಅದಕ್ಕಾಗಿ ದುಃಖಿಸಿ ಫಲವಿಲ್ಲ.

**ಯನ್ಮನ್ಯಸೇ ಧ್ರುವಂ ಲೋಕಮಧ್ರುವಂ ವಾಽಥವೋಭಯಮ್ ।**
**ಸರ್ವಥಾ ಹಿ ನ ಶೋಚ್ಯಾಸ್ತೇ ಸ್ನೇಹಾದನ್ಯತ್ರ ಮೋಹಜಾತ್ ॥೪೪॥**

"ಯಾವ ಕಾರಣಕ್ಕಾಗಿ ದುಃಖ? ನಾಶವಿಲ್ಲದ ಜೀವ ದೇಹಬಿಟ್ಟು ಹೊರಟು ಹೋಯಿತೆಂದೋ? ಅಥವಾ ಶರೀರ ನಾಶವಾಯಿತೆಂದೋ? ಅಥವಾ ಈ ಶರೀರದಲ್ಲಿ ಆ ಜೀವ ಇಲ್ಲಾ ಎಂತಲೋ? ಯಾವುದಕ್ಕೂ ನೀನು ಶೋಕಿಸುವ ಅಗತ್ಯವಿಲ್ಲ" ಎನ್ನುತ್ತಾರೆ ನಾರದರು.

ಆಚಾರ್ಯರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಹೇಳುವಂತೆ: **ಅಪರಿಹಾರ್ಯತ್ವಾದಶೋಚ್ಯಾಃ** । ಈ ಪ್ರಪಂಚದಲ್ಲಿ ಯಾವುದು ಅನಿವಾರ್ಯವೋ ಅದಕ್ಕೆ ನಾವು ಹೊಂದಿಕೊಂಡು ಬದುಕಬೇಕೇ ಹೊರತು, ಅದಕ್ಕಾಗಿ ಅಳುತ್ತಾ ಕೂರುವುದರಲ್ಲಿ ಅರ್ಥವಿಲ್ಲ. "ದುಃಖಕ್ಕೆ ಮೂಲ ಕಾರಣ ಮೋಹ ಮತ್ತು ಮೋಹದಿಂದ ಬೆಳೆದ ಸ್ನೇಹ". ನಾವು ಈ ಮೋಹಪಾಶನ್ನು ಗೆಲ್ಲಬೇಕು.

**ಸೋಽಯಮದ್ಯ ಮಹಾರಾಜ ಭಗವಾನ್ ಭೂತಭಾವನಃ ।**
**ಕಾಲರೂಪೋಽವತೀರ್ಣೋಽಸ್ಯಾಮಭಾವಾಯ ಸುರದ್ವಿಷಾಮ್ ॥೪೯॥**

"ಶ್ರೀಕೃಷ್ಣ ಕಾಲ ರೂಪನಾಗಿ, ದೇವತೆಗಳಿಗೆ ದ್ರೋಹಬಗೆದ ಅಸುರಶಕ್ತಿಗಳ ಸಂಹಾರಕನಾಗಿ ನಮ್ಮ ಕಣ್ಮುಂದೆ ಅವತರಿಸಿ ನಿಂತಿದ್ದಾನೆ. ಇಲ್ಲಿ ಎಲ್ಲವೂ ಅವನ ಸಂಕಲ್ಪದಂತೆ ನಡೆಯುತ್ತದೆಯೇ ಹೊರತು, ನಮ್ಮ ಸಂಕಲ್ಪದಂತಲ್ಲ" ಎನ್ನುತ್ತಾರೆ ನಾರದರು.

ಇಲ್ಲಿ ಭಗವಂತನನ್ನು 'ಭೂತಭಾವನಃ' ಎಂದು ಸಂಬೋಧಿಸಿದ್ದಾರೆ. ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳಿಗೆ ಕಾರಣನಾದವ, ಜೀವಿಗಳಿಗೆ ಅವರ ಕರ್ಮಕ್ಕನುಗುಣವಾಗಿ ಸುಖ-ದುಃಖ ಕೊಡುವ ಭಗವಂತ- ಭೂತಭಾವನಃ. ಇಂತಹ ಭಗವಂತ ಇಲ್ಲಿ ಸಂಹಾರರೂಪಿಯಾಗಿ ನಿಂತಿದ್ದಾನೆ. " ಭಗವಂತನ ಕಾರ್ಯದಲ್ಲಿ ಅಂಗಭೂತರಾಗಿ ಬಂದ ನೀನೂ ಕೂಡಾ ಒಂದು ದಿನ ಹೊರಡಬೇಕು. ದುಃಖಿಸುವುದನ್ನು ಬಿಟ್ಟು ಅದಕ್ಕೆ ಸಿದ್ಧನಾಗು" ಎನ್ನುವ ಧ್ವನಿ ನಾರದರ ಈ ಮಾತಿನಲ್ಲಡಗಿದೆ.

**ನಿಷ್ಪಾದಿತಂ ದೇವಕಾರ್ಯಮವಶೇಷಂ ಪ್ರತೀಕ್ಷತೇ ।**
**ತಾವದ್ ಯೂಯಮವೇಕ್ಷಧ್ವಂ ಭವೇದ್ ಯಾವದಿಹೇಶ್ವರಃ ॥೫೦॥**

"ಕೃಷ್ಣಾವತಾರಕ್ಕೆ ಕಾರಣವಾದ 'ದೇವಕಾರ್ಯ' ಮುಗಿಯುತ್ತಿದೆ. ಕೃಷ್ಣ ಅವತಾರ ಸಮಾಪ್ತಿ ಮಾಡುವ ತನಕ ನೀನು ಇಲ್ಲಿರುತ್ತೀಯ. ಆನಂತರ ನೀನೂ ಹೊರಡಬೇಕು. ಹಾಗಾಗಿ ಹೊರಟು ಹೋದವರ ಬಗ್ಗೆ ದುಃಖಿಸದೇ ನಿನ್ನ ಪಯಣದ ಸಿದ್ಧತೆ ನೀನು ಮಾಡು" ಎನ್ನುತ್ತಾರೆ ನಾರದರು.

ಇಷ್ಟು ಹೇಳಿದ ನಾರದರು ಮುಂದೆ ಧೃತರಾಷ್ಟ್ರ ತನ್ನ ಕೊನೆಯ ದಿನಗಳನ್ನು ಹೇಗೆ ಕಳೆದ ಎನ್ನುವುದನ್ನು ಧರ್ಮರಾಯನಿಗೆ ವಿವರಿಸುತ್ತಾರೆ.

## ನಾರದರು ವಿವರಿಸಿದ ಧೃತರಾಷ್ಟ್ರನ ಕೊನೆಗಾಲದ ಅದ್ಭುತ ಸಾಧನೆಯ ವಿವರ

**ಧೃತರಾಷ್ಟ್ರಃ ಸಹ ಭ್ರಾತ್ರಾ ಗಾಂಧಾರ್ಯಾ ಚ ಸ್ವಭಾರ್ಯಯಾ ।**
**ದಕ್ಷಿಣೇನ ಹಿಮವತ ಋಷೀಣಾಮಾಶ್ರಮಂ ಗತಃ ॥೫೧॥**

ತನ್ನ ತಮ್ಮ ಹಾಗೂ ಪತ್ನಿಯೊಂದಿಗೆ ಕಾಡಿಗೆ ಹೋದ ಧೃತರಾಷ್ಟ್ರ, ಹಸ್ತಿನಪುರದಿಂದ ಉತ್ತರ ಹಾಗೂ ಹಿಮಾಲಯ ಪರ್ವತದ ದಕ್ಷಿಣದಲ್ಲಿರುವ ತಪ್ಪಲುಪ್ರದೇಶದಲ್ಲಿನ ಋಷಿಗಳ ಆಶ್ರಮದಲ್ಲಿ ನೆಲೆಸಿ ತನ್ನ ಸಾಧನೆ ಆರಂಭಿಸಿದ.

**ಸ್ನಾತ್ವಾತ್ರಿಷವಣಂ ತಸ್ಮಿನ್ ಹುತ್ವಾ ಚಾಗ್ನೀನ್ ಯಥಾವಿಧಿ ।**
**ಅಬ್ಭಕ್ಷ ಉಪಶಾಂತಾತ್ಮಾ ಸ ಆಸ್ತೇs ವಿಗತೇಕ್ಷಣಃ ॥೫೩॥**

ಧೃತರಾಷ್ಟ್ರ ಕಾಡಿನಲ್ಲಿ ಮೂರು ಹೊತ್ತು ಸ್ನಾನ ಮಾಡಿ, ಶಾಸ್ತ್ರಬದ್ಧವಾಗಿ ಅಗ್ನಿಹೋತ್ರ ಮಾಡುತ್ತಿದ್ದ. ಏಳು ಕವಲಾಗಿ ಗಂಗೆ ಹರಿದ ಜಾಗದಲ್ಲಿ ಆತ ತಪಸ್ಸನ್ನಾಚರಿಸಿದ. ಕೊನೆ-ಕೊನೆಗೆ ಆತ ಆಹಾರ ಸೇವನೆಯನ್ನೂ ತ್ಯಜಿಸಿ, ಕೇವಲ ನೀರನ್ನು ಸೇವಿಸುತ್ತಾ, ಉನ್ನತವಾದ ಸ್ಥಿತಿಯಲ್ಲಿ, ಮನಸ್ಸನ್ನು ಭಗವಂತನಲ್ಲಿ ನೆಲೆಸಿ, ಅಖಂಡ ಸಾಧನೆ ಮಾಡಿದ. ಕಣ್ಣಿಲ್ಲದ ಕುರುಡನಾದರೂ ಸಹ, ತನ್ನ ಅಂತರಂಗದ ಕಣ್ಣಿನಿಂದ ನಿರಂತರ ಭಗವಂತನನ್ನು ಕಾಣುತ್ತಾ, ಸಾಧನೆಯ ಉತ್ತುಂಗವನ್ನು ತಲುಪಿದ(ವಿಗತೇಕ್ಷಣಃ ಎನ್ನುವ ಪಾಠದಂತೆ). ಮಕ್ಕಳಮೋಹ, ಹಣದಮೋಹ ಮತ್ತು ಲೋಕದ ಮೋಹವನ್ನು ತೊರೆದು, ಭಗವಂತನನ್ನು ಸದಾ ಹೃದಯದಲ್ಲಿ ತುಂಬಿಕೊಂಡು ಸಾಧನೆ ಮಾಡಿದ ಧೃತರಾಷ್ಟ್ರ(ವಿಗತೇಶಣಃ ಎನ್ನುವ ಪಾಠದಂತೆ).

ಇಲ್ಲಿ 'ಆಸ್ತೇ' ಎನ್ನುವ ಪದ ವರ್ತಮಾನ ಕಾಲದಲ್ಲಿದೆ. ಇದರಿಂದ 'ಧೃತರಾಷ್ಟ್ರ ಈಗಲೂ ತಪಸ್ಸು ಮಾಡುತ್ತಿದ್ದಾನೆ' ಎಂದು ಹೇಳಿದಂತಾಗುತ್ತದೆ. ಆದರೆ ನಮಗೆ ತಿಳಿದಂತೆ ಧೃತರಾಷ್ಟ್ರ ಈಗಾಗಲೇ ದೇಹತ್ಯಾಗ ಮಾಡಿದ್ದಾನೆ. ಈ ರೀತಿ ಕಾಲವನ್ನು ವ್ಯತ್ಯಾಸಮಾಡಿ ಹೇಳುವುದು ಪುರಾಣದ, ಪ್ರಾಚೀನ ಸಂಸ್ಕೃತದ ಒಂದು ವಿಶಿಷ್ಠ ವೈಖರಿ. ಇಂತಹ ಅನೇಕ ಉದಾಹರಣೆಗಳನ್ನು ಪುರಾಣಗಳಲ್ಲಿ ಕಾಣಬಹುದು. ಏಕೆ ಹೀಗೆ ಕಾಲವನ್ನು ಬದಲಿಸಿ ಹೇಳುತ್ತಾರೆ ಎಂದರೆ: ತ್ರಿಕಾಲದರ್ಶಿಗಳಿಗೆ ಎಲ್ಲವೂ ವರ್ತಮಾನವೇ. ಅಷ್ಟೇ ಅಲ್ಲ ಇದು ಗುಹ್ಯ ಭಾಷೆಯ ನಿರೂಪಣಾ ವೈಖರಿ.

**ಜಿತಾಸನೋ ಜಿತಶ್ವಾಸಃ ಪ್ರತ್ಯಾಹೃತಷಡಿಂದ್ರಿಯಃ ।**
**ಹರಿಭಾವನಯಾ ಧ್ವಸ್ತರಜಃಸತ್ತ್ವತಮೋಮಲಃ ॥೫೪॥**

ಸಾಧನೆ ಮಾಡುತ್ತಾ- ಆಸನ, ಶ್ವಾಸ ಮತ್ತು ಇಂದ್ರಿಯಗಳನ್ನು ಗೆಲ್ಲುತ್ತಾನೆ ಧೃತರಾಷ್ಟ್ರ. [ಇಲ್ಲಿ ಜಿತಾಸನ ಎಂದರೆ: ಒಂದು ಆಸನದಲ್ಲಿ ಕದಲದೇ ಕುಳಿತುಕೊಳ್ಳುವ ಸಾಧನೆ]. ಪ್ರಾಣಾಯಾಮದ ಮೂಲಕ ಶ್ವಾಸವನ್ನು ನಿಯಂತ್ರಿಸಿ,

ಬಾಹ್ಯೇಂದ್ರಿಯನಿಗ್ರಹ ಮಾಡಿ, ತನ್ನೊಳಗೆ ಕೇವಲ ಹರಿ ಭಾವನೆ ತುಂಬಿಕೊಂಡು, ತ್ರೈಗುಣ್ಯದ ಪ್ರಭಾವದಿಂದ ಸಂಪೂರ್ಣ ಆಚೆ ಬಂದು, ಸ್ವರೂಪದಲ್ಲಿ ಭಗವಂತನನ್ನು ಕಾಣುತ್ತಾನೆ ಆತ.

ಇಲ್ಲಿ "ಭಗವಂತನ ಪ್ರಜ್ಞೆಯನ್ನು ಮನಸ್ಸಿನಲ್ಲಿ ತುಂಬಿಸಿಕೊಂಡ ಧೃತರಾಷ್ಟ್ರ, ಸತ್ತ್ವ-ರಜಸ್ಸು-ತಮಸ್ಸು ಎನ್ನುವ ಕೊಳೆಯನ್ನು ತೊಳೆದುಕೊಂಡ" ಎಂದಿದ್ದಾರೆ. ಇದರಿಂದಾಗಿ ನಮಗೊಂದು ಪ್ರಶ್ನೆ ಬರುತ್ತದೆ. **"ಸತ್ತ್ವಾತ್ ಸಂಜಾಯತೇ ಜ್ಞಾನಮ್"** ಎಂದು ಶ್ರೀಕೃಷ್ಣ ಗೀತೆಯಲ್ಲೇ ಹೇಳಿದ್ದಾನೆ. ಹಾಗಿರುವಾಗ ಇಲ್ಲಿ -ಸತ್ತ್ವವನ್ನು ಕೊಳೆ ಎಂದು ಏಕೆ ಹೇಳಿದ್ದಾರೆ ಎಂದು. ಇದಕ್ಕೆ ಕಾರಣವೆಂದರೆ: ಎಂದೂ ನಮಗೆ ಶುದ್ಧ ಸತ್ತ್ವ ಸಿಗುವುದಿಲ್ಲ. ಹೇಗೆ ಕಟ್ಟಿಗೆ(ತಮಸ್ಸು) ಮತ್ತು ಹೊಗೆ(ರಜಸ್ಸು) ಜೊತೆಗೆ ಬೆಂಕಿ(ಸತ್ತ್ವ) ಇರುತ್ತದೋ ಹಾಗೇ, ಸತ್ತ್ವಗುಣ ರಜಸ್ಸು ತಮಸ್ಸಿನೊಂದಿಗಿರುತ್ತದೆ. ಇದಲ್ಲದೆ ಸತ್ತ್ವಮಯವಾದ ಕರ್ಮ ಮಾಡುವುದರಿಂದ ಸ್ವರ್ಗಪ್ರಾಪ್ತಿಯಾಗುತ್ತದೆ ಎನ್ನುತ್ತಾರೆ. ಆದರೆ ನಿಜವಾದ ಸಾಧಕನಿಗೆ ಬೇಕಾಗಿರುವುದು ಸ್ವರ್ಗವಲ್ಲ, ಮೋಕ್ಷ. ಅದಕ್ಕಾಗಿ ಸಾಧನೆಯಲ್ಲಿ ನಾವು ತ್ರಿಗುಣವನ್ನು ಮೀರಿ ನಿಂತು ಸಾಧನೆ ಮಾಡಬೇಕಾಗುತ್ತದೆ. **"ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ"** ಎಂದು ಕೃಷ್ಣ ಗೀತೆಯಲ್ಲಿ ಹೇಳಿದ್ದಾನೆ. ಹೀಗೆ ತ್ರಿಗುಣಾತೀತ ಭಗವಂತನನ್ನು ಹೃದಯದಲ್ಲಿ ತುಂಬಿಕೊಂಡು, ಶುದ್ಧ ಅಂತರಂಗ ಭಾವದಿಂದ ಸಮಾಧಿಸ್ಥಿತಿಯಲ್ಲಿ ಧೃತರಾಷ್ಟ್ರ ತಪಸ್ಸನ್ನಾಚರಿಸಿದ.

ಹೀಗೆ ನಾರದರು ಧೃತರಾಷ್ಟ್ರನ ತಪಸ್ಸಿನ ಎತ್ತರವನ್ನು ವರ್ಣಿಸಿದ್ದಾರೆ. ತನ್ನ ಮೂಲರೂಪದಲ್ಲಿ ಒಬ್ಬ ಗಂಧರ್ವನಾಗಿರುವ ಧೃತರಾಷ್ಟ್ರ, ಹೇಗೆ ಮೂಲರೂಪದಲ್ಲಿ ಭಗವಂತನನ್ನು ಕಂಡಿದ್ದನೋ ಹಾಗೇ ಇಲ್ಲಿ ತನ್ನ ಕೊನೆಗಾಲದಲ್ಲಿ, ಸಾಧನೆಯ ಮೂಲಕ ಭಗವಂತನನ್ನು ಕಾಣುತ್ತಾನೆ.

**ವಿಜ್ಞಾನಾತ್ಮನಿ ಸಂಯೋಜ್ಯ ಕ್ಷೇತ್ರಜ್ಞೇ ಪ್ರವಿಲಾಪ್ಯ ತಮ್ ।**
**ಬ್ರಹ್ಮಣ್ಯಾತ್ಮಾನಮಾಧಾರೇ ಘಟಾಂಬರಮಿವಾಂಬರೇ ॥೫೫॥**

ಅಂತ್ಯಕಾಲದಲ್ಲಿ ಧೃತರಾಷ್ಟ್ರ ಸಮಾಧಿ ಸ್ಥಿತಿಯಲ್ಲಿ ಯಾವ ರೀತಿ ಭಗವದ್ ಚಿಂತನೆ ಮಾಡಿದ ಎನ್ನುವುದನ್ನು ಇಲ್ಲಿ ವಿವರಿಸಿದ್ದಾರೆ. ಧೃತರಾಷ್ಟ್ರ ಮೊದಲು ಇಡೀ ವಿಶ್ವ, ತಾನು ಮತ್ತು ತನ್ನಲ್ಲಿರುವ ಸಮಸ್ತ ಇಂದ್ರಿಯಾಭಿಮಾನಿ ದೇವತೆಗಳು ವಿಜ್ಞಾನಾತ್ಮನಲ್ಲಿ(ಪ್ರಾಣತತ್ತ್ವದಲ್ಲಿ/ಮಹತತ್ತ್ವದಲ್ಲಿ/ಚಿತ್ತಾಭಿಮಾನಿದೇವತೆಯಲ್ಲಿ) ಲಯಹೊಂದಿದಂತೆ ಅನುಸಂಧಾನ ಮಾಡಿದ. ನಂತರ ಆ ವಿಜ್ಞಾನಾತ್ಮ ತನ್ನೊಳಗಿರುವ ಕ್ಷೇತ್ರಜ್ಞನಾದ ಭಗವಂತನಲ್ಲಿ ಲಯಹೊಂದಿದಂತೆ ಅನುಸಂಧಾನ ಮಾಡಿದ. ಆ ನಂತರ ಹೇಗೆ ಮಡಿಕೆಯೊಳಗಿರುವ ಆಕಾಶ ಮಡಿಕೆ ಒಡೆದಾಗ ಮಹಾಕಾಶದೊಂದಿಗೆ ಐಕ್ಯವಾಗುತ್ತದೋ ಹಾಗೆ, ತನ್ನೊಳಗಿರುವ ಕ್ಷೇತ್ರಜ್ಞನಾದ ಪರಮಾತ್ಮನನ್ನು, ಸಮಸ್ತ ಬ್ರಹ್ಮಾಂಡವ್ಯಾಪ್ಯನಾದ ಭಗವಂತನ ರೂಪದೊಂದಿಗೆ ಐಕ್ಯವಾಗಿ ಕಂಡ. ಇದು ಅಂತ್ಯಕಾಲದಲ್ಲಿ ಮಾಡಬೇಕಾದ ಒಂದು ವಿಶಿಷ್ಟವಾದ ಧ್ಯಾನ ಪ್ರಕ್ರಿಯೆ.

ಇಲ್ಲಿ **"ಘಟಾಂಬರಮಿವಾಂಬರೇ"** ಎನ್ನುವ ಉಪಮಾನದ ಹಿಂದೆ ಅನೇಕ ಅದ್ಭುತ ವಿಷಯ ಅಡಗಿದೆ. ಇಲ್ಲಿ ಮೂರು ವಿಧದ ಆಕಾಶದ ವರ್ಣನೆ ಇದೆ. ಇದನ್ನು ಆಚಾರ್ಯರು ತಮ್ಮ ತಾತ್ಪರ್ಯನಿರ್ಣಯದಲ್ಲಿ ಅದ್ಭುತವಾಗಿ ವಿವರಿಸಿದ್ದಾರೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ: ಘಟದ ರಚನೆಗೆ ಕಾರಣವಾದ, ಘಟದ ಅವಯವಭೂತವಾಗಿರುವ ಆಕಾಶ[ಮಣ್ಣಿನ ಕಣ-ಅಣು-ಪರಮಾಣು-ಅದರ ನಡುವಿನ ಕಣ್ಣಿಗೆ ಕಾಣದ ಆಕಾಶ] ಜೀವ ಇದ್ದ ಹಾಗೆ; ಘಟ ರಚನೆಯಾದಮೇಲೆ, ಘಟದ

ಒಳಗೆ ತುಂಬಿರುವ ಭೂತಾಕಾಶ ಬ್ರಹ್ಮಾದಿ ಸಮಸ್ತ ತತ್ವಾಭಿಮಾನಿ ದೇವತೆಗಳಿದ್ದ ಹಾಗೆ; ಅವ್ಯಾಕೃತಾಕಾಶ ಭಗವಂತನಿದ್ದ ಹಾಗೆ.

ಧ್ವಸ್ತಮಾಯಾಗುಣೋದ್ರೇಕೋ ನಿರುದ್ಧಕರಣಾಶಯಃ ।
ನಿವರ್ತಿತಾಖಿಲಾಹಾರ ಆಸ್ತೇ ಸ್ಥಾಣುರಿವಾಧುನಾ ।
ತಸ್ಯಾಂತರಾಯೋ ನೈವಾಭೂತ್ ಸನ್ನ್ಯಸ್ತಾಖಿಲಕರ್ಮಣಃ ॥೫೬॥

ಧೃತರಾಷ್ಟ್ರ ವಿಶ್ವದಲ್ಲಿ ತುಂಬಿರುವ ವಿರಾಟ್ ರೂಪಿ ಭಗವಂತನನ್ನು ತನ್ನ ಅಂತರ್ಯಾಮಿ ಎಂದು ಧ್ಯಾನಿಸುತ್ತಿದ್ದ. ಪ್ರಕೃತಿಯಲ್ಲಿನ ಗುಣಗಳು ಅವನಲ್ಲಿ ಉದ್ರೇಕಗೊಳ್ಳುತ್ತಿರಲಿಲ್ಲ. ಹೀಗೆ ಸಾಧನೆಯ ಅತ್ಯುನ್ನತ ಸ್ಥಿತಿಯನ್ನು ಆತ ತಲುಪಿದ.

ಎಂತಹ ಆಶ್ಚರ್ಯ. ಸುಮಾರು ನೂರು ವರ್ಷ, ಅತ್ಯಂತ ದುರ್ಬಲ ವ್ಯಕ್ತಿಯಾಗಿ ಬದುಕಿ, ಪುತ್ರಮೋಹದಿಂದ ಅನೇಕ ಅನರ್ಥಕ್ಕೆ ಕಾರಣೀಭೂತನಾಗಿದ್ದ ಧೃತರಾಷ್ಟ್ರ, ಭೀಮನ ಚುಚ್ಚುಮಾತಿನಿಂದಾಗಿ ಅಂತರಂಗ ಪ್ರವೇಶಿಸಿದ. ಅಂತರಂಗದ ಒಳದೃಷ್ಟಿಯಲ್ಲಿ ಆತ ನೂರು ವರ್ಷಗಳಲ್ಲಿ ಪಡೆಯಲಾಗದ್ದನ್ನು ಮೂರೇ ವರ್ಷದಲ್ಲಿ ಪಡೆದ. ನೂರು ವರ್ಷ ಅದೆಷ್ಟು ಕೆಳಗೆ ಜಾರಿದ್ದನೋ, ಅದೆಲ್ಲವನ್ನೂ ಮೂರೇ ವರ್ಷದಲ್ಲಿ ಮೀರಿ, ಅತ್ಯಂತ ಎತ್ತರಕ್ಕೇರಿದ. ಇದೇ ಒಳಪ್ರಪಂಚದ ಸಾಧನೆಯ ಮಹತ್ವ.

ಧೃತರಾಷ್ಟ್ರನ ಪೂರ್ವವನ್ನು ನೋಡಿದರೆ ಆತ ಒಬ್ಬ ಗಂಧರ್ವ. ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಪುಣ್ಯಜೀವಿ. ಆದರೆ ಯಾವುದೋ ಪ್ರರಾಬ್ಧಕರ್ಮದಿಂದ ಆತ ಭೂಮಿಯಲ್ಲಿ ಕುರುಡನಾಗಿ ಹುಟ್ಟಬೇಕಾಯಿತು. ಹೀಗೆ ಹುಟ್ಟಿದ ಆತ ಕಲಿಯ(ದುರ್ಯೋಧನನ) ಪ್ರೇರಣೆಗೊಳಪಟ್ಟು ಮಾಡಬಾರದ ಕೆಲಸಗಳನ್ನು ಮಾಡಿದ. ಆದರೆ ಮೂರೇ ವರ್ಷದಲ್ಲಿ ಸಾಧನೆಯ ಹಾದಿಗೆ ಮರಳಿ ಎತ್ತರಕ್ಕೇರಿದ. "ಅವನಿಗೆ ತ್ರಿಗುಣದ ಉದ್ರೆಕವೇ ಇರಲಿಲ್ಲ" ಎನ್ನುತ್ತಾರೆ ನಾರದರು. ಸಮಸ್ತ ಇಂದ್ರಿಯಗಳು, ಮನಸ್ಸು, ಎಲ್ಲವನ್ನೂ ಆತ ಭಗವಂತನಲ್ಲಿ ನಿರೋಧ ಮಾಡಿದ. ಅವು ಭಗವಂತನನ್ನು ಬಿಟ್ಟು ಈಚೆ ಬರದಂತೆ ಸ್ಥಬ್ಧಗೊಳಿಸಿದ. ನೀರು ಕುಡಿಯುವುದನ್ನೂ ಬಿಟ್ಟು, ನಿಶ್ಚಲನಾಗಿ ಮರದಕೊರಡಿನಂತೆ ಧ್ಯಾನ ನಿರತನಾದ.

ಸ ವಾ ಅದ್ಯತನಾದ್ ರಾಜಾ ಪರತಃ ಪಂಚಮೇऽಹನಿ ।
ಕಲೇವರಂ ಹಾಸ್ಯತಿ ಹ ತಚ್ಚ ಭಸ್ಮೀಭವಿಷ್ಯತಿ ॥೫೭॥

ನಾರದರು ಹೇಳುತ್ತಾರೆ: "ಇಂದಿಗೆ ಐದು ದಿನಗಳ ಹಿಂದೆ, ಧೃತರಾಷ್ಟ್ರ, ಅನ್ನ-ನೀರನ್ನು ತ್ಯಜಿಸಿ, ಧ್ಯಾನಮಗ್ನನಾಗಿ ತನ್ನ ದೇಹವನ್ನು ತ್ಯಾಗ ಮಾಡಿದ. ಆತನ ದೇಹವನ್ನು ಕಾಳ್ಗಿಚ್ಚು ಆವರಿಸಿತು. ಅವರೆಲ್ಲರ ದೇಹ ಬೆಂಕಿಯಲ್ಲಿ ಬಸ್ಮವಾಯಿತು" ಎಂದು. ಅಗ್ನಿಸಂಸ್ಕಾರದ ವ್ಯವಸ್ಥೆಯನ್ನು ಭಗವಂತನೇ ಮಾಡಿದ.

ವಿದುರಸ್ತು ತದಾಶ್ಚರ್ಯಂ ನಿಶಾಮ್ಯ ಕುರುನಂದನ ।
ಹರ್ಷಶೋಕಯುತಸ್ತಸ್ಮಾದ್ ಗಂತಾ ತೀರ್ಥನಿಷೇವಕಃ ॥೫೯॥

ಇನ್ನು ವಿದುರನನ್ನು ನೋಡಿದರೆ ಆತ ತನ್ನ ಜ್ಞಾನದೃಷ್ಟಿಯಿಂದ ಎಲ್ಲವನ್ನೂ ತಿಳಿಯಬಲ್ಲವನಾಗಿದ್ದ. ಕೌರವರ ನಾಶದ ವಿಷಯ ಆತನಿಗೆ ಮೊದಲೇ ತಿಳಿದಿತ್ತು. ಆದ್ದರಿಂದ ಆತ ಎಲ್ಲವನ್ನೂ ತೊರೆದು ತೀರ್ಥಯಾತ್ರೆಗೆ ತೆರಳಿದ. ಈ ಹಿಂದೆ ಹೇಳಿದಂತೆ: ಯಾದವರ ನಾಶದ ವಿಷಯವೂ ಆತನಿಗೆ ತಿಳಿದಿತ್ತು. “ಆತನಿಗೆ ಲೌಕಿಕವಾಗಿ ತಾನು ಮುದ್ದಾಡಿಸಿ ಬೆಳೆಸಿದ ಮಕ್ಕಳು ಕೆಟ್ಟ ದಾರಿ ಹಿಡಿದು ಅಧೋಗತಿ ಹೊಂದುತ್ತಾರಲ್ಲಾ ಎನ್ನುವ ದುಃಖ ಒಂದು ಕಡೆಯಾದರೆ, ಭಗವಂತನ ಸಂಕಲ್ಪವನ್ನು ಕಾಣುವ ವಿಸ್ಮಯ ಇನ್ನೊಂದು ಕಡೆಯಲ್ಲಿತ್ತು” ಎನ್ನುತ್ತಾರೆ ನಾರದರು.

**ಇತ್ಯುಕ್ತ್ವಾ ಽಥಾರುಹತ್ ಸ್ವರ್ಗಂ ನಾರದಃ ಸಹತುಂಬುರುಃ ।**
**ಯುಧಿಷ್ಠಿರೋ ವಚಸ್ತಸ್ಯ ಹೃದಿ ಕೃತ್ವಾಽಜಹಾಚ್ಛುಚಃ ॥೬೦॥**

ಈ ರೀತಿ ಎಲ್ಲಾ ವಿಚಾರವನ್ನು ಧರ್ಮರಾಯನಿಗೆ ಹೇಳಿ, ಆತನಲ್ಲಿ ಭರವಸೆ ತುಂಬುತ್ತಾರೆ ನಾರದರು. ವಿದುರ ಧರ್ಮರಾಯನಿಗೆ ಹೇಳದೇ ಇದ್ದ ಶ್ರೀಕೃಷ್ಣನ ಅವತಾರ ಸಮಾಪ್ತಿ ವಿಚಾರವನ್ನೂ ಕೂಡಾ ಅವರು ಸೂಕ್ಷ್ಮವಾಗಿ ಧರ್ಮರಾಯನಿಗೆ ಹೇಳುತ್ತಾರೆ. “ಮುಂದೆ ಒಂದು ದಿನ ನೀನೂ ಕೂಡಾ ಹೊರಟು ಹೋಗಬೇಕು” ಎಂದು ಹೇಳುವ ಮೂಲಕ, ಮುಂದೆ ಬರುವ ಸಾವಿನ ಮುನ್ಸೂಚನೆಯನ್ನು ನಾರದರು ಧರ್ಮರಾಯನಿಗೆ ಮನವರಿಕೆ ಮಾಡಿಕೊಡುತ್ತಾರೆ.
ತುಂಬಾ ದುಃಖದಿಂದ ಪರಿತಪಿಸುತ್ತಿದ್ದ ಯುಧಿಷ್ಠಿರನಿಗೆ ನಾರದರ ಮಾತಿನಿಂದ ಸಮಾಧಾನವಾಗುತ್ತದೆ. ದುಃಖವನ್ನು ಕಳೆದುಕೊಂಡು ಆತ ನೆಮ್ಮದಿಯ ಉಸಿರನ್ನಾಡುತ್ತಾನೆ.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ದ್ವಾದಶೋಽಧ್ಯಾಯಃ ॥**
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹನ್ನೆರಡನೇ ಅಧ್ಯಾಯ ಮುಗಿಯಿತು.

*********

# ತ್ರಯೋದಶೋऽಧ್ಯಾಯಃ

## ಯಾದವರನ್ನು ಕಾಣಲು ದ್ವಾರಕೆಗೆ ತೆರಳಿದ ಅರ್ಜುನ-ಯುಧಿಷ್ಠಿರನ ದುಗುಡ

**ಸೂತ ಉವಾಚ--**

**ಸಂಪ್ರಸ್ಥಿತೇ ದ್ವಾರಕಾಯಾಂ ಜಿಷ್ಣೌ ಬಂಧುದಿದೃಕ್ಷಯಾ ।**
**ಜ್ಞಾತುಂ ಮಾಯಾಮನುಷ್ಯಸ್ಯ ವಾಸುದೇವಸ್ಯ ಚೇಷ್ಟಿತಮ್ ॥೧॥**

**ವ್ಯತೀತಾಃ ಕತಿಚಿನ್ಮಾಸಾಸ್ತದಾ ತು ಶತಶೋ ನೃಪಃ ।**
**ದದರ್ಶ ಘೋರರೂಪಾಣಿ ನಿಮಿತ್ತಾನಿ ಭೃಗೂದ್ವಹ ॥೨॥**

ಇಲ್ಲಿ ಉಗ್ರಶ್ರವಸ್ಸರು ಶೌನಕರಿಗೆ ಧೃತರಾಷ್ಟ್ರಾದಿಗಳು ದೇಹತ್ಯಾಗ ಮಾಡಿ ಹದಿನೆಂಟು ವರ್ಷ ಕಳೆದ ನಂತರ ನಡೆದ ಕಥೆಯನ್ನು ವಿವರಿಸುತ್ತಿದ್ದಾರೆ: ಶ್ರೀಕೃಷ್ಣ ಭೂಮಿಯಲ್ಲಿ ಅವತರಿಸಿ ೧೦೬.೫ ವರ್ಷ ಸಂದಿದೆ. ಧರ್ಮರಾಯನಿಗೆ ಸುಮಾರು ೧೦೮ ವರ್ಷ ವಯಸ್ಸು. ಈ ಸಮಯದಲ್ಲಿ ಅರ್ಜುನ ಯಾದವರನ್ನು ನೋಡಿಕೊಂಡು ಬರಲು ದ್ವಾರಕೆಗೆ ಹೋಗಿದ್ದಾನೆ. ಹೋಗಿ ಹಲವು ತಿಂಗಳು ಕಳೆದರೂ ಆತ ಹಿಂದಿರುಗಿ ಬಂದಿಲ್ಲ. [ಮಹಾಭಾರತದ ಪ್ರಕಾರ ಅರ್ಜುನ ಏಳು ದಿನಗಳ ನಂತರ ಹಿಂದಿರುಗಿ ಬರುತ್ತಾನೆ. ಆದರೆ ಇಲ್ಲಿ ಅನೇಕ ತಿಂಗಳುಗಳಾದರೂ ಹಿಂದಿರುಗಿ ಬಂದಿಲ್ಲ ಎಂದಿದ್ದಾರೆ. ಏಕೆ ಹೀಗೆ ಹೇಳಿದ್ದಾರೆ ಎನ್ನುವುದನ್ನು ಮುಂದೆ ವಿವರಿಸಲಾಗಿದೆ]. ಅರ್ಜುನ ಮರಳಿ ಬಾರದೇ ಇರುವುದರಿಂದ ಧರ್ಮರಾಯನಿಗೆ ಗೊಂದಲವಾಗುತ್ತದೆ. ಅದೇ ಸಮಯದಲ್ಲಿ ಆತ ಅನೇಕ ಅಪಶಕುನಗಳನ್ನು ಕಾಣುತ್ತಾನೆ. ನರಿಗಳು ಊರಿಗೆ ಬಂದು ಸೂರ್ಯನಿಗೆ ಅಭಿಮುಖವಾಗಿ ಊಳಿಡುವುದು, ನಾಯಿಗಳು ಆತನ ಮೈಮೇಲೆ ಎಗರಿ ಬರುವುದು, ಇತ್ಯಾದಿ ಅಪಶಕುನಗಳು ಆತನ ಮನಸ್ಸನ್ನು ಗೊಂದಲಗೊಳಿಸುತ್ತವೆ.

**ಕಾಲಸ್ಯ ಚ ಗತಿಂ ರೌದ್ರಾಂ ವಿಪರ್ಯಸ್ತರ್ತುಧರ್ಮಿಣಃ ।**
**ಪಾಪೀಯಸೀಂ ನೃಣಾಂ ವಾರ್ತಾಂ ಕ್ರೋಧಲೋಭಾನೃತಾತ್ಮನಾಮ್ ॥೩॥**

**ಜಿಹ್ಮಪ್ರಾಯಂ ವ್ಯವಹೃತಂ ಸಾಧ್ಯಮಿಶ್ರಂ ಚ ಸೌಹೃದಂ ।**
**ಪಿತೃಮಾತೃಸುಹೃದ್ ಭ್ರಾತೃ ದಂಪತೀನಾಂ ಚ ಕಲ್ಕಿತಾಮ್ ॥೪॥**

ಲೋಕಸ್ಥಿತಿಯನ್ನು ಕಂಡು ಧರ್ಮರಾಯನಿಗೆ ಬೇಸರವಾಗುತ್ತದೆ. ಜನರ ವ್ಯವಹಾರದಲ್ಲಿ ಕಪಟತನ, ಒಳಗೊಂದು ಹೊರಗೊಂದು; ವ್ಯಾವಹಾರಿಕ ಸ್ನೇಹ; ತಂದೆ-ತಾಯಿ, ಅಣ್ಣ-ತಮ್ಮ, ಗಂಡ-ಹೆಂಡತಿ ನಡುವೆ ವಿರಸ; ತಾನು ಹೇಳಿದಂತೆಯೇ ಆಗಬೇಕೆಂದು ಎಲ್ಲರೂ ಬಯಸಿ ಇನ್ನೊಬ್ಬರೊಂದಿಗೆ ಜಗಳ, ಇತ್ಯಾದಿಯನ್ನು ನೋಡಿ ಧರ್ಮರಾಯ ವ್ಯಾಕುಲನಾಗುತ್ತಾನೆ. ಏಕೆ ಬದುಕಬೇಕು ಈ ಭೂಮಿಯಲ್ಲಿ ? ಪ್ರಾಯಃ ನಮ್ಮ ಅವಸಾನ ಕಾಲ ಸಮೀಪಿಸುತ್ತಿದೆ

ಎಂದು ಯೋಚಿಸುತ್ತಾನೆ ಆತ. ಹೀಗೆ ಯೋಚಿಸಿ ಯುಧಿಷ್ಠಿರ ತನ್ನ ದುಗುಡವನ್ನು ತಮ್ಮನಾದ ಭೀಮಸೇನನಲ್ಲಿ ಹೇಳಿಕೊಳ್ಳುತ್ತಾನೆ.

**ಯುಧಿಷ್ಠಿರ ಉವಾಚ--**

> ಅಪಿ ಸಪ್ತಾಧುನಾ ಮಾಸಾ ಭೀಮಸೇನ ತವಾನುಜಃ ।
> ನಾಯಾತಿ ಕಸ್ಯ ವಾ ಹೇತೋರ್ನಾಹಂ ವೇದೇದಮಂಜಸಾ ॥೭॥

ಧರ್ಮರಾಯ ಭೀಮನಲ್ಲಿ ಹೇಳುತ್ತಾನೆ: "ಅರ್ಜುನ ದ್ವಾರಕೆಗೆ ಹೋಗಿ ಏಳು ತಿಂಗಳುಗಳೇ ಕಳೆಯಿತು. ಏಕೆ ಆತ ಹಿಂದಿರುಗಿ ಬಂದಿಲ್ಲ? ನನಗೇನೂ ಹೊಳೆಯುತ್ತಿಲ್ಲ. ಏನೋ ಅಚಾತುರ್ಯ ನಡೆದು ಹೋಗಿದೆ ಎನಿಸುತ್ತಿದೆ" ಎಂದು

> ಅಪಿ ದೇವರ್ಷಿಣಾSSದಿಷ್ಟಃ ಸ ಕಾಲಃ ಪ್ರತ್ಯುಪಸ್ಥಿತಃ ।
> ಯದಾSSತ್ಮನೋSಙ್ಗಮಾಕ್ರೀಡಂ ಭಗವಾನುತ್ಸಿಸೃಕ್ಷತಿ ॥೮॥

ಇಲ್ಲಿ ಧರ್ಮರಾಯ ಹದಿನೆಂಟು ವರ್ಷಗಳ ಹಿಂದೆ ನಾರದರು ಹೇಳಿದ ಮಾತನ್ನು ನೆನಪಿಸಿಕೊಳ್ಳುವುದನ್ನು ಕಾಣುತ್ತೇವೆ. "ಅಂದು ನಾರದರು ಹೇಳಿದಂತೆ: 'ಒಂದು ದಿನ ಭಗವಂತ ಎಲ್ಲವನ್ನೂ ಉಪಸಂಹಾರ ಮಾಡಿ, ತನ್ನ ಅವತಾರವನ್ನು ಸಮಾಪ್ತಿ ಮಾಡಲಿದ್ದಾನೆ.(ತನ್ನ ವಿಹಾರ ಸ್ಥಾನವಾದ ಅಂಗ-ಭೂಮಿಯಲ್ಲಿ ಅದೃಶ್ಯನಾಗಲಿದ್ದಾನೆ) . ಆ ಕಾಲ ಬಂದೇ ಬಿಟ್ಟಿತೇ? ನಾವು ಈ ಭೂಮಿಯನ್ನು ಬಿಟ್ಟು ಹೊರಡುವ ಕಾಲ ಸಮೀಪಿಸಿತೇ? ಏಕೆ ಅರ್ಜುನ ಇನ್ನೂ ಬಂದಿಲ್ಲ" ಎಂದು ತನ್ನ ಅಂತರಂಗದ ದುಗುಡವನ್ನು ಭೀಮನಲ್ಲಿ ಅರುಹಿಕೊಳ್ಳುತ್ತಾನೆ ಧರ್ಮರಾಯ.
ಈ ಹಿಂದೆ ಹೇಳಿದಂತೆ- ಅರ್ಜುನ ದ್ವಾರಕೆಗೆ ಹೋಗಿ, ಏಳು ದಿನಗಳ ನಂತರ ಹಿಂತಿರುಗಿ ಬಂದಿದ್ದಾನೆ ಎಂದು ಮಹಾಭಾರತದಲ್ಲಿ ಉಕ್ತವಾಗಿದೆ. ಆದರೆ ಏಕೆ ಭಾಗವತದಲ್ಲಿ ಏಳು ತಿಂಗಳು ಎಂದು ಹೇಳಿದ್ದಾರೆ? ಈ ಪ್ರಶ್ನೆಗೆ ತಾತ್ಪರ್ಯ ನಿರ್ಣಯದಲ್ಲಿ ಆಚಾರ್ಯರು ಉತ್ತರಿಸಿದ್ದಾರೆ:

> ಮಾಸಶಬ್ದೇನಾಹಾನ್ಯುಚ್ಯಂತೇ । ತಥಾ ಹಿ ಮಹಾಭಾರತೇ ।
> ಅಹಸ್ತು ಮಾಸಶಬ್ದೋಕ್ತಂ ಯತ್ರ ಚಿಂತಾಯುತಂ ವ್ರಜೇತ್ ।
> ಏವಂ ವತ್ಸರಭಾದ್ಯಂ ಚ ವಿಪರೀತೇ ವಿಪರ್ಯಯಃ ।
> ಇತಿ ನಾಮ ಮಹೋದದೌ ।

ಮಹಾಭಾರತದಲ್ಲಿ ನಾವು ಇತಿಹಾಸವನ್ನು ಕಾಣುತ್ತೇವೆ. ಅಂದರೆ ಅಲ್ಲಿ ಹೇಳುವಂತೆ ಅರ್ಜುನ ಏಳೇ ದಿನಗಳಲ್ಲಿ ಹಿಂದಿರುಗಿ ಬಂದಿದ್ದಾನೆ. ಆದರೆ ಭಾಗವತದಲ್ಲಿ ಏಳು ಮಾಸ ಎಂದಿದೆ. ಇದು ಧರ್ಮರಾಯನ ಮನಃಶಾಸ್ತ್ರವನ್ನು ವಿವರಿಸುವ ಪುರಾಣದ ಗುಹ್ಯ ಭಾಷೆ. ಅರ್ಜುನ ಹೊರಟುಹೋದ ದಿನದಿಂದ ಧರ್ಮರಾಯನಿಗೆ ಅನೇಕ ಅಪಶಕುನಗಳು ಎದುರಾಗಿವೆ. ಆದ್ದರಿಂದ ಏನೋ ಅನರ್ಥ ನಡೆದಿದೆ ಎನ್ನುವ ಮುನ್ಸೂಚನೆ ಆತನ ಮನದಲ್ಲಿ

ಮೂಡಿದೆ. ಇದರಿಂದಾಗಿ ಆತನಿಗೆ ಒಂದೊಂದು ದಿನವೂ ಒಂದೊಂದು ಮಾಸದಂತೆ ಕಾಣುತ್ತಿದೆ.ಇಲ್ಲಿ ಧರ್ಮರಾಯ 'ಏಳು ದಿನಗಳನ್ನು ಏಳು ತಿಂಗಳಿನಂತೆ ಕಳೆದಿದ್ದಾನೆ' ಎನ್ನುವುದನ್ನು 'ಸಪ್ತಮಾಸ' ಎಂದು ವಿವರಿಸಿದ್ದಾರೆ ಅಷ್ಟೇ.

ಮೃತ್ಯುದೂತಃ ಕಪೋತೋಽಗ್ನಾವುಲೋಕಃ ಕಂಪಯನ್ಮನಃ ।
ಪ್ರತ್ಯುಲೂಕಶ್ಚ ಹುಂಕಾರೈರನಿದ್ರೌ ಶೂನ್ಯಮಿಚ್ಛತಃ ॥೧೪॥

ಯುಧಿಷ್ಠಿರ ಕಂಡ ವಿಚಿತ್ರ ಅಪಶಕುನಗಳನ್ನು ಇಲ್ಲಿ ವಿವರಿಸಿದ್ದಾರೆ. ಪಾರಿವಾಳ ಬೆಂಕಿಯಲ್ಲಿ ಕಾಲಿಡುವುದು, ಜೋಡಿ ಗೂಬೆಗಳು ಎದೆಗೆಡಿಸುವ ನಾದದಿಂದ ಇಡೀ ರಾತ್ರಿ ಹೂಂಕರಿಸುವುದು- ಇವು ಸರ್ವನಾಶದ ಸಂಕೇತ. ಇವು ನಮ್ಮ ಬಯಕೆಗಳನ್ನು ನಾಶಮಾಡುವ ಶಕುನ. ಈ ಶಕುನಗಳು ವೇದದಲ್ಲಿ ಉಕ್ತವಾಗಿರುವುದನ್ನು ಆಚಾರ್ಯರು ಉಲ್ಲೇಖಿಸುತ್ತಾರೆ:

ಅಗ್ನೌ ಪದಂ ಕರೋತಿ
'ಯದುಲೂಕೋ ವದತಿ ಮೊಘಮೇತದ್
ಯತ್ ಕಪೋತಃ ಪದಮಗ್ನೌಕೃಣೋತಿ' ಇತಿ ಹಿ ಶ್ರುತಿಃ ॥

ಇಲ್ಲಿ ಪಾರಿವಾಳ ಬೆಂಕಿಯಲ್ಲಿ ಕಾಲಿಡುವುದು ಎಂದರೆ ಏನು ಎನ್ನುವುದರಲ್ಲಿ ಸ್ವಲ್ಪ ಗೊಂದಲವಿದೆ. ಕೆಲವು ವ್ಯಾಖ್ಯಾನಕಾರರು 'ಕನಸಿನಲ್ಲಿ ಪಾರಿವಾಳ ಬೆಂಕಿಯಲ್ಲಿ ಕಾಲಿಟ್ಟಂತೆ ಕಾಣಿಸುವುದು ಮೃತ್ಯುಸೂಚಕ' ಎಂದಿದ್ದಾರೆ. ಅನಂತತೀರ್ಥರು ತಮ್ಮ ವ್ಯಾಖ್ಯಾನದಲ್ಲಿ ಅಗ್ನಿಶಾಲೆಯಲ್ಲಿ ಯಾಗ ಮುಗಿದಮೇಲೆ ಹುತಬಸ್ಮದ ಮೇಲೆ ಪಾರಿವಾಳ ನಡೆದಾಡಿದರೆ ಅದು ಮೃತ್ಯುಸೂಚಕ ಶಕುನ ಎಂದು ವ್ಯಾಖ್ಯಾನ ಬರೆದಿದ್ದಾರೆ. ಆದರೆ ಸಾಮಾನ್ಯವಾಗಿ ಅಪಶಕುನ ಎಂದರೆ ಅದು ಸ್ವಲ್ಪ ಅಸಹಜ ಘಟನೆಯಾಗಿರುತ್ತದೆ. ಹಾಗಾಗಿ ಪಾರಿವಾಳ ಎಚ್ಚರ ತಪ್ಪಿ ಬೆಂಕಿಯಲ್ಲಿ ಕಾಲಿಟ್ಟು ಕಾಲು ಸುಟ್ಟುಕೊಂಡರೆ ಅದು ಅನಿಷ್ಠ ಶಕುನ ಎನ್ನಬಹುದು. ಇಲ್ಲಿ ಧರ್ಮರಾಯ ಈ ಎಲ್ಲಾ ಶಕುನಗಳನ್ನು ಕಂಡು, ಅರ್ಜುನ ಹಿಂತಿರುಗಿ ಬಾರದೇ ಇದ್ದುದರಿಂದ ಗಾಬರಿಗೊಂಡಿದ್ದಾನೆ.
ಧರ್ಮರಾಯ ಭೀಮನಲ್ಲಿ ತನ್ನ ಅಂತರಂಗದ ತುಮುಲವನ್ನು ಹೇಳಿಕೊಳ್ಳುತ್ತಿರುವಾಗ ಅರ್ಜುನನ ಆಗಮನವಾಗುತ್ತದೆ. ಆತನನ್ನು ನೋಡಿ ಧರ್ಮಜನಿಗೆ ಬಹಳ ಸಂತೋಷವಾಗುತ್ತದೆ. ಆತ ಒಂದರ ಮೇಲೊಂದು ಪ್ರಶ್ನೆ ಹಾಕಿ, ಯದುವಂಶದ ಬಂಧುಗಳ ಕ್ಷೇಮ ಸಮಾಚಾರವನ್ನು ಕೇಳುತ್ತಾನೆ.

ಭಗವಾನಪಿ ಗೋವಿಂದೋ ಬ್ರಹ್ಮಣ್ಯೋ ಭಕ್ತವತ್ಸಲಃ ।
ಕಚ್ಚಿತ್ ಪುರೇ ಸುಧರ್ಮಾಯಾಂ ಸುಖಮಾಸ್ತೇ ಸುಹೃದ್ ವೃತಃ ॥೩೪॥

ಎಲ್ಲರ ಬಗ್ಗೆ ಕೇಳಿದ ಧರ್ಮರಾಯ-ಶ್ರೀಕೃಷ್ಣನ ಕುರಿತು ಕೇಳುತ್ತಾನೆ. "ಭೂಮಿಯಲ್ಲಿ ಅವತರಿಸಿದ ಭಗವಂತ, ಗೋವುಗಳ ಪಾಲನೆ ಮಾಡಿದ ಗೋಪಾಲ, ವೇದವೇದ್ಯ, ಜ್ಞಾನಿಗಳಿಗೆ ಪ್ರಿಯನಾದವ, ಜ್ಞಾನಿಗಳು ಪ್ರೀತಿಸುವ ಶ್ರೀಕೃಷ್ಣ-ಲೋಕಕ್ಕೆ ಕ್ಷೇಮವಾಗುವಂತೆ ಇದ್ದಾನೆಯೋ" ಎಂದು ಕೇಳುತ್ತಾನೆ ಯುಧಿಷ್ಠಿರ.[ಈ ಶ್ಲೋಕವನ್ನು

ಮೇಲ್ನೋಟದಲ್ಲಿ ನೋಡಿದರೆ ಭಗವಾನ್ ಶ್ರೀಕೃಷ್ಣ ಬಂಧು ಬಳಗದೊಂದಿಗೆ ಕ್ಷೇಮವಾಗಿದ್ದಾನೆಯೋ ಎಂದು ಕೇಳಿದಂತಿದೆ. ಶ್ರೀಕೃಷ್ಣನನ್ನು ಭಗವಂತ ಎಂದು ತಿಳಿದಿದ್ದ ಧರ್ಮರಾಯ ಆ ರೀತಿ ಕೇಳುವ ಸಾಧ್ಯತೆ ಇಲ್ಲ. ಏಕೆಂದರೆ ಭಗವಂತ ಕ್ಷೇಮವಾಗಿಲ್ಲದೇ ಇರುವ ಪ್ರಸಂಗವಿಲ್ಲ. ಆದ್ದರಿಂದ ಈ ಶ್ಲೋಕದ ಒಳಾರ್ಥವೇ ಬೇರೆ. ಈ ಶ್ಲೋಕ ದರ್ಶನ ಭಾಷೆಯಲ್ಲಿದೆ. ಇಲ್ಲಿ ಧರ್ಮರಾಯ ಶ್ರೀಕೃಷ್ಣ-ಲೋಕಕ್ಕೆ ಕ್ಷೇಮವಾಗುವಂತೆ, ಭೂಮಿಯಲ್ಲಿ ಪ್ರತ್ಯಕ್ಷವಾಗಿ ಇದ್ದಾನೆಯೋ ಎಂದು ಕೇಳುತ್ತಿದ್ದಾನೆ].

**ಕಚ್ಚಿತ್ ತ್ತೇಽನಾಮಯಂ ತಾತ ಭ್ರಷ್ಟತೇಜಾ ವಿಭಾಸಿ ಮೇ ।**
**ಅಲಬ್ಧಮಾನೋಽವಜ್ಞಾತಃ ಕಿಂ ವಾ ತಾತ ಚಿರೋಷಿತಃ ॥೩೯॥**

ಧರ್ಮರಾಯ ಇಷ್ಟೆಲ್ಲಾ ಪ್ರಶ್ನೆ ಹಾಕಿದರೂ ಕೂಡಾ ಅರ್ಜುನ ಮಾತ್ರ ಪೆಚ್ಚು ಮೋರೆ ಹಾಕಿ ಕುಳಿತಿದ್ದ. ಇದನ್ನು ಗಮನಿಸಿದ ಧರ್ಮರಾಯ ಅರ್ಜುನನ ಕ್ಷೇಮ ಸಮಾಚಾರವನ್ನು ಕೇಳುತ್ತಾನೆ. "ನಿನ್ನ ಮುಖದಲ್ಲಿ ಕಳೆಯೇ ಇಲ್ಲ. ಏನಾಯ್ತು? ನಿನಗೆ ಸಿಗಬೇಕಾದ ಗೌರವ ಸಿಗಲಿಲ್ಲವೇ? ಯಾರಾದರೂ ನಿನ್ನನ್ನು ತಿರಸ್ಕರಿಸಿದರೇ? ಇತ್ಯಾದಿಯಾಗಿ ಪ್ರಶ್ನಿಸುತ್ತಾನೆ. ಧರ್ಮರಾಯನ ಪ್ರಶ್ನೆಗಳಿಗೆ ಅರ್ಜುನ ಏನು ಉತ್ತರ ಕೊಟ್ಟ ಎನ್ನುವುದನ್ನು ನಾವು ಮುಂದಿನ ಅಧ್ಯಾಯದಲ್ಲಿ ಕಾಣಬಹುದು.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ತ್ರಯೋದಶೋಽಧ್ಯಾಯಃ ॥**
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹದಿಮೂರನೇ ಅಧ್ಯಾಯ ಮುಗಿಯಿತು.

*********

# ಚತುರ್ದಶೋऽಧ್ಯಾಯಃ

## ಶ್ರೀಕೃಷ್ಣನ ಅವತಾರ ಸಮಾಪ್ತಿ

**ಅರ್ಜುನ ಉವಾಚ--**

**ವಂಚಿತೋऽಹಂ ಮಹಾರಾಜ ಹರಿಣಾ ಬಂಧುರೂಪಿಣಾ ।**
**ಯೇನ ಮೇऽಪಹೃತಂ ತೇಜೋ ದೇವವಿಸ್ಮಾಪನಂ ಮಹತ್ ॥೫॥**

ಯುಧಿಷ್ಠಿರನ ಪ್ರಶ್ನೆಗಳನ್ನು ಕೇಳಿ ಅರ್ಜುನ, ಶ್ರೀಕೃಷ್ಣನ ಅವತಾರ ಸಮಾಪ್ತಿಯ ವಿಷಯವನ್ನು ಅಣ್ಣನಿಗೆ ಹೇಳುತ್ತಾನೆ: "ಅಣ್ಣಾ, ನಮ್ಮ ಕಥೆ ಮುಗಿಯಿತು. ಕೃಷ್ಣ ನಮ್ಮನ್ನೆಲ್ಲಾ ಬಿಟ್ಟು ಹೊರಟುಹೋದ. ಕೃಷ್ಣನ ಶ್ರೀರಕ್ಷೆಯಲ್ಲಿ ನಾವು ಮೂರು ಲೋಕದ ವೀರರು ಎಂದು ಖ್ಯಾತಿ ಗಳಿಸಿದ್ದೆವು. ಶ್ರೀಕೃಷ್ಣನ ತೋಳತೆಕ್ಕೆಯಲ್ಲಿದ್ದಾಗ, ಹೇಗೆ ಭಗವದ್ ಭಕ್ತರನ್ನು ಆಸುರೀ ಶಕ್ತಿಗಳು ಘಾಸಿಗೊಳಿಸಲಾರವೋ, ಹಾಗೇ ನಾವು ಶ್ರೀಕೃಷ್ಣನಿಂದ ರಕ್ಷಿಸಲ್ಪಟ್ಟೆವು. ಯುದ್ಧದಲ್ಲಿ ಯಾವ ಅತಿರಥ ಮಹಾರಥರ ಬಾಣವೂ ನಮ್ಮನ್ನು ಘಾಸಿಗೊಳಿಸಲಿಲ್ಲ. ಮಹಾಭಾರತ ಯುದ್ಧದಲ್ಲಿ ನಮಗೆ ಗೆಲುವು ತಂದುಕೊಟ್ಟಿದ್ದು-ನನ್ನ ಗಾಂಢೀವವಾಗಲೀ, ಭೀಮನ ಗದೆಯಾಗಲೀ ಅಲ್ಲ. ಸ್ವಯಂ ಶ್ರೀಕೃಷ್ಣ ನಮ್ಮೊಳಗೆ ನಿಂತು ನಮಗೆ ಜಯ ತಂದುಕೊಟ್ಟ".

**ಪತ್ನ್ಯಾಸ್ತವಾಪಿ ಮಖ ಕ್ಲೃಪ್ತ ಮಹಾಭಿಷೇಕ ಶ್ಲಾಘಿಷ್ಠಚಾರುಕಬರಂ ಕಿತವೈಃ ಸಭಾಯಾಮ್ ।**
**ಸ್ಪೃಷ್ಟಂ ವಿಕೀರ್ಯ ಪದಯೋಃ ಪತಿತಾಶ್ರುಮುಖ್ಯಾಃ ಯೈಸ್ತತ್ ಸ್ತ್ರಿಯೋ ನೈಕೃತ ತತ್ ಸವಿಮುಕ್ತಕೇಶ್ಯಃ ॥೧೦॥**

ರಾಜಸೂಯ ಯಾಗ ಮಾಡಿದಾಗ ಸಹಧರ್ಮಿಣಿಯಾಗಿ ಜೊತೆಗೆ ಕುಳಿತ ದ್ರೌಪದಿಗೆ ಯಾಗದ ಕೊನೆಗೆ ಸಮಸ್ತ ತೀರ್ಥದಿಂದ ಋಷಿಗಳು ಅಭಿಷೇಕ ಮಾಡಿದರು. ಆದರೆ ಯಜ್ಞಶೇಷವಾಗಿರುವ ಪವಿತ್ರ ಅಭಿಷೇಕದಿಂದ ಪಾವನವಾಗಿರುವ ಆಕೆಯ ತಲೆ ಮುಡಿಗೆ ಧೂರ್ತ ಜೂಜುಕೋರರು ಕೈಹಾಕಿದರು. ಈ ಸಂದರ್ಭದಲ್ಲಿ ಪಾಂಡವರು ಏನನ್ನೂ ಮಾಡಲು ಸಾಧ್ಯವಾಗದೇ ಅಸಹಾಯಕರಾಗಿ ನೋಡಬೇಕಾಯಿತು. ಆದರೆ ಶ್ರೀಕೃಷ್ಣ ದ್ರೌಪದಿಯನ್ನು ಆ ಸಂಕಷ್ಟದಿಂದ ಪಾರುಮಾಡಿ ರಕ್ಷಿಸಿದ.
ಧೃತರಾಷ್ಟ ದ್ರೌಪದಿಯಲ್ಲಿ ಏನು ಬೇಕೋ ಕೇಳು ಎಂದಾಗ ಆಕೆ ಕೇಳಿದ್ದು ರಾಜ್ಯವನ್ನಲ್ಲ, ಸಂಪತ್ತನ್ನಲ್ಲ, ಬದಲಿಗೆ ದಾಸತ್ವದಿಂದ ಪಾಂಡವರ ಮುಕ್ತಿ. ಇದನ್ನು ಕಂಡು ದ್ರೌಪದಿಯನ್ನು ದ್ವೇಷಿಸುತ್ತಿದ್ದ ಕರ್ಣ ಕೂಡಾ 'ಬೇಷ್' ಎಂದ. "ದಡ ಸಿಗದ ಕಡಲಲ್ಲಿ ಮುಳುಗಿಯೇ ಹೋಗುತ್ತಿದ್ದ ತನ್ನ ಗಂಡಂದಿರರನ್ನು ಹಡಗಾಗಿ ಬಂದು ದಡ ಹಾಯಿಸಿದ ಮಹಾಮಹಿಳೆ ಇವಳು" ಎಂದು ದ್ರೌಪದಿಯನ್ನು ಹೊಗಳಿದ ಆತ. ಇಷ್ಟೆಲ್ಲಾ ಆದರೂ, ಮತ್ತೆ ಜೂಜಾಡಿ ಸೋತು ಪಾಂಡವರು ಕಾಡಿಗೆ ಹೋಗುವಂತಾಯಿತು. ದ್ರೌಪದಿ ಕೂಡಾ ಪಂಚಪಾಂಡವರೊಂದಿಗೆ ಕಾಡಿಗೆ ಹೋಗುತ್ತಾಳೆ. ಕಾಡಿನಲ್ಲಿ ಕೃಷ್ಣನ ಭೇಟಿಯಾದಾಗ ದ್ರೌಪದಿ ದುಃಖದಿಂದ ಹೇಳುತ್ತಾಳೆ: "ನನಗೆ ಗಂಡಂದಿರರಿಲ್ಲ, ಮಕ್ಕಳಿಲ್ಲ, ಬಂಧು-ಬಾಂಧವರಿಲ್ಲ! ಏಕೆಂದರೆ ಸಭೆಯಲ್ಲಿ ನನ್ನ ಮಾನ ಹೋಗುವ ಸಂದರ್ಭದಲ್ಲಿ ಯಾರೂ ನನ್ನನ್ನು ಕಾಪಾಡಲಿಲ್ಲ.

ಆದ್ದರಿಂದ ನಾನೊಬ್ಬ ಅನಾಥ ಮಹಿಳೆ. ಹೆಣ್ಣಿನ ಅವಮಾನದ ನೋವು ನಿನಗೆ ಅರ್ಥವಾಗುವುದೆಂದು ನಂಬಿದ್ದೇನೆ" ಎಂದು ಹೇಳಿ ತನ್ನ ತಲೆಮುಡಿಯನ್ನು ಬಿಚ್ಚಿಹಾಕುತ್ತಾಳೆ ದ್ರೌಪದಿ. ತಲೆಕೂದಲು ಬಿಚ್ಚಿ ಹಾಕುವುದು ವೈದವ್ಯದ ಸಂಕೇತ. ಹೀಗೆ ಬಿಚ್ಚಿದ ತನ್ನ ಮುಡಿಯನ್ನು ಕೃಷ್ಣನ ಪಾದದ ಮೇಲೆ ಹಾಸಿ ದ್ರೌಪದಿ ಶ್ರೀಕೃಷ್ಣನಿಗೆ ನಮಸ್ಕರಿಸುತ್ತಾಳೆ. ಈ ಸಂದರ್ಭದಲ್ಲಿ ಆಕೆಯ ಕಣ್ಣಿನಿಂದ ಒಂದು ಹನಿ ಕಣ್ಣೀರು ಶ್ರೀಕೃಷ್ಣನ ಪಾದದ ಮೇಲೆ ಬೀಳುತ್ತದೆ. ಆ ಕಣ್ಣೀರು ಎಲ್ಲಾ ಕಣ್ಣೀರಿಗಿಂತ ಶ್ರೇಷ್ಠವಾದ ಕಣ್ಣೀರು. ದ್ರೌಪದಿಯ ಕಣ್ಣೀರನ್ನು ಒರೆಸಿದ ಶ್ರೀಕೃಷ್ಣ ಹೇಳುತ್ತಾನೆ: ಯಾರು ನಿನ್ನ ತಲೆಮುಡಿಗೆ ಕೈಇಟ್ಟು ನಿನ್ನ ಮಾನಭಂಗಕ್ಕೆ ಮುಂದಾದರೋ, ಅವರ ಪತ್ನಿಯರು ತಲೆಮುಡಿ ಬಿಚ್ಚುವಂತಾಗುತ್ತದೆ" ಎಂದು.

"ಇಲ್ಲಿ ಎಲ್ಲವೂ ಶ್ರೀಕೃಷ್ಣನ ಸಂಕಲ್ಪದಂತೆ ನಡೆಯಿತೇ ಹೊರತು ನಮ್ಮ ಪೌರುಷ ಏನೂ ಇಲ್ಲಾ" ಎನ್ನುತ್ತಾ ಅರ್ಜುನ ದ್ವಾರಕೆಯಲ್ಲಿ ನಡೆದ ಇನ್ನೊಂದು ಘಟನೆಯನ್ನು ಧರ್ಮರಾಯನಿಗೆ ವಿವರಿಸುತ್ತಾನೆ: ಕೃಷ್ಣ ಹೊರಟು ಹೋಗುವಾಗ "ದ್ವಾರಕೆ ಮುಳುಗಲಿದೆ, ಆದ್ದರಿಂದ ನೀನು ಇಲ್ಲಿರುವವರನ್ನು ಕರೆದುಕೊಂಡು ಇಲ್ಲಿಂದ ಹೊರಟುಹೋಗಬೇಕು" ಎಂದು ಹೇಳಿರುತ್ತಾನೆ. ಕೃಷ್ಣನ ಆಜ್ಞೆಯಂತೆ ಅರ್ಜುನ ಎಲ್ಲರನ್ನು ಕರೆದುಕೊಂಡು ಬರುತ್ತಿರುವಾಗ, ದಾರಿಯಲ್ಲಿ ದರೋಡೆಕೋರರು ಅಡ್ಡಗಟ್ಟಿ ಅವರ ಎಲ್ಲಾ ಸಂಪತ್ತನ್ನು ದೋಚುತ್ತಾರೆ! ಯಾವ ಅರ್ಜುನ ಗಾಂಡೀವ ಹಿಡಿದು ನಿರ್ಭಯನಾಗಿ ಹನ್ನೊಂದು ಅಕ್ಷೋಹಿಣಿ ಸೈನ್ಯದ ಮುಂದೆ ಹೋರಾಡಿದ್ದನೋ, ಅದೇ ಅರ್ಜುನನಿಗೆ ಕಾಡಿನಲ್ಲಿ ಒಬ್ಬ ಸಾಮಾನ್ಯ ದರೋಡೆಕೋರರಿಂದ ಜನರನ್ನು ರಕ್ಷಿಸಲು ಸಾಧ್ಯವಾಗುವುದಿಲ್ಲ!

> ತದ್ವೈ ಧನುಸ್ತ ಇಷವಃ ಸ ರಥೋ ಹಯಾಸ್ತೇ ಸೋಽಹಂ ರಥೀ ನೃಪತಯೋ ಯತ ಆಮನಂತಿ ।
> ಸರ್ವಂ ಕ್ಷಣೇನ ತದಭೂದಸದೀಶರಿಕ್ತಂ ಭಸ್ಮನ್ಹುತಂ ಕುಹಕರಾದ್ಧಮಿವೋಪ್ತಮೂಷೇ ॥೨೧॥

ಅರ್ಜುನ ಹೇಳುತ್ತಾನೆ: "ಅದೇ ಗಾಂಡೀವ, ಅದೇ ಬಾಣಗಳು, ಅದೇ ರಥ, ಅದೇ ಕುದುರೆಗಳು. ಯಾರ ಹೆಸರು ಕೇಳಿದರೆ ರಾಜಾದಿರಾಜರು ಶರಣಾಗುತ್ತಿದ್ದರೋ-ಅದೇ ಅರ್ಜುನ. ಆದರೆ ವ್ಯತ್ಯಾಸ ಒಂದೇ. ಅಂದು ಕೃಷ್ಣ ಜೊತೆಗಿದ್ದ, ಇಂದು ಇಲ್ಲ! ಕೃಷ್ಣನನ್ನು ಹೊರತುಪಡಿಸಿದಾಗ ಎಲ್ಲವೂ ಶೂನ್ಯ. ಕೃಷ್ಣನಿಲ್ಲ ಎಂದರೆ ಎಲ್ಲವೂ ಮರುಭೂಮಿಯಲ್ಲಿ ಬಿತ್ತಿದ ಬೀಜದಂತೆ, ಬೂದಿಯಲ್ಲಿ ಹೋಮಮಾಡಿದಂತೆ ವ್ಯರ್ಥ. ಎಲ್ಲಾ ಪರಿಕರಗಳಿದ್ದೂ, ಒಬ್ಬ ಸಾಮಾನ್ಯ ದರೋಡೆಕೋರರನ್ನು ಗೆಲ್ಲಲಾರದೇ ಹೋದೆ ನಾನು".

ಇಲ್ಲಿ ನಮಗೊಂದು ಪ್ರಶ್ನೆ ಬರುತ್ತದೆ. ನಮಗೆ ತಿಳಿದಂತೆ ಮಹಾಭಾರತ ಯುದ್ಧದಲ್ಲಿ ಅಶ್ವತ್ಥಾಮ ನಾರಾಯಣ ಅಸ್ತ್ರ ಪ್ರಯೋಗಿಸಿದ್ದ. ಆಗ ಶ್ರೀಕೃಷ್ಣ ಎಲ್ಲರಲ್ಲೂ ಆ ಅಸ್ತ್ರಕ್ಕೆ ತಲೆಬಾಗುವಂತೆ ಸೂಚಿಸಿ ಪಾಂಡವರನ್ನು ರಕ್ಷಿಸಿದ್ದ. ಕೊನೆಗೆ ಯುದ್ಧಾನಂತರ ಹಿಂದಿರುಗಿ ಬಂದು, ಅರ್ಜುನನನ್ನು ರಥದಿಂದ ಮೊದಲು ಕೆಳಗಿಳಿಸಿ, ಆನಂತರ ಕೃಷ್ಣ ರಥದಿಂದ ಕೆಳಗಿಳಿದ. ಕೃಷ್ಣ ರಥದಿಂದ ಕೆಳಗಿಳಿದಾಗ, ರಥದ ದ್ವಜದಲ್ಲಿದ್ದ ಕಪಿ ಅದೃಷ್ಯನಾದ. ತಕ್ಷಣ ಆ ರಥ-ಕುದುರೆಗಳು ಎಲ್ಲವೂ ನಾರಾಯಣ ಅಸ್ತ್ರದಿಂದ ಸಂಪೂರ್ಣವಾಗಿ ಬಸ್ಮವಾಯಿತು. ಹೀಗಿರುವಾಗ ಇಲ್ಲಿ ಅರ್ಜುನ ಅದೇ ರಥ, ಅದೇ ಕುದುರೆಗಳು ಎಂದು ಏಕೆ ಹೇಳಿದ್ದಾನೆ? ಈ ಪ್ರಶ್ನೆಗೆ ಆಚಾರ್ಯರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಉತ್ತರಿಸಿದ್ದಾರೆ.

> ಸ ರಥೋ ಹಯಾಸ್ತ ಇತಿ ತಾದೃಶಾ ಇತ್ಯರ್ಥಃ, ತ ಇಷವ ಇತೀವ ।
> ಸದೃಶೇ ವಾ ಪ್ರಧಾನೇ ವಾ ಕಾರಣೇ ವಾ ತದಿತ್ಯಯಮ್ ।

**ಶಬ್ದಃ ಸಂಘಟತೇ ಭೇದೇ ವಿದ್ಯಮಾನೇಽಪಿ ತತ್ವತಃ ॥**
**ಇತಿ ಬ್ರಹ್ಮತರ್ಕೇ । ತದ್ರಥಹಯಾನಾಂ ದಾಹೋಕ್ತೇಃ ।**

ಹೇಗೆ 'ಅದೇ ಬಾಣ' ಎಂದರೆ 'ಅಂತಹದ್ದೇ ಬಾಣ' ಎಂದರ್ಥವೋ, ಹಾಗೇ- ಇಲ್ಲಿ 'ಅದೇ ರಥ, ಅದೇ ಕುದುರೆ' ಎನ್ನುವುದಕ್ಕೆ 'ಅಂತಹದ್ದೇ ರಥ, ಅಂತಹದ್ದೇ ಕುದುರೆಗಳು' ಎಂದರ್ಥ. ಈ ರೀತಿ ಅರ್ಥ ಮಾಡಿದಾಗ ಮಾತ್ರ ಇದು ಮಹಾಭಾರತದಲ್ಲಿ ಹೇಳಿರುವ ಕಥೆಗೆ ಕೂಡುತ್ತದೆ.
ಅರ್ಜುನ ಹೇಳುತ್ತಾನೆ: "ಈಗ ನನಗೆ ತಿಳಿಯಿತು. ನಮ್ಮ ಬದುಕಿನಲ್ಲಿ ಎಲ್ಲವೂ ನಡೆದದ್ದು ಶ್ರೀಕೃಷ್ಣನಿಂದಾಗಿ. ಶ್ರೀಕೃಷ್ಣನನ್ನು ಬಿಟ್ಟು ನಮ್ಮ ಬದುಕಿಗೆ ಅರ್ಥವಿಲ್ಲ. ಕೃಷ್ಣ ನಮ್ಮನ್ನು ಬಿಟ್ಟು ಹೊರಟುಹೋದ. ಆದ್ದರಿಂದ ನಾವು ಇಲ್ಲಿರುವುದರಲ್ಲಿ ಅರ್ಥವಿಲ್ಲ. ಇಂತಹ ಸ್ಥಿತಿಯಲ್ಲಿ ನಾನು ಬಂದಿದ್ದೇನೆ" ಎಂದು ತನ್ನ ದುಃಖವನ್ನು ತೋಡಿಕೊಳ್ಳುತ್ತಾನೆ ಅರ್ಜುನ.

**ರಾಜಂಸ್ತ್ವಯಾಽನುಭಿಪೃಷ್ಟಾನಾಂ ಸುಹೃದಾಂ ನಃ ಸುಹೃತ್ಪುರೇ ।**
**ವಿಪ್ರಶಾಪವಿಮೂಢಾನಾಂ ನಿಘ್ನತಾಂ ಮುಷ್ಟಿಭಿರ್ಮಿಥಃ ॥೨೨॥**

**ವಾರುಣೀಂ ಮದಿರಾಂ ಪೀತ್ವಾ ಮದೋನ್ಮಥಿತಚೇತಸಾಮ್ ।**
**ಅಜಾನತಾಮಿವಾತ್ಮಾನಂ ಚತುಃಪಂಚಾವಶೇಷಿತಾಃ ॥೨೩॥**

ಪಾಂಡವರ ಆತ್ಮೀಯ ಬಂಧುಗಳಾದ ಯಾದವರಿಗೆ ಏನಾಯಿತು ಎನ್ನುವುದನ್ನು ಅರ್ಜುನ ಯುಧಿಷ್ಠಿರನಿಗೆ ವಿವರಿಸುತ್ತಾನೆ. ಸುಮಾರು ಇಪ್ಪತ್ತಾರು ವರ್ಷಗಳ ಹಿಂದೆ, ಗರ್ಭಿಣಿ ಹೆಣ್ಣಿನ ವೇಷ ಧರಿಸಿದ್ದ ಸಾಂಬನನ್ನು ಮುಂದಿಟ್ಟುಕೊಂಡು ಯಾದವರು "ಈಕೆಗೆ ಗಂಡು ಮಗುವಾಗುತ್ತದೋ ಅಥವಾ ಹೆಣ್ಣಾಗುತ್ತದೋ" ಎಂದು ಕೆಲಮಂದಿ ಋಷಿಗಳಲ್ಲಿ ಕೇಳುತ್ತಾರೆ. ಇದರಿಂದ ಕೋಪಗೊಂಡ ವಿಪ್ರರು "ಈತ ಖಂಡಿತವಾಗಿ ಹೆರುತ್ತಾನೆ ಮತ್ತು ಅದರಿಂದ ಇಡೀ ಯಾದವ ಕುಲ ನಾಶವಾಗಲಿದೆ" ಎಂದು ಶಾಪ ಕೊಡುತ್ತಾರೆ. ಋಷಿಗಳ ಶಾಪದಿಂದಾಗಿ ಸಾಂಬ ಕಬ್ಬಿಣದ ಸಲಾಕೆಯೊಂದನ್ನು ಹೆರುತ್ತಾನೆ. ಆಗ ಯಾದವರು ಆ ಸಲಾಕೆಯನ್ನು ಪುಡಿಪುಡಿ ಮಾಡಿ ಸಮುದ್ರಕ್ಕೆ ಚೆಲ್ಲುತ್ತಾರೆ. ಹಾಗೆ ಚೆಲ್ಲಿದ ಪುಡಿ ಸಮುದ್ರದ ತೆರೆಯಿಂದಾಗಿ ಮರಳಿ ದಡಕ್ಕೆ ಬಂದು ಸೇರುತ್ತದೆ. ಈ ರೀತಿ ಅದು ಬಂದು ಸೇರಿದ ಸ್ಥಳದಲ್ಲಿ ಒಂದು ಜಾತಿಯ ಮುಳ್ಳಿನ ಗಿಡ ಬೆಳೆಯುತ್ತದೆ.
ಸಮುದ್ರಕ್ಕೆ ಚೆಲ್ಲಿದ ಕಬ್ಬಿಣದ ಸಲಾಕೆಯ ಪುಡಿಯ ಮಧ್ಯದಲ್ಲಿ ಒಂದು ಕಬ್ಬಿಣದ ಚೂರು ಸೇರಿಕೊಂಡಿದ್ದು ಅದನ್ನು ಮೀನೊಂದು ನುಂಗುತ್ತದೆ. ಆ ಮೀನನ್ನು ಬೆಸ್ತರು ಹಿಡಿದಾಗ ಆ ಕಬ್ಬಿಣದ ಚೂರು ಜರಾ ಎನ್ನುವ ಬೇಡನಿಗೆ ಸಿಗುತ್ತದೆ. ಆತ ಅದನ್ನು ಭೇಟೆಯಲ್ಲಿ ಬಾಣದ ರೂಪದಲ್ಲಿ ಬಳಸಬಹುದೆಂದು ತನ್ನಲ್ಲಿರಿಸಿಕೊಳ್ಳುತ್ತಾನೆ.
ಶ್ರೀಕೃಷ್ಣ ಯಾದವರೆಲ್ಲರನ್ನು ಪ್ರವಾಸಕ್ಕೆ ಹೋಗಿ ಬನ್ನಿರೆಂದು ಕಳುಹಿಸಿಕೊಡುತ್ತಾನೆ. ಇದು ವಿನೋದಕ್ಕಾಗಿ ಯಾದವರು ಕೈಗೊಂಡ ಪ್ರವಾಸ(Picnic). ಹೀಗೆ ಪ್ರವಾಸದಲ್ಲಿದ್ದಾಗ ಅವರು- ಒಂದು ದಿನ ಸಂಜೆ, ಸಮುದ್ರದ ತಡಿಯಲ್ಲಿ ತಂಗುತ್ತಾರೆ. ಆ ಸಮಯದಲ್ಲಿ ಎಲ್ಲರೂ ವಿನೋದಕ್ಕಾಗಿ ಮಧ್ಯಪಾನ ಮಾಡುತ್ತಾರೆ. [ಶಾಸ್ತ್ರದ ಪ್ರಕಾರ ಕ್ಷತ್ರೀಯರಿಗೆ ಮಾಂಸ ಭಕ್ಷಣೆ ಮತ್ತು ಮದ್ಯಪಾನ ನಿಷೇಧವಲ್ಲ]. ಇಲ್ಲಿ ವಿಪ್ರರ ಶಾಪ ಕೆಲಸ ಮಾಡುತ್ತದೆ.

ಮಧ್ಯಪಾನದಿಂದಾಗಿ ಅವರು ತಮ್ಮ ಪ್ರಜ್ಞೆಯನ್ನು ಕಳೆದುಕೊಂಡು ವಿನೋದಕ್ಕಾಗಿ ಜಗಳ ಆರಂಭಿಸುತ್ತಾರೆ. ಆದರೆ ಕ್ಷಣಮಾತ್ರದಲ್ಲೇ ವಿನೋದ ಜಗಳವಾಗಿ, ಜಗಳ ದ್ವೇಷವಾಗಿ, ಅವರು ಸಮುದ್ರದ ತಡಿಯಲ್ಲಿದ್ದ ಮುಳ್ಳಿನ ಗಿಡಗಳನ್ನು ತೆಗೆದುಕೊಂಡು ಹೊಡೆದಾಡಲಾರಂಭಿಸುತ್ತಾರೆ. ಈ ಹೊಡೆದಾಟ ವಿಪರೀತಕ್ಕೆ ತಲುಪಿ ಒಬ್ಬರು ಇನ್ನೊಬ್ಬರನ್ನು ಹೊಡೆದು ಸಾಯಿಸುತ್ತಾರೆ! ಎಂತಹ ವಿಪರ್ಯಾಸ! ಅವರೆಲ್ಲರೂ ಕೂಡಾ ದೈವಾಂಶ ಸಂಭೂತರು. ಆದರೆ ವಿಪ್ರರ ಶಾಪ ಮತ್ತು ಭಗವಂತನ ಸಂಕಲ್ಪದ ಮುಂದೆ ಎಲ್ಲವೂ ನಗಣ್ಯ! ಅವರಿಗೆ ತಾವು ತಪ್ಪು ಮಾಡುತ್ತಿದ್ದೇವೆ ಎನ್ನುವ ಪ್ರಜ್ಞೆಯೂ ಬರಲಿಲ್ಲ. ಒಬ್ಬರಿಗೊಬ್ಬರು ಪರಿಚಯ ಇಲ್ಲದವರ ಹಾಗೆ, ಭಗವಂತನ ಎಚ್ಚರ ಇಲ್ಲದವರಂತೆ ಎಲ್ಲರೂ ಹೊಡೆದಾಡಿಕೊಂಡು ಸತ್ತು ಹೆಣವಾಗಿ ಬೀಳುತ್ತಾರೆ. ಅಲ್ಲಿ ಬದುಕುಳಿದದ್ದು ಎಲ್ಲೋ ಮೂರ್ನಾಲ್ಕು ಮಂದಿ ಮಾತ್ರ.

ದೇವತೆಗಳು ಮನುಷ್ಯರನ್ನು ರಕ್ಷಣೆ ಮಾಡುತ್ತಾರೆ, ಪಾಪ-ಪ್ರಾರಾಬ್ಧ ಇದ್ದಾಗ ಶಿಕ್ಷೆಯನ್ನೂ ಕೊಡುತ್ತಾರೆ. ಯಾರನ್ನು ರಕ್ಷಿಸಬೇಕೆಂದು ಅವರು ತೀರ್ಮಾನ ಮಾಡುತ್ತಾರೋ, ಅವರಿಗೆ ವಿವೇಕವನ್ನು ಕೊಡುತ್ತಾರೆ. ಯಾರು ದಾರಿ ತಪ್ಪಬೇಕಾಗಿರುವುದು ಅವರ ಪ್ರಾರಾಬ್ಧದಲ್ಲಿದೆಯೋ, ಅಂತಹ ಸಂದರ್ಭದಲ್ಲಿ ಅವರಿಗೆ 'ಯಾವುದು ಸರಿ, ಯಾವುದು ತಪ್ಪು' ಎನ್ನುವ ತೀರ್ಮಾನ ಮಾಡುವ ಒಳಗಿನ ವಿವೇಕವೇ ಇಲ್ಲವಾಗುವಂತೆ ಮಾಡುತ್ತಾರೆ. ಇದರಿಂದಾಗಿ ನಾವು ಮಾಡುವ ತಪ್ಪು ನಮಗೇ ತಿಳಿಯದಾಗುತ್ತದೆ. ಇಲ್ಲಿ ನಡೆದಿರುವುದೂ ಇಷ್ಟೇ. ಇದು ಅಪರೋಕ್ಷ ಜ್ಞಾನಿಗಳ ಪ್ರರಾಬ್ಧ ಕರ್ಮದ ಫಲಿತಾಂಶ.

ಪ್ರಾಯೇಣೈತದ್ ಭಗವತ ಈಶ್ವರಸ್ಯ ವಿಚೇಷ್ಟಿತಮ್ ।
ಮಿಥೋ ನಿಘ್ನಂತಿ ಭೂತಾನಿ ಭಾವಯಂತಿ ಚ ಯನ್ಮಿಥಃ ॥೨೪॥

ಯಾದವರು ತಮ್ಮ ಬದುಕಿನ ಪೂರ್ಣ ಭಾಗವನ್ನು ಭಗವಂತನ ಜೊತೆಗೆ ಕಳೆದವರು. ಆದರೂ ಏಕೆ ಹೀಗಾಯ್ತು? "ಇದಕ್ಕೆ ನನ್ನಲ್ಲಿ ವಿವರಣೆ ಇಲ್ಲ" ಎನ್ನುತ್ತಾನೆ ಅರ್ಜುನ. ಎಲ್ಲವೂ ಆ ಭಗವಂತನ ಸಂಕಲ್ಪ. ಯಾವುದೂ ನಮ್ಮ ಕೈಯಲಿಲ್ಲ. ಭಗವಂತ ಸರ್ವಸಮರ್ಥ. ಆತ ನಮ್ಮ ಮನಸ್ಸಿನ ಈಶ (ಮನೀಷಿ). ಪ್ರಪಂಚದಲ್ಲಿ ಬಹುತೇಕ ಎಲ್ಲವೂ ಆತನ ಇಚ್ಛೆಯಂತೆಯೇ ನಡೆಯುತ್ತದೆ. ಪ್ರಪಂಚದಲ್ಲಿ ಯಾರ ಮೂಲಕವೋ ಯಾರೋ ಹುಟ್ಟುತ್ತಾರೆ. ಯಾರ ಮೂಲಕವೋ ಯಾರೋ ಸಾಯುತ್ತಾರೆ. ಉದ್ವೇಗದಲ್ಲಿ ಒಬ್ಬರು ಇನ್ನೊಬ್ಬರನ್ನು ನೋಯಿಸಿ ಆನಂತರ ಪಶ್ಚಾತ್ತಾಪಪಡುತ್ತಾರೆ. ತಪ್ಪು ಮಾಡುವಾಗ ತಾನು ಮಾಡುತ್ತಿರುವುದು ಸರಿಯೋ ತಪ್ಪೋ ಎನ್ನುವ ವಿವೇಕವೂ ಇರುವುದಿಲ್ಲ. ಹುಟ್ಟಿಸುವುದು, ರಕ್ಷಿಸುವುದು ಮತ್ತು ಸಾಯಿಸುವುದು ಎಲ್ಲವೂ ಆ ಸರ್ವಸಮರ್ಥ ಭಗವಂತನ ಲೀಲೆ ಎನ್ನುತ್ತಾನೆ ಅರ್ಜುನ.

ಏವಂ ಬಲಿಷ್ಠೈರ್ಯದುಭಿರ್ಮಹದ್ಭಿರಿತರಾನ್ವಿಭುಃ ।
ಯದೂನ್ ಯದುಭಿರನ್ಯೋನ್ಯಂ ಭೂಭಾರಾನ್ಸಂಜಹಾರ ಹ ।
ಕಂಟಕಂ ಕಂಟಕೇನೈವ ದ್ವಯಂ ಚಾಪೀಶಿತುಃ ಸಮಮ್ ॥೨೬॥

ಯದುಗಳು ಭೂಮಿಯಲ್ಲಿ ಹುಟ್ಟುವಂತೆ ಮಾಡಿದ ಅವನೇ, ಅವರು ಹುಟ್ಟಿದ ಕಾರ್ಯ ಮುಗಿದಾಗ ಭೂಮಿಗೆ ಭಾರವಾಗುವಂತೆ ಮಾಡಿದ. ಹೀಗೆ ಭೂಮಿಗೆ ಭಾರವಾದವರನ್ನು ಆತನೇ ಸಂಹಾರ ಮಾಡಿದ. ಹೇಗೆ ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುತ್ತಾರೋ ಹಾಗೇ ಯದುಗಳನ್ನು ಯದುಗಳಿಂದಲೇ ಸಂಹಾರ ಮಾಡಿದ ಶ್ರೀಕೃಷ್ಣ.

ಭಗವಂತನಿಗೆ ಹುಟ್ಟು-ಸಾವಿನಲ್ಲಿ ಯಾವ ಅಂತರವೂ ಇಲ್ಲ. ಏಕೆಂದರೆ ಮೂಲತಃ ಜೀವ ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಕಾಣುವ ಶರೀರ ಬರುವುದು ಹುಟ್ಟು, ಆ ಶರೀರದಿಂದ ಜೀವ ಕಳಚಿಕೊಳ್ಳುವುದು ಸಾವು. ಹೀಗಾಗಿ ಭಗವಂತ ಎಲ್ಲವನ್ನೂ ನಿರ್ಲಿಪ್ತನಾಗಿ ಮಾಡುತ್ತಾನೆ.

"ಶ್ರೀಕೃಷ್ಣ ಭೂಮಿಯಲ್ಲಿ ತನ್ನ ಅವತಾರ ಸಮಾಪ್ತಿಮಾಡಿದ, ನಾವು ಕೃಷ್ಣನನ್ನು ಕಳೆದುಕೊಂಡೆವು" ಎಂದು ಅರ್ಜುನ ಶೋಕಿಸುತ್ತಾನೆ ಎನ್ನುವಲ್ಲಿಗೆ ಈ ಅಧ್ಯಾಯ ಕೊನೆಗೊಳ್ಳುತ್ತದೆ. ಒಟ್ಟಾರೆ ಹೇಳಬೇಕೆಂದರೆ: ಶ್ರೀಕೃಷ್ಣನ ಅವತಾರ ಸಮಾಪ್ತಿಯಿಂದಾಗಿ ಅರ್ಜುನನಲ್ಲಿ ಉಂಟಾದ ಶೋಕದ ಆವೇಶವನ್ನು ಈ ಅಧ್ಯಾಯ ಚಿತ್ರಿಸಿದೆ.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಚತುರ್ದಶೋಽಧ್ಯಾಯಃ ॥

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹದಿನಾಲ್ಕನೇ ಅಧ್ಯಾಯ ಮುಗಿಯಿತು.

*********

# ಪಂಚದಶೋಽಧ್ಯಾಯಃ

## ಪರೀಕ್ಷಿತನ ಪಟ್ಟಾಭಿಷೇಕ

**ವಾಸುದೇವಾಂಘ್ರ್ಯನುಧ್ಯಾನಪರಿಬೃಂಹಿತರಂಹಸಾ ।**
**ಭಕ್ತ್ಯಾ ನಿರ್ಮಥಿತಾಶೇಷ ಕಷಾಯಧಿಷಣೋಽರ್ಜುನಃ ॥೧॥**

ಅರ್ಜುನ ಶ್ರೀಕೃಷ್ಣನ ಜೊತೆಗೇ ಇದ್ದಿದ್ದರೂ ಕೂಡಾ, ಆತ ಭಗವಂತನಿಗೆ ಅತ್ಯಂತ ನಿಕಟವಾದುದ್ದು ಶ್ರೀಕೃಷ್ಣ ಅವತಾರ ಸಮಾಪ್ತಿ ಮಾಡಿದ ಮೇಲೆಯೇ! ಶ್ರೀಕೃಷ್ಣ ಅದೃಶ್ಯನಾದಮೇಲೆ  ಅರ್ಜುನನ ಮನಸ್ಸಿನಲ್ಲಿದ್ದ ಎಲ್ಲಾ ಕೊಳೆ ತೊಳೆದುಹೋಗಿ ಆತ ಪರಿಶುದ್ಧನಾದ. ಸ್ವಯಂ ಅಪರೋಕ್ಷಜ್ಞಾನಿ, ಇಂದ್ರಾಂಶಸಂಭೂತನಾದ  ಆತನಿಗೆ ಶ್ರೀಕೃಷ್ಣ ಭಗವಂತ ಎನ್ನುವುದು ಮೊದಲೇ ತಿಳಿದಿತ್ತು. ಆದರೂ ಕೂಡಾ  ಪ್ರರಾಬ್ಧಕರ್ಮದಿಂದಾಗಿ ಆಗಾಗ ಆತನ ಮನಸ್ಸು ವಿಚಲಿತಗೊಳ್ಳುತ್ತಿತ್ತು.

ಪ್ರರಾಬ್ಧಕರ್ಮ ಎನ್ನುವುದು ಬಹಳ ಭಯಾನಕವಾದ ಬಂಧನ. ಅದು ಎಷ್ಟು ಭಯಾನಕ ಎನ್ನುವುದನ್ನು ಗೀತೆ ಮತ್ತು ವೇದವ್ಯಾಸರ ಅನೇಕ ಗ್ರಂಥಗಳು ಒತ್ತಿಒತ್ತಿ ಹೇಳುತ್ತವೆ. ಇಲ್ಲಿ ಹೇಳುವಂತೆ: "ಶ್ರೀಕೃಷ್ಣ ಅದೃಶ್ಯನಾದಮೇಲೆ, ಎಲ್ಲಾ ಬಗೆಯಿಂದಲೂ, ಎಲ್ಲವನ್ನೂ ಮರೆತು, ಭಗವಂತನ ಧ್ಯಾನ ಮಾಡುವುದು ಅರ್ಜುನನಿಗೆ ಸಾಧ್ಯವಾಯಿತು". ಇದು ಮನಃಶಾಸ್ತ್ರ. ನಾವು ಯಾವುದನ್ನು ಗಾಢವಾಗಿ ಪ್ರೀತಿಸುತ್ತೇವೋ, ಅದು ಹತ್ತಿರದಲ್ಲಿರುವಾಗ ನಮಗೆ ಅದರ ನೆನಪಾಗುವುದಕ್ಕಿಂತ ಹೆಚ್ಚು, ಅದು ಅಗಲಿದಾಗ ನೆನಪಾಗುತ್ತದೆ. ಇಲ್ಲಿ ಅರ್ಜುನನಿಗೆ ಕೂಡಾ ಅದೇ ಅನುಭವವಾಗುತ್ತಿದೆ. ಆತ ಪರಮಮಂಗಳ ಮೂರ್ತಿಯಾಗಿ ಭಗವಂತನನ್ನು ಮನಸ್ಸಿನಲ್ಲಿ ಕಾಣುತ್ತಿದ್ದಾನೆ. ಆತನ ಧ್ಯಾನಶಕ್ತಿ ಹಿಂದೆಂದೂ ಕಾಣದ ಅದಮ್ಯ ವೇಗದಲ್ಲಿ ಚಿಮ್ಮುತ್ತಿದೆ. ಧ್ಯಾನ-ಧ್ಯಾನದಿಂದ ಭಕ್ತಿ; ಭಕ್ತಿಯಿಂದ ಮತ್ತೆ ಧ್ಯಾನ. ಹೀಗೆ ಧ್ಯಾನ-ಭಕ್ತಿಗಳ ಸಮಾಗಮದಲ್ಲಿ ಆತನಲ್ಲಿದ್ದ ಎಲ್ಲಾ ಪ್ರರಾಬ್ಧಕರ್ಮದ ಕೊಳೆ ತೊಳೆದುಹೋಗಿ ಆತನ ಬುದ್ಧಿ ಸ್ವಚ್ಛವಾಗುತ್ತದೆ.

"ಅರ್ಜುನ ಇಂದ್ರಾಂಶಸಂಭೂತ, ಅಪರೋಕ್ಷ ಜ್ಞಾನಿ. ಅಪರೋಕ್ಷಜ್ಞಾನಿಗಳಿಗೆ ಅವರ ಹಿಂದಿನ ಎಲ್ಲಾ ಪಾಪ ನಾಶವಾಗಿರುತ್ತದೆ ಮತ್ತು ಮುಂದೆಂದೂ ಅವರಿಗೆ ಪಾಪ ಅಂಟುವುದಿಲ್ಲ. ಹಾಗಿರುವಾಗ ಅರ್ಜುನನಿಗೆ ಎಲ್ಲಿಂದ ಬಂತು ಈ ಮನಸ್ಸಿನ ಕೊಳೆ" ಎನ್ನುವ ಪ್ರಶ್ನೆ ಇಲ್ಲಿ ನಮಗೆ ಬರಬಹುದು. ಇದಕ್ಕೆ ಉತ್ತರ ಪ್ರಾರಾಬ್ಧಕರ್ಮ. ಪ್ರರಾಬ್ಧಕರ್ಮ ಅಪರೋಕ್ಷ ಜ್ಞಾನಿಯನ್ನೂ ಬಿಡುವುದಿಲ್ಲ. ವೇದವ್ಯಾಸರೇ ಹೇಳಿರುವಂತೆ: "ಪ್ರರಾಬ್ಧಕರ್ಮ ಅಪರೋಕ್ಷ ಜ್ಞಾನದಿಂದ ನಾಶವಾಗುವುದಿಲ್ಲ, ಆದರೆ ಅದರ ವೇಗ ಮಾತ್ರ ಖಂಡಿತವಾಗಿ ಕಡಿಮೆಯಾಗುತ್ತದೆ". ಇಲ್ಲಿ ಶ್ರೀಕೃಷ್ಣನ ಅಗಲಿಕೆಯ ನಂತರ ಅರ್ಜುನನಲ್ಲಿ ಬೆಳೆದ ಧ್ಯಾನ-ಭಕ್ತಿಯಿಂದಾಗಿ ಆತನ ಪ್ರರಾಬ್ಧಕರ್ಮದ ವೇಗ ತ್ರಾಸವಾಗುತ್ತದೆ.

ಗೀತಂ ಭಗವತಾ ಜ್ಞಾನಂ ಯತ್ತತ್ಸಂಗ್ರಾಮಮೂರ್ಧನಿ ।
ಕಾಲಕರ್ಮತಮೋರುದ್ಧಂ ಪುನರಧ್ಯಗಮದ್ ವಿಭುಃ ॥೨॥

ಭಗವದ್ಗೀತೆಯನ್ನು ನೇರವಾಗಿ ಭಗವಂತನಿಂದ ಪಡೆದಮೇಲೂ, ಅರ್ಜುನನ ಮನಸ್ಸಿನ ಮೇಲೆ ಒಂದು ಆವರಣ ಇತ್ತು. ಆತ ಗೀತೋಪದೇಶ ಪಡೆದದ್ದು ಯುದ್ಧರಂಗದಲ್ಲಿ. ಆನಂತರ ಸುಮಾರು ಮೂವತ್ತಾರು ವರ್ಷಗಳಲ್ಲಿ ಅನೇಕ

ಆಡಳಿತದ ಜವಾಬ್ದಾರಿ, ಶತ್ರುನಿಗ್ರಹದಂತಹ ಕರ್ಮಗಳ ನಡುವೆ, ಕಾಲಕ್ರಮೇಣ ಗೀತೆಯ ಜ್ಞಾನ ಆತನಲ್ಲಿ ಮುಸುಕಾಯಿತು. ಆತನ ಮನಸ್ಸಿನ ಮೇಲೆ ತಮೋಗುಣದ ಆವರಣ ಸೃಷ್ಟಿಯಾಯಿತು. ಆದರೆ ಆ ಜ್ಞಾನ ಇಂದು ಶ್ರೀಕೃಷ್ಣ ಅವತಾರ ಸಮಾಪ್ತಿ ಮಾಡಿದ ಮೇಲೆ, ಮತ್ತೆ ಜ್ವಲಂತವಾಗಿ ವ್ಯಕ್ತವಾಯಿತು. ಕೃಷ್ಣನನ್ನು ಕಳೆದುಕೊಂಡ ಅರ್ಜುನ- ಗೀತೆಯನ್ನು ಮರಳಿ ಪಡೆದ. ಆತನಲ್ಲಿ ಅಂತಹ ಸಾಮರ್ಥ್ಯ ಇದ್ದುದರಿಂದ ಇದು ಆತನಿಗೆ ಸಾಧ್ಯವಾಯಿತು.

ವಿಶೋಕೋ ಬ್ರಹ್ಮಸಂಪತ್ತ್ಯಾ ಸಂಛಿನ್ನದ್ವೈತಸಂಶಯಃ ।
ಲೀನಪ್ರಕೃತಿನೈರ್ಗುಣ್ಯಾದಲಿಂಗತ್ವಾದಸಂಭವಃ ॥೩॥

ಗೀತೆಯನ್ನು ನೇರವಾಗಿ ಶ್ರೀಕೃಷ್ಣನಿಂದ ಪಡೆದಮೇಲೂ, ಅರ್ಜುನನಿಗೆ ಪೂರ್ಣ ಜ್ಞಾನೋದಯವಾಗಿರಲಿಲ್ಲ ಎನ್ನುವುದಕ್ಕೆ ಉತ್ತಮ ಉದಾಹರಣೆ- ಅಭಿಮನ್ಯುವಿನ ಮರಣ. ಆಗ ಅರ್ಜುನ ಬಗೆಬಗೆಯಾಗಿ ರೋಧಿಸುತ್ತಾನೆ. ಶ್ರೀಕೃಷ್ಣ ಹುಟ್ಟು-ಸಾವಿನ ಬಗ್ಗೆ ಚಿಂತಿಸಬಾರದು ಎಂದು ಹೇಳಿದ್ದರೂ ಕೂಡಾ, ತನ್ನ ಮಗ ಸತ್ತಾಗ ಅದನ್ನು ಆತನಿಂದ ತಡೆದುಕೊಳ್ಳಲು ಸಾಧ್ಯವಾಗುವುದಿಲ್ಲ. "ನನ್ನ ಮಗನನ್ನು ಕೊಂದವರನ್ನು ಸೂರ್ಯಾಸ್ತವಾಗುವ ಮುಂಚೆ ಕೊಲ್ಲುತ್ತೇನೆ" ಎಂದು ಆವೇಶದಿಂದ ಪ್ರತಿಜ್ಞೆ ಮಾಡುತ್ತಾನೆ ಅರ್ಜುನ. ಆದರೆ ಇಂದು ಶ್ರೀಕೃಷ್ಣನನ್ನು ಕಳೆದುಕೊಂಡ ಅರ್ಜುನನಿಗೆ ಮರಳಿ ಗೀತೆಯ ನಿಜದರ್ಶನವಾಯಿತು. ಹೊರಗೆ ಭಗವಂತ ಕಣ್ಮರೆಯಾದರೂ ಕೂಡಾ, ಅರ್ಜುನ ಆತನನ್ನು ತನ್ನ ಅಂತರಂಗದಲ್ಲಿ ಪಡೆದ. ಆತನ ಬುದ್ಧಿಗೆ ಅಂಟಿದ್ದ ಮುಸುಕು ಇಂದು ಮಾಯವಾಗಿದೆ. ಆತ ಆನಂದಮಯ ಸ್ಥಿತಿಯನ್ನು ತಲುಪಿದ್ದಾನೆ.

ಅಂತರಂಗದಲ್ಲಿ ಭಗವಂತನನ್ನು ಕಾಣುತ್ತಿರುವ ಅರ್ಜುನನಿಗೆ ಭಗವಂತನನ್ನು ಬಿಟ್ಟು ಎರಡನೆಯದು ಯಾವುದೂ ಬೇಡವಾಗಿದೆ. ನಿಶ್ಚಯಾತ್ಮಕವಾದ ಯಥಾರ್ಥ ಜ್ಞಾನದಲ್ಲಿ ಆತ ಕುಳಿತುಬಿಟ್ಟಿದ್ದಾನೆ. ಭಗವಂತನನ್ನು ಬಿಟ್ಟು ಈ ಪ್ರಪಂಚ, ಈ ಬದುಕು, ಬಾಂಧವ್ಯ, ರಾಜ್ಯಾಡಳಿತ, ಯಾವುದೂ ಬೇಡ; ಭಗವಂತನ ಅಂತರಂಗದ ನೆನಪೊಂದೇ ಸಾಕು ಎನ್ನುವ ನಿಶ್ಚಯದಲ್ಲಿ, ಪೂರ್ಣ ಭಗವನ್ಮಯನಾದ ಅರ್ಜುನ. ಇದರಿಂದಾಗಿ ಆತನಲ್ಲಿದ್ದ ಮಾಯೆಯ ಪರದೆ ಹೊರಟುಹೋಯಿತು, ಪ್ರಕೃತಿ ಲೀನವಾಯಿತು. ಲಿಂಗಶರೀರದ ಪ್ರಭಾವವೂ ಇಲ್ಲದಾಗಿ, ಗುಣಾತೀತ ಸ್ಥಿತಿಯಲ್ಲಿ ಆತ ನಿಂತುಬಿಟ್ಟ. ಹೀಗೆ 'ಇನ್ನೆಂದೂ ಮರಳಿ ಪ್ರರಾಬ್ಧಕರ್ಮಕ್ಕೆ ವಶನಾಗುವುದು ಅಸಂಭವ' ಎನ್ನುವ ಸ್ಥಿತಿಯನ್ನು ಅರ್ಜುನ ಪಡೆದ.

ನಿಶಮ್ಯ ಭಗವನ್ಮಾರ್ಗಂ ಸಂಸ್ಥಾಂ ಯದುಕುಲಸ್ಯ ಚ ।
ಸ್ವಃಪಥಾಯ ಮತಿಂ ಚಕ್ರೇ ನಿವೃತ್ತಾತ್ಮಾ ಯುಧಿಷ್ಠಿರಃ ॥೪॥

ಶ್ರೀಕೃಷ್ಣನ ಅವತಾರ ಸಮಾಪ್ತಿ ವಿಚಾರ ಕೇಳಿ ಧರ್ಮರಾಯನಿಗೆ ಏನೆನಿಸಿತು ಎನ್ನುವುದನ್ನು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಯಾದವರು ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಸತ್ತ ವಿಚಾರವನ್ನು ಹಾಗೂ ಶ್ರೀಕೃಷ್ಣ ಅವತಾರ ಸಮಾಪ್ತಿ ಮಾಡಿದ ವಿಚಾರವನ್ನು ಅರ್ಜುನನಿಂದ ಕೇಳಿ ತಿಳಿದ ಧರ್ಮರಾಯ: "ತಾನೂ ಹೊರಟು ಹೋಗಬೇಕು, ಇನ್ನು ಈ ಭೂಮಿಯಲ್ಲಿ ರಾಜ್ಯಭಾರ ಮಾಡುವುದರಲ್ಲಿ ಅರ್ಥವಿಲ್ಲ" ಎಂದು ನಿರ್ಧರಿಸಿದ.

ಇಲ್ಲಿ ವಿಶೇಷ ಏನೆಂದರೆ: ಪಾಂಡವರು ಅನಾರೋಗ್ಯದ ಕಾರಣ ರಾಜ್ಯತ್ಯಾಗ ಮಾಡಿದುದಲ್ಲ; ವಾನಪ್ರಸ್ಥಾಶ್ರಮಮಕ್ಕೆ ಹೋದದ್ದೂ ಅಲ್ಲ. ಅವರು ಭೂಮಿಯಲ್ಲಿ ಇದ್ದದ್ದು ಸಾಕು, ಇನ್ನು ದೇಹತ್ಯಾಗ ಮಾಡಿ ಮೂಲರೂಪ ಸೇರಬೇಕೆಂದು ನಿರ್ಧಾರಮಾಡಿ, ಸ್ವರ್ಗದ ದಾರಿಯಲ್ಲಿ ಪಯಣ ಮಾಡುತ್ತಾರೆ.

ಧರ್ಮರಾಯನ ಮೂಲ ಸ್ವಭಾವವೇ ನಿವೃತ್ತಿಮಾರ್ಗವಾಗಿತ್ತು. ಯುದ್ಧದ ನಂತರ ಆತ "ನನಗೆ ಈ ಸಿಂಹಾಸನ ಬೇಡ, ಭೀಮ ಅಥವಾ ಅರ್ಜುನ ಸಿಂಹಾಸನವನ್ನೇರಲಿ, ನಾನು ಕಾಡಿಗೆ ಹೋಗಿ ತಪಸ್ಸು ಮಾಡುತ್ತೇನೆ" ಎಂದು ಕೇಳಿಕೊಂಡಿದ್ದ. ಆಗ ಶ್ರೀಕೃಷ್ಣ ಮತ್ತು ವೇದವ್ಯಾಸರು "ಇದು ನಿನ್ನ ಕರ್ತವ್ಯ, ನೀನು ರಾಜ್ಯಭಾರ ಮಾಡು" ಎಂದು ಸಲಹೆ ಕೊಟ್ಟಿದ್ದುದಕ್ಕಾಗಿ, ಮೂವತ್ತಾರು ವರ್ಷಗಳ ಕಾಲ ಯಶಸ್ವಿಯಾಗಿ ರಾಜ್ಯಭಾರ ಮಾಡಿದ ಧರ್ಮರಾಯ. ಈಗ ಶ್ರೀಕೃಷ್ಣ ಅವತಾರ ಸಮಾಪ್ತಿ ಮಾಡಿದ ವಿಚಾರ ಕೇಳಿ, ಆತನ ಮನಸ್ಸು ವಿಶೇಷವಾಗಿ ನಿವೃತ್ತಿ ಕಡೆಗೆ ಹರಿಯಿತು. "ಇನ್ನು ನಾನು ಭೂಮಿಯಲ್ಲಿರಬಾರದು, ಹೊರಟುಬಿಡಬೇಕು" ಎಂದು ಆತ ತೀರ್ಮಾನ ಮಾಡಿದ.

ಸ್ವರಾಟ್ ಪೌತ್ರಂ ವಿನೀತಂ ತಮಾತ್ಮನೋಽನವಮಂ ಗುಣೈಃ ।
ತೋಯನೀವ್ಯಾಃ ಪತಿಂ ಭೂಮೇರಭ್ಯಷಿಂಚದ್ ಗಜಾಹ್ವಯೇ ॥೭॥

ನಿವೃತ್ತಿ ಮಾರ್ಗದಲ್ಲಿ ಸಾಗಬೇಕೆಂದು ಅನಿಸಿದ ತಕ್ಷಣ ಕ್ಷತ್ರಿಯರು ಹೊರಟುಹೋಗುವಂತಿಲ್ಲ. ಏಕೆಂದರೆ ಅವರ ಮೇಲೆ ಸಿಂಹಾಸನದ ಜವಾಬ್ಧಾರಿ ಇರುತ್ತದೆ. ಹಾಗಾಗಿ ಅದನ್ನು ಒಬ್ಬ ಯೋಗ್ಯ ಉತ್ತರಾಧಿಕಾರಿಗೆ ಒಪ್ಪಿಸದೇ ಧರ್ಮರಾಯ ಹೊರಡುವಂತಿರಲಿಲ್ಲ. ನಮಗೆ ತಿಳಿದಂತೆ ಪಾಂಡವರ ಎಲ್ಲಾ ಮಕ್ಕಳೂ ಸಾವನ್ನಪ್ಪಿದ್ದು, ಅಲ್ಲಿ ಉಳಿದಿರುವ ಪಾಂಡವರ ಏಕಮಾತ್ರ ವಂಶದ ಕುಡಿ, ಅಭಿಮನ್ಯುವಿನ ಮಗನಾದ ಪರೀಕ್ಷಿತ.

ಮೂವತ್ತಾರು ವರ್ಷ ವಯಸ್ಸಿನ ಪರೀಕ್ಷಿತ ಶಸ್ತ್ರ-ಶಾಸ್ತ್ರ ಪಾರಂಗತನಾಗಿದ್ದು ಸಿಂಹಾಸನವನ್ನೇರಲು ಯೋಗ್ಯನಾಗಿದ್ದ. ಶ್ರೇಷ್ಠ ಪರಂಪರೆಯಲ್ಲಿ ಬೆಳೆದ ಪರೀಕ್ಷಿತ ತುಂಬಾ ವಿನಯಶೀಲನಾಗಿದ್ದ. ಸಜ್ಜನಿಕೆ ಮತ್ತು ಗುಣವಂತಿಕೆಯಲ್ಲಿ ತನಗಿಂತ ಪರೀಕ್ಷಿತ ಏನೂ ಕಮ್ಮಿ ಇಲ್ಲ(ಅಧಿಕ-ಉಪಮಾನ)ಎಂಬುದನ್ನು ಗುರುತಿಸಿದ ಧರ್ಮರಾಯ, ಆತನನ್ನು ಸಮುದ್ರವೇ ಸೀಮೆಯಾಗಿರುವ ಭೂಮಿಯ ಸಾಮ್ರಾಟನನ್ನಾಗಿ ಮಾಡಿ ಪಟ್ಟಾಭಿಷೇಕ ಮಾಡಿದ.

ಇಲ್ಲಿ ಹಸ್ತಿನಪುರವನ್ನು 'ಗಜಾಹ್ವಯ' ಎಂದು ಕರೆದಿದ್ದಾರೆ. ಪಾಂಡವರ ವಂಶಸ್ತನಾಗಿದ್ದ ಹಸ್ತಿ ಎನ್ನುವ ರಾಜನಿಂದ ನಿರ್ಮಾಣಗೊಂಡ ರಾಜಧಾನಿಗೆ ಹಸ್ತಿನಪುರ ಎನ್ನುವ ಹೆಸರು ಬಂತು. ಹಸ್ತಿ ಎಂದರೆ ಆನೆ. ಆನೆಯ ಹೆಸರಿನ ಪುರ-ಹಸ್ತಿನಪುರ ಅಥವಾ ಗಜಾಹ್ವಯ. [ಕೆಲವರು ಇದನ್ನು 'ಹಸ್ತಿನಾಪುರ' ಎಂದು ಸಂಬೋಧಿಸುತ್ತಾರೆ. ಆದರೆ ಅದು ಸರಿಯಲ್ಲ. ಏಕೆಂದರೆ ಅದು ಹಸ್ತಿನಃ-ಪುರಂ. ಅಂದರೆ: ಹಸ್ತಿ ಎನ್ನುವ ರಾಜನ ನಗರ. ಆದ್ದರಿಂದ ಹಸ್ತಿನಪುರ].

ಮಧುರಾಯಾಂ ತಥಾ ವಜ್ರಂ ಶೂರಸೇನಪತಿಂ ತತಃ ।
ಪ್ರಾಜಾಪತ್ಯಾಂ ನಿರೂಪ್ಯೇಷ್ಟಿಮಗ್ನೀನಪಿಬದೀಶ್ವರಃ ॥೮॥

ಕೇವಲ ಪರೀಕ್ಷಿತನಿಗೆ ಪಟ್ಟಾಭಿಷೇಕ ಮಾಡಿದರೆ ಮುಗಿದಿಲ್ಲ. ಆ ಕಾಲದಲ್ಲಿ ಅಲ್ಲಿ ಪ್ರಧಾನವಾಗಿ ಎರಡು ವಂಶಗಳಿದ್ದವು. ಅವುಗಳೆಂದರೆ ಯಯಾತಿರಾಜನಿಂದ ಚಂದ್ರವಂಶ ಎರಡು ಕವಲಾಗಿ ಬೆಳೆದು ಬಂದ ಯದುವಂಶ ಮತ್ತು ಕುರುವಂಶ. ಈ ಎರಡು ಕವಲುಗಳಲ್ಲಿ ಒಂದು ಕವಲಿಗೆ ಪರೀಕ್ಷಿತ ಉತ್ತರಾಧಿಕಾರಿಯಾದ. ಆದರೆ ಶ್ರೀಕೃಷ್ಣ ಯದುವಂಶದ

ಉತ್ತರಾಧಿಕಾರಿಯನ್ನು ನೇಮಿಸದೇ ಅವತಾರ ಸಮಾಪ್ತಿ ಮಾಡಿದುದರಿಂದ, ಯದುವಂಶವನ್ನು ಉಳಿಸುವ ಜವಾಬ್ದಾರಿ ಕೂಡಾ ಧರ್ಮರಾಯನ ಮೇಲಿತ್ತು. ನಮಗೆ ತಿಳಿದಂತೆ ಯಾದವರೆಲ್ಲರೂ ಹೊಡೆದಾಡಿಕೊಂಡು ಸತ್ತಿದ್ದಾರೆ. ಆದ್ದರಿಂದ ಅಳಿದುಳಿದವರಲ್ಲಿ ಒಬ್ಬ ಯೋಗ್ಯನನ್ನು ಧರ್ಮರಾಯ ಆರಿಸಿ ಪಟ್ಟಾಭಿಷೇಕ ಮಾಡಬೇಕಾಗಿತ್ತು. ಶ್ರೀಕೃಷ್ಣನ ಮಗ ಪ್ರದ್ಯುಮ್ನ, ಪ್ರದ್ಯುಮ್ನನ ಮಗ ಅನಿರುದ್ಧ. ಇವರಿಬ್ಬರೂ ಸತ್ತಿರುವುದರಿಂದ ಅಲ್ಲಿ ಉಳಿದಿದ್ದು ಅನಿರುದ್ಧನ ಮಗ ವಜ್ರ ಎನ್ನುವ ಬಾಲಕ. ಆತನೊಬ್ಬನೇ ಸಿಂಹಾಸನವೇರಲು ಯೋಗ್ಯ ಎನ್ನುವುದನ್ನು ಗುರುತಿಸಿದ ಧರ್ಮರಾಯ, ಮಧುರೆಯಲ್ಲಿ ವಜ್ರನನ್ನು ಯಾದವರ ಉತ್ತರಾಧಿಕಾರಿಯಾಗಿ ಪಟ್ಟಾಭಿಷೇಕ ಮಾಡುತ್ತಾನೆ. ಹೀಗೆ ಪರೀಕ್ಷಿತ ಮತ್ತು ವಜ್ರನನ್ನು ಸಿಂಹಾಸನದಲ್ಲಿ ಕೂರಿಸಿ ಧರ್ಮರಾಯ ಹೊರಡಲು ಅಣಿಯಾಗುತ್ತಾನೆ.

## ಪಾಂಡವರ ನಿರ್ಯಾಣ

**ವಾಚಂ ಜುಹಾವ ಮನಸಿ ತತ್ಪ್ರಾಣ ಇತರೇ ಪರಮ್ ।**
**ಧೃತ್ಯಾ ಹ್ಯಪಾನಂ ಸೋತ್ಸರ್ಗಂ ತತ್ಪರತ್ವೇ ಹ್ಯಜೋಹವೀತ್ ॥೧೦॥**

**ತ್ರಿತ್ವೇ ಹುತ್ವಾಽಥ ಪಂಚತ್ವಂ ತಚ್ಚೈಕತ್ವೇಽಜುಹೋನ್ಮುನಿಃ ।**
**ಸರ್ವಮಾತ್ಮನ್ಯಜುಹವೀದ್ ಬ್ರಹ್ಮಣ್ಯಾತ್ಮಾನಮವ್ಯಯೇ ॥೧೧॥**

ಹಿಂದೆ ಧೃತರಾಷ್ಟ್ರನ ನಿರ್ಯಾಣ ಕುರಿತು ವಿವರಿಸುವಾಗ ಒಂದು ವಿಧದ ಧ್ಯಾನ ಪ್ರಕ್ರಿಯೆಯ ವಿವರವನ್ನು ನಾವು ನೋಡಿದ್ದೇವೆ. ಇಲ್ಲಿ ಯುಧಿಷ್ಠಿರನ ಮುಖೇನ ಇನ್ನೊಂದು ಅಪೂರ್ವ ಧ್ಯಾನ ಪ್ರಕ್ರಿಯೆಯನ್ನು ಭಾಗವತ ವಿವರಿಸುತ್ತದೆ. ನಮ್ಮ ದೇಹ ಲಯಹೊಂದುವಾಗ ಹೇಗೆ ನಾವು ಲಯಚಿಂತನೆ ಮಾಡಬೇಕು ಎನ್ನುವುದನ್ನು ಇಲ್ಲಿ ಯುಧಿಷ್ಠಿರನ ಲಯಚಿಂತನೆಯಲ್ಲಿ ಕಾಣಬಹುದು. ಸಮುದ್ರದೊಳಗೆ ಮೀನುಗಳು ಸೇರಿಕೊಂಡಿರುವಂತೆ, ಕೆಳಗಿನ ಕಕ್ಷ್ಯೆಯ ದೇವತೆಗಳು ಮೇಲಿನ ಕಕ್ಷ್ಯೆಯ ದೇವತೆಗಳೊಂದಿಗೆ ಲಯಹೊಂದಿ, ಕೊನೆಗೆ ಚತುರ್ಮುಖನೊಳಗೆ ಸೇರಿಕೊಂಡು, ಭಗವಂತನಲ್ಲಿ ಲಯಹೊಂದುವುದನ್ನು ಲಯಚಿಂತನೆ ಎನ್ನುತ್ತಾರೆ.

ಯುಧಿಷ್ಠಿರ ತನ್ನ ಎಲ್ಲಾ ಬಾಹ್ಯೇನ್ದ್ರಿಯಗಳನ್ನು ಅಂತರ್ಮುಖಗೊಳಿಸಿದ. ಅಂದರೆ ಕಣ್ಣಿನ ದೇವತೆ ಸೂರ್ಯ(೧೨ ನೇ ಕಕ್ಷ್ಯೆ), ಕಿವಿಯ ದೇವತೆ ಚಂದ್ರ(೧೨ನೇ ಕಕ್ಷ್ಯೆ), ರಸೇನ್ದ್ರಿಯ ದೇವತೆ ವರುಣ(೧೩ನೇ ಕಕ್ಷ್ಯೆ), ತ್ವಗೇನ್ದ್ರಿಯ ದೇವತೆ ವಿತ್ತಪ(೧೮ನೇ ಕಕ್ಷ್ಯೆ), ಮೂಗಿನ ಅಭಿಮಾನಿ ದೇವತೆಗಳಾದ ಆಶ್ವೀದೇವತೆಗಳು(೧೮ನೇ ಕಕ್ಷ್ಯೆ), ವಾಗೀನ್ದ್ರಿಯ ದೇವತೆ ಅಗ್ನಿ(೧೫ನೇ ಕಕ್ಷ್ಯೆ), ಕಾಲಿನ ದೇವತೆ ಜಯಂತ(೧೯ನೇ ಕಕ್ಷ್ಯೆ). ಈ ಎಲ್ಲಾ ದೇವತೆಗಳನ್ನು ಕೈಯ ಅಭಿಮಾನಿ ದೇವತೆ, ಎಂಟನೇ ಕಕ್ಷ್ಯೆಯಲ್ಲಿರುವ ಇಂದ್ರನಲ್ಲಿ ಲಯಗೊಳಿಸಿ, ಸಮಸ್ತ ದೇವತೆಗಳನ್ನು ವಾಗ್ದೇವತೆ ಪಾರ್ವತಿಯಲ್ಲಿ (೭ನೇ ಕಕ್ಷ್ಯೆ) ಲಯಗೊಳಿಸಿದ. [ವಾಗ್ದೇವತೆಯಾಗಿ ಅತ್ಯಂತ ಎತ್ತರದ ಕಕ್ಷ್ಯೆಯಲ್ಲಿ ಸರಸ್ವತಿ-ಭಾರತಿಯರಿದ್ದಾರೆ. ಆದರೆ ಕೆಳಗಿನ ಕಕ್ಷ್ಯೆಯಲ್ಲಿ ಅಗ್ನಿ ಹಾಗೂ ನಂತರ ಪಾರ್ವತಿ ವಾಗ್ದೇವತೆಯರು. ಭಾಗವತದಲ್ಲಿ ಇಂದ್ರಿಯಾಭಿಮಾನಿ ದೇವತೆಗಳು ವಾಗ್ದೇವತೆಯಲ್ಲಿ ಲಯ ಹೊಂದುವುದನ್ನು ಬಿಡಿಸಿ ಹೇಳಿಲ್ಲ. ಇಲ್ಲಿ ವಾಗ್ದೇವತೆ ಪಾರ್ವತಿ, ಮನಸ್ಸಿನ ದೇವತೆ ಶಿವನಲ್ಲಿ ಲಯ ಹೊಂದುತ್ತಾಳೆ ಎನ್ನುವಲ್ಲಿಂದ ಲಯ ಚಿಂತನೆಯ ವಿವರಣೆ ನೀಡಿದ್ದಾರೆ].

ಯುಧಿಷ್ಠಿರ ಮಾತನ್ನು(ಪಾರ್ವತಿಯನ್ನು) ಮನಸ್ಸಿನಲ್ಲಿ(ಶಿವನಲ್ಲಿ) ಲಯಗೊಳಿಸಿರುವುದರಿಂದ, ಮಾತಿಲ್ಲದೆ ಪೂರ್ಣ ಮನನದಲ್ಲಿ ಕುಳಿತುಬಿಟ್ಟ. ಮನೋಭಿಮಾನಿಯಾದ ಶಿವನಿಂದಾಚೆಗೆ ಮುಖ್ಯಪ್ರಾಣದೇವರ ಸಾಕ್ಷಾತ್ ಐದು ರೂಪಗಳಿವೆ. ಅವುಗಳೆಂದರೆ: ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ. ಇಲ್ಲಿ ಧರ್ಮರಾಯ ಪ್ರಾಣಶಕ್ತಿಯಲ್ಲಿ ಮನಸ್ಸನ್ನು(ಶಿವನನ್ನು) ಲಯಗೊಳಿಸಿದ. ನಂತರ ಪ್ರಾಣನನ್ನು ಅಪಾನದಲ್ಲಿ ಲಯಗೊಳಿಸಿ, ಶ್ವಾಸೋಚ್ಛ್ವಾಸವನ್ನು ಸ್ಥಬ್ಧಗೊಳಿಸಿದ. ಇದರ ನಂತರದ ಧ್ಯಾನದ ಪ್ರಕ್ರಿಯೆ ತುಂಬಾ ಕಷ್ಟಕರವಾದುದು. ಅದೇನೆಂದರೆ ಪ್ರಾಣಾಪಾನರನ್ನು ವ್ಯಾನನಲ್ಲಿ ಲಯಗೊಳಿಸುವುದು. ಇದು ದೇಹದಲ್ಲಿನ ಸಂಪೂರ್ಣ ಪ್ರಾಣಕ್ರಿಯೆಯನ್ನು ನಿಲ್ಲಿಸಿ ಕುಂಭಕದಲ್ಲಿ ನಿಲ್ಲುವ ಸ್ಥಿತಿ. ಧರ್ಮರಾಯ ಪ್ರಾಣ-ಅಪಾನ-ವ್ಯಾನ ಈ ಮೂರರ ಸಮಷ್ಟಿಯನ್ನು ಉದಾನ ಮತ್ತು ಸಮಾನರಲ್ಲಿ ಲಯಗೊಳಿಸಿದ. ಹೀಗೆ ಪ್ರಾಣದೇವರ ಪಂಚರೂಪಗಳನ್ನು ಒಂದರೊಳಗೊಂದು ಆವಿರ್ಭಾವಗೊಳಿಸಿ, ಅದನ್ನು ಅಖಂಡನಾದ ಮುಖ್ಯಪ್ರಾಣದೇವರಲ್ಲಿ ಲಯಗೊಳಿಸಿದ ಯುಧಿಷ್ಠಿರ. ಇಂತಹ ಸ್ಥಿತಿಯಲ್ಲಿ ಮುಖ್ಯಪ್ರಾಣನನ್ನು ಹೃದಯದಲ್ಲಿರುವ ಆತ್ಮನಾಮಕ ಭಗವಂತನಲ್ಲಿ ಹೋಮಿಸಿ, "ನನ್ನ ಬಿಂಬರೂಪದಲ್ಲಿರುವ ಭಗವಂತನೇ ಇಡೀ ವಿಶ್ವದಲ್ಲಿ ತುಂಬಿರುವ ಭಗವಂತ" ಎಂದು ಸರ್ವಗತನಾದ ಭಗವಂತನಲ್ಲಿ ಅಂತರ್ಯಾಮಿಯಾದ ಭಗವಂತನನ್ನು ಹೋಮಿಸಿದ ಧರ್ಮರಾಜ.

**ಉದೀಚೀಂ ಪ್ರವಿವೇಶಾಶಾಂ ಗತಪೂರ್ವಾಂ ಮಹಾತ್ಮಭಿಃ ।**
**ಹೃದಿ ಬ್ರಹ್ಮ ಪರಂ ಧ್ಯಾಯನ್ ನಾವರ್ತೇತ ಗತೋ ಯತಃ ॥೧೩॥**

ಹೀಗೆ ವಿಶ್ವದಲ್ಲಿ ತುಂಬಿರುವ ಅಖಂಡವಾದ ಶಕ್ತಿಯೇ ಬಿಂಬರೂಪನಾಗಿ ತನ್ನೊಳಗೂ ತುಂಬಿದ್ದಾನೆ ಎಂದು ಚಿಂತನೆ ಮಾಡಿ, ಉತ್ತರಾಭಿಮುಖವಾಗಿ; ಯಾವ ದಾರಿಯಲ್ಲಿ ಹೋದರೆ ಮತ್ತೆ ಮರಳಿ ಬರುವ ಸಂಭವ ಇಲ್ಲವೋ, ಅಂತಹ ದಾರಿಯಲ್ಲಿ ಪರಬ್ರಹ್ಮನನ್ನು ಧ್ಯಾನಿಸುತ್ತಾ ಸಾಗಿದ ಯುಧಿಷ್ಠಿರ.
"ಇಲ್ಲಿ ಯಾವ ಮಾರ್ಗದಲ್ಲಿ ಸಾಗಿದರೆ ಮರಳಿ ಬರುವ ಸಂಭವ ಇಲ್ಲವೋ ಆ ಮಾರ್ಗದಲ್ಲಿ ಸಾಗಿದ" ಎಂದರೆ 'ಅವರು ಸಾಗಿದ ಮಾರ್ಗ ಮೋಕ್ಷ ಮಾರ್ಗ' ಎಂದರ್ಥವಲ್ಲ. ಇದು ದೇಹತ್ಯಾಗದ ಒಂದು ವಿಧಾನ ಅಷ್ಟೇ. ಆಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ಹೇಳುವಂತೆ: "ನಾವರ್ತೇತ ವೀರಗತಿಮ್". ಅಂದರೆ: ಎಂತಹ ಪ್ರಸಂಗ ಬಂದರೂ ಮತ್ತೆ ಮರಳಿ ಬರುವ ಪ್ರಶ್ನೆಯೇ ಇಲ್ಲ ಎಂದು ನಿರ್ಧರಿಸಿ, ದೇಹ ಬಿದ್ದುಹೋಗುವ ತನಕ ಸಾಗುವ 'ವೀರಗತಿ'.

**ತೇ ಸಾಧುಕೃತಸರ್ವಾರ್ಥಾ ಜ್ಞಾತ್ವಾSSತ್ಯಂತಿಕಮಾತ್ಮನಃ ।**
**ಮನಸಾ ಧಾರಯಾಮಾಸುರ್ವೈಕುಂಠಚರಣಾಂಬುಜಮ್ ॥೧೫॥**

ಧರ್ಮರಾಯನೊಂದಿಗೆ ದ್ರೌಪದಿ ಮತ್ತು ಇತರ ಪಾಂಡವರು "ತಾವು ಇನ್ನು ಭೂಮಿಯಲ್ಲಿ ಇರುವುದು ತರವಲ್ಲ" ಎಂದು ತೀರ್ಮಾನ ಮಾಡಿ, ಭಗವಂತನನ್ನು ಹೃದಯದಲ್ಲಿ ಹೊತ್ತು, ಉತ್ತರಾಭಿಮುಖವಾಗಿ ಹೊರಡುತ್ತಾರೆ. ತಮ್ಮ ಜೀವಿತ ಕಾಲದಲ್ಲಿ ಭೂಮಿಯಲ್ಲಿದ್ದು ಏನನ್ನು ಮಾಡಬೇಕಿತ್ತೋ ಅದೆಲ್ಲವನ್ನೂ ಮಾಡಿ, ಮನಸ್ಸಿನಲ್ಲಿ ಯಾವ ನೆನಪನ್ನೂ ಹೊತ್ತುಕೊಳ್ಳದೇ, ಮನಸ್ಸನ್ನು ಭಗವಂತನಲ್ಲಿ ನೆಟ್ಟು, ಭಗವನ್ಮಯರಾಗಿ ಸಾಗುತ್ತಾರೆ ಪಾಂಡವರು.

ಇಲ್ಲಿನ ಮುಂದಿನ ಕಥಾಭಾಗ ಸ್ವರ್ಗಾರೋಹಣಪರ್ವ. ಆ ಕಥೆ ಮಹಾಭಾರತದಲ್ಲಿ ವಿವರವಾಗಿ ಬರುತ್ತದೆ. ಉತ್ತರಾಭಿಮುಖವಾಗಿ ಸಾಗುತ್ತಿರುವಾಗ ದ್ರೌಪದಿ, ನಕುಲ-ಸಹದೇವ, ಅರ್ಜುನ, ಭೀಮ ಎಲ್ಲರೂ ತಮ್ಮ ದೇಹತ್ಯಾಗ ಮಾಡಿ ಅವತಾರ ಸಮಾಪ್ತಿ ಮಾಡುತ್ತಾರೆ. ಧರ್ಮರಾಯನನ್ನು ನಾಯಿ ರೂಪದಲ್ಲಿ ಯಮ ಹಿಂಬಾಲಿಸಿ ಪರೀಕ್ಷಿಸುತ್ತಾನೆ. ಪರೀಕ್ಷೆಯಲ್ಲಿ ಗೆದ್ದ ಯುಧಿಷ್ಠಿರ ದೇಹ ಸಮೇತನಾಗಿ ಸ್ವರ್ಗವನ್ನು ಸೇರುತ್ತಾನೆ. ಹೀಗೆ ಪಾಂಡವರ ನಿರ್ಯಾಣವನ್ನು ವಿವರಿಸುವುದರೊಂದಿಗೆ ಈ ಅಧ್ಯಾಯ ಕೊನೆಗೊಳ್ಳುತ್ತದೆ.

॥ **ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಪಂಚದಶೋಽಧ್ಯಾಯಃ** ॥

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹದಿನೈದನೇ ಅಧ್ಯಾಯ ಮುಗಿಯಿತು.

*********

# ಷೋಡಶೋಽಧ್ಯಾಯಃ

## ಪರೀಕ್ಷಿತನ ಆಡಳಿತ

**ಸೂತ ಉವಾಚ--**

ತತಃ ಪರೀಕ್ಷಿದ್ದ್ವಿಜವರ್ಯಶಿಕ್ಷಯಾ ಮಹೀಂ ಮಹಾಭಾಗವತಃ ಶಶಾಸ ಹ ।
ಯಥಾ ಹಿ ಸೂತ್ಯಾಮಭಿಜಾತಕೋವಿದಾಃ ಸಮಾದಿಶನ್ವಿಪ್ರ ಮಹದ್ಗುಣಸ್ತಥಾ ॥೧॥

ಸ ಉತ್ತರಸ್ಯ ತನಯಾಮುಪಯೇಮ ಇರಾವತೀಮ್ ।
ಜನಮೇಜಯಾದೀಂಶ್ಚತುರಸ್ತಸ್ಯಾಮುತ್ಪಾದಯತ್ ಸುತಾನ್ ॥೨॥

ಆಜಹಾರಾಶ್ವಮೇಧಾಂಸ್ತ್ರೀನ್ ಗಂಗಾಯಾಂ ಭೂರಿದಕ್ಷಿಣಾನ್ ।
ಶಾರದ್ವತಂ ಗುರುಂ ಕೃತ್ವಾ ದೇವಾ ಯತ್ರಾಕ್ಷಿಗೋಚರಾಃ ॥೩॥

ಪಾಂಡವರ ನಂತರ ಪರೀಕ್ಷಿತ, ರಾಜ್ಯಭಾರದ ಹೊಣೆ ಹೊತ್ತ. ಉತ್ತರನ ಮಗಳಾದ ಇರಾವತಿಯನ್ನು ಮದುವೆಯಾದ ಆತನಿಗೆ, ಜನಮೇಜಯ ಮುಂತಾದ ನಾಲ್ವರು ಮಕ್ಕಳಿದ್ದರು. ಕೃಪಾಚಾರ್ಯರನ್ನು ತನ್ನ ಗುರುವಾಗಿ ಪಡೆದ ಪರೀಕ್ಷಿತ, ತನ್ನ ಆಡಳಿತ ಕಾಲದಲ್ಲಿ ಮೂರು ಅಶ್ವಮೇಧಯಾಗವನ್ನು ಮಾಡಿ, ಉತ್ತಮ ರಾಜ್ಯಾಡಳಿತ ನೀಡಿದ.

ನಿಜಗ್ರಾಹೌಜಸಾ ಧೀರಃ ಕಲಿಂ ದಿಗ್ವಿಜಯೇ ಕ್ವಚಿತ್ ।
ನೃಪಲಿಂಗಧರಂ ಶೂದ್ರಂ ಘ್ನಂತಂ ಗೋಮಿಥುನಂ ಪದಾ ॥೪॥

ಪರೀಕ್ಷಿತ ಜ್ಞಾನದ ಮಾರ್ಗದಲ್ಲಿ ರಥನೂ(ಧೀರ) ಹಾಗೂ ಧೈರ್ಯಶಾಲಿಯೂ ಆಗಿದ್ದ. ಅಜ್ಞಾನದ ಅಧಿಕಾರವನ್ನು ಜನರ ಮೇಲೆ ಹೇರ ಬಯಸುವವರನ್ನು ನಿಗ್ರಹ ಮಾಡುವ ಆತ್ಮವಿಶ್ವಾಸ ಮತ್ತು ಶತ್ರುಗಳನ್ನು ಮಣಿಸುವ ಶಕ್ತಿ(ಓಜಸ್ಸು) ಪರೀಕ್ಷಿತನಲ್ಲಿತ್ತು. ಆತ ಒಮ್ಮೆ ದಿಗ್ವಿಜಯ ಮಾಡುತ್ತಿದ್ದಾಗ, 'ಕ್ಷತ್ರಿಯವೇಷ ಧರಿಸಿದ, ಶೂದ್ರ'ನಂತೆ ಕಾಣುತ್ತಿದ್ದ 'ಕಲಿ', ಒಂದು ಎತ್ತು ಮತ್ತು ಒಂದು ದನವನ್ನು ತನ್ನ ಕಾಲಿನಿಂದ ಒದೆದು ಹಿಂಸಿಸುತ್ತಿರುವ ದೃಶ್ಯವನ್ನು ಕಾಣುತ್ತಾನೆ. ತನ್ನ ಆತ್ಮವಿಶ್ವಾಸ ಮತ್ತು ಶೌರ್ಯದಿಂದ ಪರೀಕ್ಷಿತ ಕಲಿಯೊಂದಿಗೆ ಹೋರಾಡಿ ಆತನನ್ನು ಗೆಲ್ಲುತ್ತಾನೆ. ಪರೀಕ್ಷಿತನಿಗೆ ಕಲಿಯನ್ನು ನಿಗ್ರಹಮಾಡುವ ಶಕ್ತಿ ಬರಲು ಕಾರಣ ಭಗವಂತನ ಅನುಗ್ರಹ. ಹಿಂದೊಮ್ಮೆ ಭೀಮಸೇನ ಕಲಿಯನ್ನು ನಿಗ್ರಹ ಮಾಡಿದ್ದಾಗ, ಶ್ರೀಕೃಷ್ಣ ಕಲಿಗೆ ಒಂದು ಮಾತನ್ನು ಹೇಳಿದ್ದ: "ನಾನು ಮತ್ತು ಪಾಂಡವರು ಭೂಮಿಯಲ್ಲಿ ಇರುವ ತನಕ ಇಲ್ಲಿ ನಿನ್ನ ಪ್ರಭಾವ ತೋರಬೇಡ; ಅಷ್ಟೇ ಅಲ್ಲ, ಪಾಂಡವರ ಸಂತತಿ ಈ ದೇಶವನ್ನಾಳುವ ತನಕ ನಿನಗೆ ಈ ಭೂಮಿಯಲ್ಲಿ ಪೂರ್ಣಪ್ರಮಾಣದ ಅಧಿಕಾರವಿಲ್ಲ" ಎಂದು. ಹೀಗೆ ಶ್ರೀಕೃಷ್ಣನ ಅನುಗ್ರಹಕ್ಕೆ ಪಾತ್ರನಾದ ಧೀರ ಪರೀಕ್ಷಿತ ಕಲಿಯನ್ನು ನಿಗ್ರಹಿಸಿದ.

ಇಲ್ಲಿ ಕಲಿ ಪರೀಕ್ಷಿತನಿಗೆ ಕಾಣಿಸಿರುವುದು 'ಕ್ಷತ್ರಿಯವೇಷ ಧರಿಸಿದ ಶೂದ್ರ'ನಂತೆ. ಇದು ಕಲಿಯುಗದ ಚಿತ್ರಣ. "ಕಲಿಯುಗದಲ್ಲಿ ಒಬ್ಬ ಯೋಗ್ಯ ಕ್ಷತ್ರೀಯ ರಾಜ್ಯಭಾರ ಮಾಡುವುದಿಲ್ಲ; ಬದಲಿಗೆ ಕ್ಷತ್ರೀಯ ವೇಷ ತೊಟ್ಟವರು, ಆಡಳಿತ ಸ್ವಭಾವವೇ ಇಲ್ಲದವರು ಆಡಳಿತ ಚುಕ್ಕಾಣಿ ಹಿಡಿಯುತ್ತಾರೆ" ಎನ್ನುವುದನ್ನು ಕಲಿಯ ಈ ರೂಪ ಸೂಚಿಸುತ್ತದೆ.

ಇಲ್ಲಿ 'ಶೂದ್ರ' ಎನ್ನುವುದು ಜಾತಿಯನ್ನು ಹೇಳುವ ಪದವಲ್ಲ. ಇದು 'ವರ್ಣ'ವನ್ನು ಸೂಚಿಸುತ್ತದೆ. ವರ್ಣಗಳು ನಾಲ್ಕು. ಅವುಗಳೆಂದರೆ ಬ್ರಾಹ್ಮಣ(ಅಧ್ಯಯನ ಮತ್ತು ಅಧ್ಯಾಪನ ಸ್ವಭಾವವುಳ್ಳ ಜನ), ಕ್ಷತ್ರೀಯ(ಆಡಳಿತ ಸ್ವಭಾವವುಳ್ಳ ಜನ), ವೈಶ್ಯ(ಕೃಷಿ, ಹೈನುಗಾರಿಕೆ, ವ್ಯಾಪಾರ ಸ್ವಭಾವವುಳ್ಳ ಜನ) ಮತ್ತು ಶೂದ್ರ(ಸೇವಾ ಸ್ವಭಾವವುಳ್ಳ ಜನ). ಈ ನಾಲ್ಕು ವರ್ಣದ ಜನರನ್ನು ಪ್ರಪಂಚದ ಎಲ್ಲಾ ಭಾಗದಲ್ಲೂ ಕಾಣಬಹುದು ಮತ್ತು ಈ ನಾಲ್ಕೂ ವರ್ಣದವರು ಮೋಕ್ಷ ಯೋಗ್ಯರು. ಆದರೆ ಆಯಾ ವರ್ಣದವರು ತಮ್ಮ ಸ್ವಭಾವಕ್ಕನುಗುಣವಾದ ಕಸುಬನ್ನು ಮಾಡದೇ, ಇನ್ನೊಂದು ಸ್ವಭಾವದ ವೇಷ ಹಾಕಿಕೊಂಡು ಬದುಕಿದರೆ ಅದು ಅನರ್ಥ.

ಇಲ್ಲಿ ಹೇಳಿದ ಎತ್ತು ಧರ್ಮವನ್ನು ಸೂಚಿಸುತ್ತದೆ ಮತ್ತು ದನ ಭೂಮಿಯನ್ನು ಸೂಚಿಸುತ್ತದೆ. ಇವೆರಡನ್ನೂ ಕಲಿ ಒದೆಯುತ್ತಿದ್ದಾನೆ. ಇದು ಕಲಿಯುಗದಲ್ಲಾಗುವ ಅವ್ಯವಸ್ಥೆಯನ್ನು ಸೂಚಿಸುತ್ತದೆ. 'ಅಯೋಗ್ಯ' ಅಧಿಕಾರದಲ್ಲಿ ಕುಳಿತು ದೇಶವನ್ನಾಳುತ್ತಾನೆ; ಮನುಷ್ಯ ಭೂಮಿಗೆ ಭಾರವಾಗಿ ಧರ್ಮವನ್ನು ತುಳಿದು ಅಧರ್ಮಿಯಾಗಿ ಬದುಕುತ್ತಾನೆ.

ಇಲ್ಲಿ ಉಗ್ರಶ್ರವಸ್ಸರು ಶೌನಕಾದಿಗಳಿಗೆ ಪರೀಕ್ಷಿತನ ರಾಜ್ಯಾಡಳಿತದ ಕುರಿತು ವಿವರಿಸುತ್ತಾ ಹೇಳುತ್ತಾರೆ: "ಈ ರೀತಿ ಕೆಟ್ಟ ಪ್ರಭಾವ ಬೀರಬಲ್ಲ ಕಲಿಯನ್ನು ಗೆದ್ದು, ಕಲಿಯ ಪ್ರಭಾವ ತನ್ನ ರಾಜ್ಯದಲ್ಲಾಗದಂತೆ ತಡೆದು, ಸುಮಾರು ಮೂವತ್ತು ವರ್ಷಗಳ ಕಾಲ ಧಾರ್ಮಿಕವಾಗಿ ಆಡಳಿತ ನಡೆಸಿದ ಪರೀಕ್ಷಿತ" ಎಂದು.

**ಶೌನಕ ಉವಾಚ--**

**ಕಸ್ಯ ಹೇತೋರ್ನಿಜಗ್ರಾಹ ಕಲಿಂ ದಿಗ್ವಿಜಯೇ ನೃಪಃ ।**
**ನೃದೇವಚಿಹ್ನಧೃಕ್ ಶೂದ್ರಃ ಕೋSಸೌ ಗಾಂ ಯಃ ಪದಾSಹನತ್ ॥೫॥**

"ಪರೀಕ್ಷಿತರಾಜ ಕಲಿಯನ್ನು ದಿಗ್ವಿಜಯ ಕಾಲದಲ್ಲಿ ಗೆದ್ದ" ಎನ್ನುವ ವಿಷಯವನ್ನು ಉಗ್ರಶ್ರವಸ್ಸರಿಂದ ಕೇಳಿದ ಶೌನಕರು: "ಹೇಗೆ ಕಲಿ ಮತ್ತು ಪರೀಕ್ಷಿತರಾಜ ಒಬ್ಬರನ್ನೊಬ್ಬರು ಭೇಟಿಯಾಗುವ ಪ್ರಸಂಗ ಬಂತು? ಕಲಿಯನ್ನು ದಿಗ್ವಿಜಯ ಕಾಲದಲ್ಲಿ ಪರೀಕ್ಷಿತ ಗೆಲ್ಲುವ ಪ್ರಸಂಗ ಯಾವಾಗ ಬಂತು? ಎಂದು ಪ್ರಶ್ನಿಸುತ್ತಾರೆ.

ಇಲ್ಲಿ "**ನೃದೇವಚಿಹ್ನಧೃಕ್ ಶೂದ್ರಃ ಕೋSಸೌ**" ಎನ್ನುವಲ್ಲಿ "ಅವನು ಯಾರು?" ಎಂದು ಪ್ರಶ್ನಿಸಿದಂತೆ ಕಾಣುತ್ತದೆ. ಆದರೆ ಹಿಂದಿನ ಶ್ಲೋಕದಲ್ಲೇ "ಹಸುವನ್ನು ತುಳಿಯುತ್ತಿದ್ದ ಕಲಿಯನ್ನು ಪರೀಕ್ಷಿತ ಗೆದ್ದ" ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಮತ್ತೆ "ಯಾರವನು" ಎನ್ನುವ ಪ್ರಶ್ನೆ ಇಲ್ಲಿ ಕೂಡುವುದಿಲ್ಲ. **ಕೋSಸಾ ವಿತ್ಯಾಕ್ಷೇಪಃ । ಕಲಿಮಿತ್ಯುಕ್ತತ್ವಾತ್ ।** ಇಲ್ಲಿ "ಯಾರವನು" ಎನ್ನುವುದು ಆಕ್ಷೇಪ ವಾಚಕ. ಹಸುವನ್ನು ತುಳಿಯಲು ಅವನ್ಯಾರು? ಅವನಿಗೆಷ್ಟು ಧೈರ್ಯ? ಎನ್ನುವ ತಿರಸ್ಕಾರ ವಾಚಕ ಪ್ರಶ್ನೆ ಇದಾಗಿದೆ.

**ತತ್ಕ ಕಥ್ಯತಾಂ ಮಹಾಭಾಗ ಯದಿ ವಿಷ್ಣುಕಥಾಶ್ರಯಮ್ ।**
**ಅಥವಾSಸ್ಯ ಪದಾಂಭೋಜ ಮಕರಂದಲಿಹಾಂ ಸತಾಮ್ ॥೬॥**

"ಕಲಿ ಏಕೆ ಹಾಗೆ ಮಾಡಿದ? ಕಲಿಗೂ ಪರೀಕ್ಷಿತನಿಗೂ ಯುದ್ಧವಾಗುವ ಮುನ್ನ ಏನಾಯ್ತು ಎನ್ನುವುದನ್ನು ವಿವರಿಸಿ" ಎಂದು ಶೌನಕರು ಸೂತರಲ್ಲಿ ಕೇಳುತ್ತಾರೆ. ಇಲ್ಲಿ ಶೌನಕರು ಹೇಳುತ್ತಾರೆ: ಈ ವಿಷಯ ಭಗವಂತನ ಮಹಾತ್ಮ್ಯವನ್ನು ಅಭಿವ್ಯಕ್ತಗೊಳಿಸುವ ಕಥೆಯಾಗಿದ್ದರೆ ಅಥವಾ ಭಗವಂತನ ಪಾದವೆಂಬ ತಾವರೆಯ ಮದುರಸವನ್ನು ಹೀರುವ ಸಜ್ಜನರ ಕಥೆಯಾಗಿದ್ದರೆ ಮಾತ್ರ ವಿವರಿಸಿ. ಇಲ್ಲದಿದ್ದರೆ ಬೇಡ" ಎಂದು. ಏಕೆಂದರೆ ಯಾವುದಕ್ಕೂ ಉಪಯೋಗವಿಲ್ಲದ ವಿಷಯ ಮಾತನ್ನಾಡುವುದರಲ್ಲಿ ಯಾವುದೇ ಅರ್ಥವಿಲ್ಲ. ಆದರೆ ಬದುಕಿನ ಒಂದೊಂದು ಕ್ಷಣವನ್ನೂ ಸಾರ್ಥಕಗೊಳಿಸುವ ಭಗವಂತನ ವಿಷಯವನ್ನು ಎಂದೂ ಬಿಡದೇ ಕೇಳಬೇಕು.

> ಕಿಮನ್ಯೈರಸದಾಲಾಪೈರಾಯುಷೋ ಯದಸದ್ ವ್ಯಯಃ ।
> ಕ್ಷುದ್ರಾಯುಷಾಂ ನೃಣಾಮಂಗ ಮರ್ತ್ಯಾನಾಮೃತಮಿಚ್ಛತಾಮ್ ॥೭॥

> ಇಹೋಪಹೂತೋ ಭಗವಾನ್ ಮೃತ್ಯುಃ ಶಾಮಿತ್ರಕರ್ಮಣಿ ।
> ನ ಕಶ್ಚಿನ್ ಮ್ರಿಯತೇ ತಾವದ್ ಯಾವದಾಸ್ತ ಇಹಾಂತಕಃ ॥೮॥

> ಏತದರ್ಥಂ ಹಿ ಭಗವಾನಾಹೂತಃ ಪರಮರ್ಷಿಭಿಃ ।
> ಅಹೋ ನೃಲೋಕೇ ಪೀಯೇತ ಹರಿಲೀಲಾಮೃತಂ ವಚಃ ॥೯॥

ಇಲ್ಲಿ ಶೌನಕರು ಹೇಳುತ್ತಾರೆ: "ಇಲ್ಲಿ ಪ್ರವಚನ ನಡೆಯುವಾಗ ಯಾರಿಗೂ ಮೃತ್ಯುವಿನ ಆತಂಕವಿಲ್ಲ. ಆದ್ದರಿಂದ ನೀವು ಯಾವುದೇ ಅವಸರವಿಲ್ಲದೆ ವಿವರವಾಗಿ ಎಲ್ಲವನ್ನೂ ಹೇಳಿ" ಎಂದು. ಶೌನಕರ ಈ ಮಾತಿನ ಹಿಂದೆ ಒಂದು ಹಿನ್ನೆಲೆ ಇದೆ. ನಮಗೆ ತಿಳಿದಂತೆ ಈ ಸಂಭಾಷಣೆ ನಡೆಯುತ್ತಿರುವುದು ನೈಮಿಶಾರಣ್ಯದಲ್ಲಿ. ಅಲ್ಲಿ ನಿತ್ಯ ಪ್ರವಚನ ನಡೆಯುತ್ತಿತ್ತು. ಆ ಕಾಲದಲ್ಲಿ ಅಲ್ಲಿನ ಋಷಿಗಳು ಭಗವಂತನ ಗುಣಗಾನ ನಡೆಯುವಾಗ ಯಾರೂ ಸಾಯಬಾರದು ಎಂದು ಮೃತ್ಯುದೇವತೆಯನ್ನು ಪ್ರಾರ್ಥಿಸಿ, ಆಹ್ವಾನ ಮಾಡಿ, ಪ್ರತಿಷ್ಠಾಪನೆ ಮಾಡಿದ್ದರು. ಇಲ್ಲಿ ಮೃತ್ಯುದೇವತೆ ಎಂದರೆ ಯಮನಲ್ಲ. ಯಮನ ಅಂತರ್ಗತ ಶಿವ, ಶಿವನ ಅಂತರ್ಗತನಾದ-ನರಸಿಂಹ ಮೃತ್ಯುದೇವತೆ. ಎಲ್ಲಾ ಮಹರ್ಷಿಗಳು ತಮ್ಮ ತಪಃಶಕ್ತಿಯನ್ನು ಧಾರೆಯೆರೆದು ನರಸಿಂಹನನ್ನು ಆಹ್ವಾನ ಮಾಡಿ ಅಲ್ಲಿ ಪ್ರತಿಷ್ಠಾಪನೆ ಮಾಡಿದ್ದರು.

ಅಸ್ಥಿರವೂ ಕ್ಷಣಿಕವೂ ಆದ ಈ ಮನುಷ್ಯಲೋಕದಲ್ಲಿ ಕೂಡಾ ಭಗವಂತನ ಗುಣಗಾನ ಎನ್ನುವ ಅಮೃತವನ್ನು ಜನ ಬಯಸಿದಷ್ಟು ಕಾಲ ಸವಿಯಬೇಕು. ಕಲಿಯುಗದಲ್ಲಿ ಕೂಡಾ ಹರಿನಾಮ ವರ್ಚಸ್ಸು ಉಳಿಯಬೇಕು ಎನ್ನುವುದಕ್ಕಾಗಿ ಶೌನಕರು ನರಸಿಂಹನನ್ನು ಪ್ರಾರ್ಥಿಸಿ, ಅವನನ್ನು ಅಲ್ಲಿ ಪ್ರತಿಷ್ಠಾಪನೆ ಮಾಡಿದ್ದರು. "ಆದ್ದರಿಂದ ಇಲ್ಲಿ ಪ್ರವಚನ ನಡೆಯುವಾಗ ಯಾರೂ ಸಾಯುವುದಿಲ್ಲ, ನೀವು ಎಲ್ಲವನ್ನೂ ಅವಸರವಿಲ್ಲದೆ ವಿವರವಾಗಿ ವಿವರಿಸಿ" ಎಂದು ಕೇಳಿಕೊಳ್ಳುತ್ತಾರೆ ಶೌನಕರು.

ಶೌನಕರ ಕೋರಿಕೆಯಂತೆ ಉಗ್ರಶ್ರವಸ್ಸರು ಪರೀಕ್ಷಿತ ರಾಜನ ಕಥೆಯನ್ನು ವಿವರಿಸುತ್ತಾರೆ. ಪರೀಕ್ಷಿತರಾಜ ತಾನು ಅಧಿಕಾರಕ್ಕೆ ಬಂದ ಮೇಲೆ ಇಡೀ ದೇಶವನ್ನು ಸಂಚಾರ ಮಾಡಿದ. ಶ್ರೀಕೃಷ್ಣ ಮತ್ತು ಪಾಂಡವರು ಭೂಮಿಯನ್ನು ತ್ಯಜಿಸಿಸಿದ ನಂತರ ಆಡಳಿತ ಬಿಗಿ ತಪ್ಪದಂತೆ ನೋಡಿಕೊಳ್ಳಲು ಮತ್ತು ಅಧಿಕಾರಿಗಳ ಪ್ರಾಮಾಣಿಕತೆಯನ್ನು

ಪರೀಕ್ಷಿಸಲು ಸಮಗ್ರ ದೇಶ ಸಂಚಾರ ಮಾಡಿದ ಪರೀಕ್ಷಿತ. ಹೀಗೆ ಸಂಚಾರ ಮಾಡುವಾಗ ಆತನಿಗೆ ಅತ್ಯಂತ ಸಂತೋಷಕೊಟ್ಟ ವಿಚಾರವೆಂದರೆ- ಆತ ಹೋದಲ್ಲೆಲ್ಲಾ "ನಾವು ಪಾಂಡವರನ್ನು, ಶ್ರೀಕೃಷ್ಣನನ್ನು ಕಂಡಿದ್ದೇವೆ" ಎಂದು ಜನ ಹೇಳಿಕೊಳ್ಳುತ್ತಿದ್ದುದು. ಊರ ಜನರು ಶ್ರೀಕೃಷ್ಣನ ಬಗೆಗೆ ಹೇಳುವುದನ್ನು ಕೇಳಿ ಪರೀಕ್ಷಿತನಿಗೆ, ತನ್ನನ್ನು ಗರ್ಭದಲ್ಲೇ ರಕ್ಷಿಸಿದ ಶ್ರೀಕೃಷ್ಣನ ಮೇಲೆ ಇನ್ನಷ್ಟು ಭಕ್ತಿ ಹೆಚ್ಚುತ್ತದೆ.

ಸಾರಥ್ಯಪಾರ್ಷದಸೇವನಸಖ್ಯದೌತ್ಯ ವೀರಾಸನಾನುಗಮನಸ್ತವನಪ್ರಣಾಮ್ಯೈಃ ।
ಸ್ನಿಗ್ಧೇಷು ಪಾಂಡುಷು ಜಗತ್ಪ್ರಣತಸ್ಯ ವಿಷ್ಣೋಃ ಭಕ್ತಿಂ ಕರೋತಿ ನೃಪತಿಶ್ಚರಣಾರವಿಂದೇ ॥೧೬॥

ಜನರೆಲ್ಲರೂ ಶ್ರೀಕೃಷ್ಣನನ್ನು, ಪಾಂಡವರನ್ನು ಕೊಂಡಾಡುತ್ತಿದ್ದರು. ಲೋಕನಾಯಕ, ಜಗತ್ತೆಲ್ಲಾ ಯಾರಿಗೆ ನಮಸ್ಕರಿಸಬೇಕೋ ಅಂತಹ ವಿಶ್ವವಂದ್ಯ ಭಗವಂತ, ಅರ್ಜುನನ ಸಾರಥಿಯಾಗಿ ನಿಂತಿದ್ದನ್ನು ಕಂಡಿರುವ ಜನರು ಪರೀಕ್ಷಿತನಲ್ಲಿ ಹೇಳುತ್ತಾರೆ: "ನಿಮ್ಮ ಅಜ್ಜಂದಿರರು ಪುಣ್ಯವಂತರು"ಎಂದು. ಎಲ್ಲಿ ಪಾಂಡವರು ಸಭೆ ನಡೆಸುತ್ತಿದ್ದರೋ ಅಲ್ಲಿ ಕೃಷ್ಣನಿರುತ್ತಿದ್ದ. ಕೃಷ್ಣನಿಲ್ಲದ ಪಾಂಡವರ ಸಭೆ ಇಲ್ಲ. ಪಾಂಡವರಿಗೆ ಏನಾದರೂ ಆಪತ್ತು ಬಂದರೆ ಅವರ ಚಾಕರಿಗೆ ಕೂರುತ್ತಿದ್ದ ಕೃಷ್ಣ. ಎಲ್ಲಾ ಮಂತ್ರಾಲೋಚನೆಗೂ ಕೃಷ್ಣ ಸಹಕಾರ ಕೊಡುತ್ತಿದ್ದ. ಒಬ್ಬ ಸೇವಕನಂತೆ, ಒಬ್ಬ ಆತ್ಮೀಯ ಗೆಳೆಯನಂತೆ, ಸಂಧಾನಕಾರನಾಗಿ, ದೂತನಾಗಿ, ಸಾರಥಿಯಾಗಿ ಶ್ರೀಕೃಷ್ಣ ಪಾಂಡವರ ಜೊತೆಗೆ ನಿಂತ. ಸಿಂಹಾಸನವನ್ನು ಅನುಗಮನ ಮಾಡಿ, ಅದರ ರಕ್ಷಣೆಯ ಹೊಣೆಹೊತ್ತು, ರಾಜಪೀಠವನ್ನು ಹಗಲು-ರಾತ್ರಿ ಎನ್ನದೆ ರಕ್ಷೆ ಮಾಡಿದ. ಇಡೀ ಜಗತ್ತು ಯಾರಿಗೆ ನಮಸ್ಕರಿಸುತ್ತದೋ, ಅಂತಹ ಶಕ್ತಿ ಶ್ರೀಕೃಷ್ಣ, ಧರ್ಮರಾಯನಿಗೆ, ಕುಂತಿಗೆ, ಭೀಷ್ಮಾಚಾರ್ಯರಿಗೆ, ಹೀಗೆ ಗುರು-ಹಿರಿಯರೆಲ್ಲರಿಗೆ ನಮಸ್ಕರಿಸುತ್ತಿದ್ದ. ಹೇಗೆ ಗುರು-ಹಿರಿಯರೊಂದಿಗೆ ನಡೆದುಕೊಳ್ಳಬೇಕು ಎನ್ನುವುದನ್ನು ತಾನು ಸ್ವಯಂ ಮಾಡಿ ತೋರಿಸಿದ ಶ್ರೀಕೃಷ್ಣ. "ಪಾಂಡವರು ಮಹಾ ಭಾಗ್ಯಶಾಲಿಗಳು. ಈ ಜಗತ್ತು ಯಾರ ಪಾದಕ್ಕೆರಗುತ್ತದೋ, ಅಂತಹ ನಾರಾಯಣ ಪಾಂಡವರಲ್ಲಿ ತನ್ನ ಸ್ನೇಹದ ಪೂರವನ್ನೇ ಹರಿಸಿ, ಅನುಚರನಂತೆ ನಡೆದುಕೊಂಡನಲ್ಲಾ" ಎಂದು ಜನರು ಮಾತನಾಡಿಕೊಳ್ಳುತ್ತಿದ್ದರು. ಜನರ ಈ ಮಾತನ್ನು ಕೇಳಿದ ಪರೀಕ್ಷಿತ ಪುಳಕಿತನಾದ. ಅವನಿಗೆ ಮೊದಲೇ ಶ್ರೀಕೃಷ್ಣನಲ್ಲಿ ಅಧಮ್ಯ ಭಕ್ತಿ ಇತ್ತು. ಆದರೆ ಜನರ ಮಾತನ್ನು ಕೇಳಿ ಆ ಭಕ್ತಿ ಮತ್ತಷ್ಟು ಹೆಚ್ಚಿತು.

## ಒಂದೇ ಕಾಲಿನಲ್ಲಿ ನಿಂತಿರುವ ವೃಷಭ, ಕಣ್ಣೀರು ಸುರಿಸುತ್ತಿರುವ ಧೇನು

ಪರೀಕ್ಷಿತ ಬಹಳ ವಿನಮ್ರನಾಗಿ, ಭಗವಂತನ ಮೇಲೆ ಭಕ್ತಿ ನೆಟ್ಟು ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ, ಒಮ್ಮೆ ಒಂದು ಘಟನೆ ನಡೆಯಿತು. ಗಂಗಾತೀರ, ಸರಸ್ವತಿ ನದಿ ಪೂರ್ವಾಭಿಮುಖವಾಗಿ ಹರಿಯುವ ಸ್ಥಳದಲ್ಲಿ ಪರೀಕ್ಷಿತನಿಗೆ ಒಂದು ದೃಶ್ಯ ಕಾಣಿಸುತ್ತದೆ(Vision). ಅಲ್ಲಿ ಒಂದು ಎತ್ತು(ವೃಷಭ) ಒಂದೇ ಕಾಲಿನಲ್ಲಿ ನಿಂತಿದೆ. ಅದರ ಮುಂದೆ ಹಸುವೊಂದು(ಧೇನು) ನಿಂತು ದುಃಖಿಸುತ್ತಿದೆ. ವೃಷಭ ಸ್ವಯಂ ದುಃಖಿಯಾಗಿದ್ದರೂ ಕೂಡಾ ಹಸುವನ್ನು ಕುರಿತು ಕೇಳುತ್ತಿದೆ: "ತಾಯೀ, ಏಕೆ ದುಃಖಿಸುತ್ತಿರುವೆ" ಎಂದು. [ಈ ಹಿಂದೆ ಹೇಳಿದಂತೆ ಇಲ್ಲಿ ವೃಷಭ ಧರ್ಮದ ಪ್ರತೀಕ ಮತ್ತು ಹಸು ಭೂಮಾತೆಯ ಪ್ರತೀಕ.].

ಸತ್ಯಂ ಶೌಚಂ ದಯಾ ದಾನಂ ತ್ಯಾಗಃ ಸಂತೋಷ ಆರ್ಜವಮ್ ।
ಶಮೋ ದಮಸ್ತಪಃ ಸಾಮ್ಯಂ ತಿತಿಕ್ಷೋಪರತಿಃ ಶ್ರುತಮ್ ॥೨೭॥

ಜ್ಞಾನಂ ವಿರಕ್ತಿರೈಶ್ವರ್ಯಂ ಶೌರ್ಯಂ ತೇಜೋ ಧೃತಿಃ ಸ್ಮೃತಿಃ ।
ಸ್ವಾತಂತ್ರ್ಯಂ ಕೌಶಲಂ ಕಾಂತಿಃ ಸೌಭಗಂ ಮಾರ್ದವಂ ಕ್ಷಮಾ ॥೨೮॥

ಪ್ರಾಗಲ್ಭ್ಯಂ ಪ್ರಶ್ರಯಃ ಶೀಲಂ ಸಹ ಓಜೋ ಬಲಂ ಭಗಃ ।
ಗಾಂಭೀರ್ಯಂ ಸ್ಥೈರ್ಯಮಾಸ್ತಿಕ್ಯಂ ಕೀರ್ತಿರ್ಮಾನೋಽನಹಂಕೃತಿಃ ॥೨೯॥

ವೃಷಭದ ಪ್ರಶ್ನೆಗೆ ಉತ್ತರಿಸುತ್ತಾ ಹಸು ಹೇಳುತ್ತದೆ: " ಶ್ರೀಕೃಷ್ಣ ಹೊರಟುಹೋದ. ಆತನಿಲ್ಲದೇ ನನ್ನ ಅಸ್ತಿತ್ವಕ್ಕೇನು ಅರ್ಥವಿದೆ? ಕೃಷ್ಣನನ್ನು ಅಗಲಿ ಇರಬೇಕಲ್ಲಾ ಎಂದು ದುಃಖಿಸುತ್ತಿದ್ದೇನೆ" ಎಂದು. ಶ್ರೀಕೃಷ್ಣ ಎಲ್ಲಾ ಗುಣಗಳಿಗೆ ಪಾತ್ರನಾಗಿರತಕ್ಕಂತಹ ಶ್ರೀನಿವಾಸ. ಅವನಿಲ್ಲದೇ ಇರುವ ಈ ಲೋಕವನ್ನು ನೋಡಿ ನನಗೆ ದುಃಖವಾಗುತ್ತಿದೆ. ಇಷ್ಟೇ ಅಲ್ಲ, ಶ್ರೀಕೃಷ್ಣನ ನೋಟವನ್ನು ಕಳೆದುಕೊಂಡು, ಪಾಪಿಯಾದ ಈ ಕಲಿಯ ನೋಟಕ್ಕೆ ಬಲಿಯಾಗುತ್ತಿರುವ ಜನರನ್ನು ಕಂಡು ನನಗೆ ದುಃಖ ಬರುತ್ತಿದೆ ಎನ್ನುತ್ತದೆ ಧೇನು. ಹೀಗೆ ಒಂದು ಕಾಲಿನಲ್ಲಿ ನಿಂತಿರುವ ವೃಷಭವನ್ನು ಕಂಡು, ಕಲಿಯ ಕಾಟವನ್ನು ಕಂಡು, ಶ್ರೀಕೃಷ್ಣ ಹೊರಟುಹೋದನಲ್ಲಾ ಎಂದು ತಾನು ದುಃಖಿಸುತ್ತಿರುವುದಾಗಿ ಧೇನು ಹೇಳುತ್ತದೆ.

ಶ್ರೀಕೃಷ್ಣ ಭೂಮಿಯಲ್ಲಿದ್ದಾಗ ಜನರು ಯಾವಯಾವ ಗುಣವನ್ನು ಹೊಂದಿರಬೇಕು ಮತ್ತು ಹೇಗೆ ನಡೆದುಕೊಳ್ಳಬೇಕು ಎನ್ನುವುದನ್ನು ಸ್ವಯಂ ನಡೆದು ತೋರಿದ್ದ. ಶ್ರೀಕೃಷ್ಣ ನಡೆದು ತೋರಿದ ನಲವತ್ತು ಗುಣಗಳನ್ನು ಇಲ್ಲಿ ಧೇನು ನೆನಪಿಸಿಕೊಳ್ಳುತ್ತಿರುವುದನ್ನು ಕಾಣುತ್ತೇವೆ. ಬನ್ನಿ, ನಾವು ಇಲ್ಲಿ ವಿವರಿಸಿದ ಗುಣಗಳನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸೋಣ:

೧. ಸತ್ಯ: ಸತ್ಯ ಎಂದರೆ ಯಥಾರ್ಥವನ್ನು ಹೇಳುವ ಪ್ರಾಮಾಣಿಕತೆ. "ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಎಂದು ವೇದದಲ್ಲಿ ಭಗವಂತನನ್ನು ಮೊದಲು 'ಸತ್ಯ' ಎನ್ನುವ ಶಬ್ದದಿಂದಲೇ ಹೇಳುತ್ತಾರೆ. ಭಾಗವತದಲ್ಲಿನ ಮೊದಲನೇ ಶ್ಲೋಕದಲ್ಲಿ ಭಗವಂತನನ್ನು ಸ್ತೋತ್ರ ಮಾಡಿರುವುದು 'ಸತ್ಯಂ ಪರಂ ಧೀಮಹಿ' ಎಂದು ಸತ್ಯ ಶಬ್ದದಿಂದಲೇ. ಈ ಹಿಂದೆ ಹೇಳಿದಂತೆ ಶ್ರೀಕೃಷ್ಣ ದೇವಕಿಯ ಗರ್ಭದಲ್ಲಿರುವಾಗ ದೇವತೆಗಳು ಭಗವಂತನನ್ನು ಪ್ರಾರ್ಥನೆ ಮಾಡಿರುವುದು 'ಸತ್ಯ' ಶಬ್ದದಿಂದ. ಹಾಗಾಗಿ 'ಸತ್ಯ' ಎನ್ನುವುದು ಭಗವಂತನ ಅತ್ಯಂತ ಮುಖ್ಯವಾದ ನಾಮಗಳಲ್ಲೊಂದು. ಸತ್ಯ ಎಂದರೆ - ನಿರ್ದುಷ್ಟವಾದ ಆನಂದಾನುಭವ ಸ್ವರೂಪ. ಜೀವನೂ ಕೂಡಾ ನಿರ್ದುಃಖವಾದ ಆನಂದಾನುಭವವನ್ನು ಮೋಕ್ಷದಲ್ಲಿ ಪಡೆಯುತ್ತಾನೆ. ನಮ್ಮಲ್ಲಿಲ್ಲದ್ದನ್ನು ಎಂದೆಂದೂ ಅಳಿಯದಂತೆ ಪಡೆಯುವ ಪ್ರಯತ್ನವೇ ಮೋಕ್ಷ ಸಾಧನೆ. ಹೀಗೆ ಸದಾ ಆನಂದವಾಗಿರುವ ಅಪೂರ್ವ ಗುಣವನ್ನು ಭಗವಂತ ತನ್ನ ಕೃಷ್ಣಾವತಾರದಲ್ಲಿ ನಡೆದು ತೋರಿದ.

ಮೇಲೆ ಹೇಳಿದಂತೆ ಸತ್ಯ ಎಂದರೆ ಪ್ರಾಮಾಣಿಕತೆ. ಜೀವನದಲ್ಲಿ ಸತ್ಯವನ್ನು ಪಾಲಿಸಬೇಕು, ಸುಳ್ಳು ಹೇಳಬಾರದು. ಇಲ್ಲಿ ನಮಗೊಂದು ಪ್ರಶ್ನೆ ಬರುತ್ತದೆ. ಕೃಷ್ಣ ತನ್ನ ಬಾಲ್ಯದಿಂದ ಹಿಡಿದು, ಎಲ್ಲಾ ಹಂತಗಳಲ್ಲೂ ಸುಳ್ಳು ಹೇಳಿದಂತೆ ನಮಗೆ ಕಾಣಿಸುತ್ತದೆ. ತಾಯಿಯ ಬಳಿ ತಾನು ಮಣ್ಣು ತಿಂದಿಲ್ಲ ಎಂದು ಕೃಷ್ಣ ಹೇಳಿದ ಸುಳ್ಳು; ಕಂಸ ಕರೆದ ಬಿಲ್ಲ ಹಬ್ಬಕ್ಕೆ ಹೋಗುವಾಗ ಗೋಪಿಕಾ ಸ್ತ್ರೀಯರಿಗೆ ಇನ್ನು ಕೆಲವೇ ದಿನಗಳಲ್ಲಿ ಬರುತ್ತೇನೆಂದು ಹೇಳಿ ಸುಮಾರು ಐವತ್ತು ವರ್ಷಗಳ ಕಾಲ ಕೃಷ್ಣ ಹಿಂತಿರುಗಿ ಬಾರದೇ ಇದ್ದದ್ದು; ಮಹಾಭಾರತ ಯುದ್ಧದಲ್ಲಿ 'ಅಶ್ವತ್ಥಾಮ ಸತ್ತ' ಎಂದು ಧರ್ಮರಾಯನಿಂದ

ಸುಳ್ಳು ಹೇಳಿಸಿ, ದ್ರೋಣಾಚಾರ್ಯರನ್ನು ಕೊಲ್ಲಿಸಿರುವುದು; ಹೀಗೆ ಅನೇಕ ಘಟನೆಗಳನ್ನು ನಾವು ಕೃಷ್ಣನ ಕಥೆಯಲ್ಲಿ ಕಾಣುತ್ತೇವೆ. ಆದರೆ ಭಗವಂತ ಸತ್ಯದ ಸಾಕಾರಮೂರ್ತಿ. ಆತ ಸುಳ್ಳು ಹೇಳಲು ಸಾಧ್ಯವೇ ಇಲ್ಲ. ನಾವು ಭಗವಂತನ ಎತ್ತರವನ್ನು ತಿಳಿಯದೇ, ನಮ್ಮ ನೆಲೆಯಲ್ಲಿ ನೋಡಿದಾಗ, ನಮಗೆ ಇವೆಲ್ಲವೂ ಸುಳ್ಳು ಎನಿಸುತ್ತದೆ. ದೊಡ್ಡವರು ಏನಾಗಿದೆ ಎಂದು ನೋಡಿ ಮಾತನಾಡುವುದಿಲ್ಲ, ಅವರು ಮಾತನಾಡಿದಂತೆ ಎಲ್ಲವೂ ಆಗುತ್ತದೆ. ಆದ್ದರಿಂದ 'ಕೃಷ್ಣ ಸುಳ್ಳು ಹೇಳಿದ' ಎಂದು ಆಪಾದನೆ ಮಾಡುವ ಮೊದಲು, ನಾವು ಆತನ ನೆಲೆಯನ್ನು ತಿಳಿಯಬೇಕು. ಆತ ಏಕೆ ಹಾಗೆ ಮಾಡಿದ ಎನ್ನುವುದನ್ನು ವಿಶ್ಲೇಷಿಸಬೇಕು.

**"ಯತ್ ಸತಾಂ ಹಿತಮತ್ಯಂತಂ ತತ್ ಸತ್ಯಮ್"**. ಸತ್ಯ ಎಂದರೆ ಇದ್ದದ್ದನ್ನು ಇದ್ದಂತೆ ಹೇಳುವುದಲ್ಲ. ಯಾವುದನ್ನು ಹೇಳುವುದರಿಂದ ಸಮಾಜಕ್ಕೆ ಹಿತವಾಗುತ್ತದೋ ಅದು ಸತ್ಯ. ಸತ್ಯಕ್ಕೆ ಹೊಸ ಅರ್ಥ-ಆಯಾಮವನ್ನು ಭಗವಂತ ತನ್ನ ಕೃಷ್ಣಾವತಾರದಲ್ಲಿ ನಮಗೆ ತೋರಿಸಿಕೊಟ್ಟಿದ್ದಾನೆ. ರಾಮಾವತಾರದಲ್ಲಿ ಸತ್ಯಕ್ಕೆ ಈ ಅರ್ಥವನ್ನು ಭಗವಂತ ನೀಡಲಿಲ್ಲ. ಅಲ್ಲಿ ದಶರಥ ತನ್ನ ಹೆಂಡತಿಗೆ ಕೊಟ್ಟ ಮಾತಿಗೆ ಬದ್ಧನಾಗಿ, ಇಡೀ ದೇಶಕ್ಕೆ ಅನ್ಯಾಯವಾಗುವಂತಹ ತೀರ್ಮಾನ ತೆಗೆದುಕೊಂಡಾಗ ಭಗವಂತ ದಶರಥನ ತೀರ್ಮಾನದಂತೆಯೇ ನಡೆದ. ಏಕೆಂದರೆ ಅಲ್ಲಿ ಆತನಿಗೆ ಕಾಡಿಗೆ ಹೋಗಿ ಅನೇಕ ಋಷಿ ಮುನಿಗಳ ಉದ್ಧಾರ ಮಾಡಬೇಕಾಗಿತ್ತು. ಆದ್ದರಿಂದ ದಶರಥನ ಪ್ರಾರಾಬ್ಧದಂತೆ ಎಲ್ಲವೂ ನಡೆಯಿತು. ಆದರೆ ಮಹಾಭಾರತದಲ್ಲಿ ರಾಮಾಯಣಕ್ಕೆ ಉತ್ತರ ರೂಪವಾಗಿ ಸ್ಪಷ್ಟವಾಗಿ ಹೇಳುತ್ತಾರೆ: "ಯಾವತ್ತೂ ಹೆಣ್ಣಿಗೆ ಕೊಟ್ಟ ಮಾತನ್ನು ಮತ್ತು ಮದುವೆ ಕಾಲದಲ್ಲಿ ಒಬ್ಬರಿಗೆ ಕೊಟ್ಟ ಮಾತನ್ನು ಸಮಾಜದ ಹಿತಕ್ಕೋಸ್ಕರ ಮುರಿದರೆ ಅದು ತಪ್ಪಲ್ಲ" ಎಂದು.

ಮೇಲ್ನೋಟದಲ್ಲಿ ನೋಡಿದರೆ "ಅಶ್ವತ್ಥಾಮ ಸತ್ತ ಎಂದು ಹೇಳು" ಎಂದು ಶ್ರೀಕೃಷ್ಣ ಧರ್ಮರಾಯನಲ್ಲಿ ಹೇಳಿ ಅನ್ಯಾಯ ಮಾಡಿದ ಎನಿಸುತ್ತದೆ. ಆದರೆ ಇದನ್ನು ಆಳವಾಗಿ ವಿಶ್ಲೇಷಿಸಿದರೆ ಇಲ್ಲಿರುವ 'ಸತ್ಯ' ನಮಗೆ ತಿಳಿಯುತ್ತದೆ. ದ್ರೋಣಾಚಾರ್ಯರು ಒಬ್ಬ ಮಹಾನ್ ದೇವರ್ಷಿ. ಸಾತ್ವಿಕರಾಗಿದ್ದ ಅವರು, ತನ್ನ ಬಾಲ್ಯ ಮಿತ್ರ ದ್ರುಪದನಿಂದ ಅವಮಾನಿತರಾಗಿ ತಾಮಸ ಮಾರ್ಗವನ್ನು ಹಿಡಿದರು. ತನ್ನ ಮಗುವಿಗೆ ಹಾಲುಣಿಸಲು ಒಂದು ಹಸುವನ್ನು ಕೊಡು ಎಂದು ಬಾಲ್ಯದ ಸಲುಗೆಯಲ್ಲಿ ದ್ರುಪದನಲ್ಲಿ ಕೇಳಿದಾಗ, ಆತ ಬಾಲ್ಯದ ಸ್ನೇಹವನ್ನು ತಿರಸ್ಕರಿಸಿದ. ಇದನ್ನೇ ದ್ವೇಷವಾಗಿ ತೆಗೆದುಕೊಂಡ ದ್ರೋಣಾಚಾರ್ಯರು, ಸೇಡಿನಿಂದ ಕುರುವಂಶದ ಗುರುವಾಗಿ ಸೇರಿ, ನಂತರ ದುರ್ಯೋಧನನ ಅನ್ನದ ಋಣಕ್ಕೆ ಬಿದ್ದು, ಅದನ್ನು ತೀರಿಸುವುದಕ್ಕಾಗಿ ಸಮಾಜಧರ್ಮವನ್ನೂ ಮರೆತು, ದಿನಕ್ಕೆ ಹತ್ತು ಸಾವಿರ ಸೈನಿಕರ ರುಂಡ ಚಂಡಾಡುತ್ತೇನೆ ಎಂದು ಪಣತೊಟ್ಟು, ಪಾಪಕೃತ್ಯದ ಪರಾಕಾಷ್ಠೆಯನ್ನು ತಲುಪುತ್ತಿರುವಾಗ, ಕೃಷ್ಣ ಅದನ್ನು ತಡೆದ. ದ್ರೋಣಾಚಾರ್ಯರ ಉದ್ಧಾರ ಅವರ ಸಾವಿನಲ್ಲಿದೆ ಎನ್ನುವುದು ಕೃಷ್ಣನಿಗೆ ತಿಳಿದಿತ್ತು. ಅಂತಹ ಮಹಾನ್ ಜ್ಞಾನಿ ಪುತ್ರಮೋಹಕ್ಕೊಳಗಾಗಿದ್ದುದ್ದು ಇನ್ನೊಂದು ದುರಂತ. ಹಾಗಾಗಿ ಸಮಾಜದ ಉದ್ಧಾರಕ್ಕಾಗಿ(ದಿನಕ್ಕೆ ಹತ್ತು ಸಾವಿರ ಸೈನಿಕರ ಹತ್ಯೆಯನ್ನು ತಪ್ಪಿಸುವುದರ ಮೂಲಕ), ದ್ರೋಣಾಚಾರ್ಯರ ಉದ್ಧಾರಕ್ಕಾಗಿ(ಅವರಿಂದ ನಡೆಯಲಿದ್ದ ಮಾರಣ ಹೋಮವನ್ನು ತಪ್ಪಿಸಿ), ದ್ರೋಣಾಚಾರ್ಯರ ಪುತ್ರಮೋಹವನ್ನು ಕಳಚಿ(ಅಶ್ವತ್ಥಾಮ ಸತ್ತ ಎಂದು ಹೇಳಿ), ಸಮಾಜದ ಮತ್ತು ದ್ರೋಣಾಚಾರ್ಯರ ಉದ್ಧಾರ ಮಾಡಿದ ಕೃಷ್ಣ. ಇಲ್ಲಿರುವುದು ಕಾರುಣ್ಯ, ದ್ವೇಷವಲ್ಲ. ಇಂತಹ ಲೋಕೋದ್ಧಾರಕ 'ಸತ್ಯ' ನಮಗೆ ಮೇಲ್ನೋಟದಲ್ಲಿ ನೋಡಿದರೆ ತಿಳಿಯುವುದಿಲ್ಲ.

೨. **ಶೌಚ:** ಶೌಚ ಎಂದರೆ ಶುದ್ಧಿ, ನೈರ್ಮಲ್ಯ. ಭಗವಂತ ನಿತ್ಯ ಶುದ್ಧ. ಆತನಲ್ಲಿ ತ್ರಿಗುಣಗಳ ಸ್ಪರ್ಶವೇ ಇಲ್ಲ. ಜ್ಞಾನಾನಂದಮಯವಾದ ನಿತ್ಯ ಶುದ್ಧ ಸ್ವರೂಪ ಆತನದು. ನಿತ್ಯ ನಿರ್ಮಲನಾದ ಭಗವಂತನನ್ನು

ಸೇರುವುದಕ್ಕೋಸ್ಕರ ನಾವು ಕಾಯೇನ-ವಾಚಾ-ಮನಸಾ ಪ್ರಯತ್ನಿಸಬೇಕು. ಮನಸ್ಸಿನಲ್ಲಿ ಯಾವುದೇ ಕೊಳೆ ಇಟ್ಟುಕೊಳ್ಳದಿರುವುದರಿಂದ ನಾವು ನಿತ್ಯ ಶುದ್ಧರಾಗಬಹುದು.

**೩. ದಯೆ:** ದಯೆ ಅಂದರೆ ಅನುಕಂಪೆ. ಯಾರ ಬಗ್ಗೆಯೂ ದ್ವೇಷ ಇಲ್ಲದಿರುವುದು, ಯಾರು ಕಷ್ಟದಲ್ಲಿದ್ದಾರೋ ಅವರ ಮೇಲೆ ಅನುಕಂಪ ತೋರುವುದು-ದಯೆ. ಭಗವಂತ ದುಷ್ಟರಿಗೆ ಶಿಕ್ಷೆ ಕೊಟ್ಟರೆ, ಸಜ್ಜನರಿಗೆ ರಕ್ಷಣೆ ಕೊಡುತ್ತಾನೆ. ಯಾರು ಸರಿಯಾದ ದಾರಿಯಲ್ಲಿದ್ದಾರೆ ಅವರ ಮೇಲೆ ದಯೆ ತೋರುವ ಭಗವಂತ, ಯಾರು ಅಪರಾಧಿಗಳೋ ಅವರಿಗೆ ನಿರ್ದಯವಾಗಿ ಶಿಕ್ಷೆ ಕೊಡುತ್ತಾನೆ. ಆದರೆ ಭಗವಂತ ಕೊಡುವ ಶಿಕ್ಷೆಯಲ್ಲೂ ಕೂಡಾ ಕಾರುಣ್ಯವಿದೆ. ಅವನಿಗೆ ಯಾರ ಮೇಲೂ ದ್ವೇಷವಿಲ್ಲ. ಅವನು ಪರಮ ಕಾರುಣ್ಯಮೂರ್ತಿ. ನಾವೂ ಕೂಡಾ ಇನ್ನೊಬ್ಬರನ್ನು ದ್ವೇಷಿಸದೇ ದಯೆಯನ್ನು ಬೆಳೆಸಿಕೊಳ್ಳಬೇಕು.

**೪. ದಾನ:** ಎಲ್ಲರಿಗೂ ಅವರ ಕರ್ಮಕ್ಕನುಗುಣವಾಗಿ ಏನು ಸಿಗಬೇಕೋ, ಅದನ್ನು ದಾನ ಮಾಡುವ ಮಹಾದಾನಿ ಆ ಭಗವಂತ. ಆತ ಭಕ್ತವತ್ಸಲ. ಭಕ್ತರಿಗೆ ಆತ ತನ್ನನ್ನೇ ತಾನು ಕೊಟ್ಟುಬಿಡುತ್ತಾನೆ. ಆತ ಸರ್ವಾದಿಷ್ಟಪ್ರದ. ದಾನ ಎನ್ನುವುದು ಆತನ ಮೂಲಭೂತ ಗುಣಗಳಲ್ಲೊಂದು. ಭಗವಂತನಲ್ಲಿ ಎಲ್ಲವೂ ಇದೆ, ಆದ್ದರಿಂದ ಕೊಡುತ್ತಾನೆ. ಆದರೆ ನಮ್ಮಲ್ಲಿ ಎಲ್ಲವೂ ಇಲ್ಲ. ಆದರೆ ನಮ್ಮಲ್ಲಿ ಏನಿದೆಯೋ ಅದನ್ನು ಇಲ್ಲದವರಿಗೆ ಮನಪೂರ್ವಕ ಕೊಡುವ ಅಭ್ಯಾಸವನ್ನು ನಾವು ಬೆಳಸಿಕೊಳ್ಳಬೇಕು.

**೫. ತ್ಯಾಗ:** ಸಾಮಾನ್ಯವಾಗಿ ನಮಗೆ ತಿಳಿದಂತೆ ತ್ಯಾಗ ಅಂದರೆ ಕೊಡುವುದು. ದಾನ ಎಂದರೂ ಕೊಡುವುದು. ಆದ್ದರಿಂದ ತ್ಯಾಗ ಮತ್ತು ದಾನ ಎನ್ನುವುದು ಸಮಾನ ಅರ್ಥವುಳ್ಳ ಪರ್ಯಾಯ ಶಬ್ದವೆಂಬಂತೆ ಕಾಣುತ್ತದೆ. ಆದರೆ ಆಚಾರ್ಯರು 'ತ್ಯಾಗ' ಎನ್ನುವುದಕ್ಕೆ ಕೋಶವನ್ನು ನೀಡಿದ್ದಾರೆ. ಅವರು ಹೇಳುವಂತೆ: **"ಮಿಥ್ಯಾಭಿಮಾನವಿರತಿಸ್ತ್ಯಾಗ ಇತ್ಯಭಿಧೀಯತೇ"**. ಅಂದರೆ ನಮ್ಮಲ್ಲಿರುವ ಅಭಿಮಾನವನ್ನು ಬಿಡುವುದು ತ್ಯಾಗ. ಭಗವಂತ ಯಾವುದಕ್ಕೂ ಅಭಿಮಾನಿಯಲ್ಲ. ಅವನಿಗೆ ಯಾವುದರ ಮೇಲೂ ಅಭಿಮಾನವಿಲ್ಲ. ನಾವೂ ಕೂಡಾ ನಮ್ಮಲ್ಲಿರುವ ಅಹಂಕಾರ, ಒಣ ಜಂಭವನ್ನು ಬಿಡಬೇಕು.

**೬. ಸಂತೋಷ:** ಸಂತೋಷ ಎಂದರೆ ನಿತ್ಯತೃಪ್ತತ್ವ**(Contentment)**. ಭಗವಂತ ಆಪ್ತಕಾಮ. ಅವನು ಪಡೆಯಬೇಕಾದ್ದು ಯಾವುದೂ ಇಲ್ಲ. ಈ ಗುಣ ಭಗವಂತನಲ್ಲಿ ಪೂರ್ಣಪ್ರಮಾಣದಲ್ಲಿದೆ. ನಾವು ಆ ಭಗವಂತನ ಅರಿವಿನಿಂದ ಅವನ ಜ್ಞಾನವಲ್ಲದೆ ಇನ್ನೇನೂ ಬೇಡ ಎನ್ನುವ ಸ್ಥಿತಿಯನ್ನು ತಲುಪಬೇಕು.

**೭. ಆರ್ಜವಂ:** ಆಡಿದಂತೆ ನಡೆದುಕೊಳ್ಳುವುದು**(Straight forwardness)**. ಭಗವಂತ ಅಖಂಡವಾದ ಜ್ಞಾನಸ್ವರೂಪ. ಆತ ಆರ್ಜವದ ಸಾಕಾರಮೂರ್ತಿ. ನಾವೂ ಕೂಡಾ ನಮ್ಮ ಜೀವನದಲ್ಲಿ ಆರ್ಜವವನ್ನು ಬೆಳೆಸಿಕೊಳ್ಳಲು ಪ್ರಯತ್ನ ಮಾಡಬೇಕು.

**೮-೯. ಶಮ-ದಮ:** ಲೋಕದಲ್ಲಿ ಶಮಃ ಅಂದರೆ ಮನಸ್ಸು ಭಗವಂತನಲ್ಲಿ ನೆಲೆಗೊಳ್ಳುವುದು, ದಮ ಅಂದರೆ ಇಂದ್ರಿಯ ನಿಗ್ರಹ. ಇದು ಭಗವಂತನ ಗುಣವಾಗುವುದು ಹೇಗೆ? ಇದಕ್ಕೆ ಆಚಾರ್ಯರು ತಮ್ಮ ಭಾಷ್ಯದಲ್ಲಿ ಉತ್ತರಿಸುತ್ತಾ ಹೇಳುತ್ತಾರೆ: **ಶಮಃ ಪ್ರಿಯಾದಿಬುದ್ಧ್ಯುಜ್ಝಾಕ್ಷಮಾ ಕ್ರೋಧಾದ್ಯನುತ್ಥಿತಿಃ । ಮಹಾವೀರೋಧಕರ್ತುಶ್ಚ ಸಹನಂ ತು ತಿತಿಕ್ಷಣಂ ॥** ಅಂದರೆ: ಪ್ರಿಯ-ಅಪ್ರಿಯ ಎನ್ನುವ ವಿಭಾಗವೇ ಇಲ್ಲದೇ ಇರುವುದು ಶಮ. ಭಗವಂತನಿಗೆ ಪ್ರಿಯ-ಅಪ್ರಿಯ, ಶತ್ರು-ಮಿತ್ರ ಎನ್ನುವ ವಿಭಾಗವೇ ಇಲ್ಲ. ಏಕೆಂದರೆ ಶಾಸ್ತ್ರಕಾರರು ಹೇಳುವಂತೆ: ಎಲ್ಲವನ್ನೂ ಸೃಷ್ಟಿಸಿರುವವನು ಸತ್ಯಸಂಕಲ್ಪ ಭಗವಂತ. ಆದ್ದರಿಂದ ಅವನಿಗೆ ಪ್ರಿಯ-ಅಪ್ರಿಯ ಎನ್ನುವ ವಿಭಾಗವಿಲ್ಲ. ನಾವೂ ಕೂಡಾ ಸಾಧ್ಯವಾದಷ್ಟು

ಈ ಗುಣವನ್ನು ಬೆಳಸಿಕೊಳ್ಳಬೇಕು. ಪ್ರಿಯ-ಅಪ್ರಿಯ ಎಂದು ತಲೆಕೆಡಿಸಿಕೊಳ್ಳದೆ, ಬಂದಿದ್ದನ್ನು ಭಗವಂತನ ಪ್ರಸಾದವೆಂದು ಸ್ವೀಕರಿಸಿ ಮುನ್ನಡೆಯುವುದನ್ನು ನಾವು ಕಲಿಯಬೇಕು.

ಇಂದ್ರಿಯಗಳು ಹೇಳಿದಂತೆ ನಾವು ಬದುಕಬಾರದು, ನಾವು ಹೇಳಿದಂತೆ ಇಂದ್ರಿಯಗಳು ಕೇಳಬೇಕು. ಇಂದ್ರಿಯ ನಿಗ್ರಹ ಮಾಡದೆ ಒಳಗಿನ ಯಾವುದೇ ಸಾಧನೆ ಇಲ್ಲ. ನಮ್ಮ ಮನಸ್ಸು ನಮ್ಮ ಹೊರಗಿನ ಇಂದ್ರಿಯಗಳನ್ನು ಅವಲಂಬಿಸಿಕೊಂಡೇ ಯೋಚಿಸುತ್ತದೆ. ಅದು ಯಾವಾಗಲೂ ಬಹಿರ್ಮುಖವಾಗಿರುತ್ತದೆ. ಇಂತಹ ಮನಸ್ಸನ್ನು ಅಂತರ್ಮುಖಗೊಳಿಸಲು ನಾವು ಹೊರಗಿನ ಇಂದ್ರಿಯಗಳ ಮುಖೇನ ಇಲ್ಲದ ವಿಷಯಗಳು ಒಳ ಹೋಗದಂತೆ ತಡೆಯುವುದೇ ದಮ. ಅಂತಹ ದಮವನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಂಡು ಅಂತರಂಗ ಪ್ರಪಂಚದಲ್ಲಿ ಭಗವಂತನನ್ನು ಕಾಣಲು ಪ್ರಯತ್ನಿಸಬೇಕು. ಎಲ್ಲವನ್ನೂ ನಿಗ್ರಹಿಸುವ ಭಗವಂತ ದಮ ಸ್ವರೂಪ.

೧೦. **ತಪ/ತಪಸ್ಸು:** ಯಾವುದೇ ಒಂದು ಸಂಗತಿಯನ್ನು ಆಳವಾಗಿ ಚಿಂತಿಸಿ, ಅದರ ತಾರ್ಕಿಕ ಯುಕ್ತಾಯುಕ್ತತತೆಯನ್ನು ಯೋಚಿಸಿ, ಮನನಮಾಡಿ, ತಳಸ್ಪರ್ಶಿಯಾಗಿ ಗ್ರಹಣ ಮಾಡುವುದು ತಪಸ್ಸು. ಭಗವಂತ ಚಿಂತನಾಸ್ವರೂಪ. ಅಂತಹ ಭಗವಂತನನ್ನು ನಾವು ಆಳವಾಗಿ ಚಿಂತಿಸಲು ಪ್ರಯತ್ನಿಸಬೇಕು.

೧೧. **ಸಾಮ್ಯಂ:** ಎಲ್ಲಿಯೂ ಯಾವ ರೀತಿಯ ವೈಷಮ್ಯ ಮಾಡದಿರುವುದು 'ಸಮತೆ' ಅಥವಾ ಸಾಮ್ಯ. ಅವರವರ ಯೋಗ್ಯತೆಗೆ ತಕ್ಕಂತೆ ಫಲ ಕೊಡುವ ಸ್ವಭಾವ ಭಗವಂತನದ್ದು. ಆತನ ರೂಪಗಳಲ್ಲಿ, ಗುಣ-ಕ್ರಿಯೆಗಳಲ್ಲಿ ಕೂಡಾ ತಾರತಮ್ಯ ಇಲ್ಲ. ಹಾಗಾಗಿ ಭಗವಂತನನ್ನು "**ನಿರ್ದೋಷಂ ಹಿ ಸಮಂ ಬ್ರಹ್ಮ**"- ಎನ್ನುತ್ತಾರೆ.

ಎಲ್ಲರನ್ನು ಸಮನಾಗಿ ನೋಡುವುದು ಎಂದರೆ ಅವರವರ ಯೋಗ್ಯತೆಗೆ ತಕ್ಕಂತೆ ನೋಡುವ ಸ್ವಭಾವ ಹೊರತು, ಎಲ್ಲಾ ಯೋಗ್ಯತೆಯನ್ನು ಒಂದೇ ಸಮನಾಗಿ ನೋಡುವುದಲ್ಲ. ನಾವೂ ಕೂಡಾ ಈ ಗುಣವನ್ನು ಬೆಳೆಸಿಕೊಳ್ಳಬೇಕು.

೧೨. **ತಿತಿಕ್ಷಾ** : ಕೋಪಿಸಿಕೊಳ್ಳಲು ಕಾರಣ ಇದ್ದಾಗಿಯೂ ಕೋಪಿಸಿಕೊಳ್ಳದೇ ಇರುವ ಸಮಚಿತ್ತತೆ ತಿತಿಕ್ಷಾ. ಸಾಮಾನ್ಯವಾಗಿ ನಾವು ಬಯಸಿದಂತೆ ಆಗದೇ ಇದ್ದಾಗ ನಮಗೆ ಕೋಪ ಬರುತ್ತದೆ. ಕೊಪ ಬರುವುದು ಅಸಾಯಕತೆ ಅಥವಾ ದೌರ್ಬಲ್ಯದ ಲಕ್ಷಣವೂ ಹೌದು. ಭಗವಂತ ಸರ್ವಸಮರ್ಥ. ಆತ ಬಯಸಿದಂತೆಯೇ ಎಲ್ಲವೂ ನಡೆಯುತ್ತದೆ. ಹೀಗಾಗಿ ಆತ ಎಂದೂ ಕೋಪಿಸಿಕೊಳ್ಳುವುದಿಲ್ಲ. ತನ್ನ ಅವತಾರದಲ್ಲಿ ಕೆಲವೊಮ್ಮೆ ನಮ್ಮ ಉದ್ಧಾರಕ್ಕಾಗಿ ಭಗವಂತ ಕೋಪಿಸಿಕೊಂಡಂತೆ ಲೀಲೆ ತೋರಿದರೂ ಕೂಡಾ, ಆತ ನಿಜವಾಗಿ ಯಾರ ಮೇಲೂ ಕೋಪಿಸಿಕೊಳ್ಳುವುದಿಲ್ಲ. ಭಗವಂತನ ಸಮಚಿತ್ತತೆಗೆ ಒಂದು ಉತ್ತಮ ಉದಾಹರಣೆ ಗಾಂಧಾರಿ ಶ್ರೀಕೃಷ್ಣನಿಗೆ "ನಿನ್ನ ವಂಶ ನಿರ್ವಂಶವಾಗಲಿ" ಎಂದು ಶಾಪ ಕೊಟ್ಟಾಗ ಆತ ನಡೆದುಕೊಂಡ ರೀತಿ. ಆ ಸಂದರ್ಭದಲ್ಲಿ ಶ್ರೀಕೃಷ್ಣ ಕೋಪಿಸಿಕೊಳ್ಳದೆ, "ಇದು ಪತಿವೃತೆಯ ಬಾಯಿಯಲ್ಲಿ ಬಂದ ವರ" ಎಂದು ನಿರ್ವಿಕಾರವಾಗಿ ವಿಷಯ ಗ್ರಹಣ ಮಾಡಿದ. ನಾವೂ ಕೂಡಾ ನಮ್ಮ ಜೀವನದಲ್ಲಿ ಕೋಪವನ್ನು ಗೆಲ್ಲಬೇಕು.

೧೩: **ಉಪರತಿ** : ಪ್ರಾಪಂಚಿಕ ಭೋಗದಲ್ಲಿ ಅನಾಸಕ್ತಿ ಮತ್ತು ಉತ್ಕೃಷ್ಟವಾದ ಸ್ವರೂಪದಲ್ಲಿ ಸದಾ ಆನಂದವಾಗಿರುವುದು 'ಉಪರತಿ'. ಇದು ಮೋಕ್ಷ ಸಾಧನೆಯಲ್ಲಿ ನಮ್ಮಲ್ಲಿರಬೇಕಾದ ಗುಣ. ನಾವು ಹೊರಗಿನ ಕ್ಷುದ್ರವಾದ ವಸ್ತುವಿನಿಂದ ಮನಸ್ಸನ್ನು ತಿರುಗಿಸಿ ಎಲ್ಲಕ್ಕಿಂತ ಹಿರಿದಾದ ವಸ್ತುವಿನಮೇಲೆ ಮನಸ್ಸನ್ನು ನೆಲೆಗೊಳಿಸಬೇಕು.

೧೪. **ಶ್ರುತಮ್** : 'ಶ್ರುತಮ್' ಎಂದರೆ ಸರ್ವ ಶ್ರುತಿಗಳ ಅರಿವು. ಸಮಸ್ತ ಶಾಸ್ತ್ರವನ್ನು ಚತುರ್ಮುಖನಿಗೆ ಉಪದೇಶ ಮಾಡಿದವ ಭಗವಂತ. ಉಪನಿಷತ್ತಿನಲ್ಲಿ ಹೇಳುವಂತೆ: "**ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದೋ ಯಜುರ್ವೇದಃ ಸಾಮವೇದೋऽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ**

**ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀಷ್ಟಂ ಹುತಮಾಶಿತಂ ಪಾಯಿತಮ್, ಅಯಂ ಚ ಲೋಕಃ, ಪರಶ್ಚ ಲೋಕಃ, ಸರ್ವಾಣಿ ಚ ಭೂತಾನಿ, ಅಸ್ಯೈವೈತಾನಿ ಸರ್ವಾಣಿ ನಿಃಶ್ವಸಿತಾನಿ" (ಬೃಹದಾರಣ್ಯಕ-೪-೫-೧೧).** ಅಂದರೆ: ಸಮಸ್ತ ಶಾಸ್ತ್ರಗಳೂ ಭಗವಂತನ ಉಸಿರು. ಅವನು ಸರ್ವಶಾಸ್ತ್ರಜ್ಞ. ವೇದ ಎನ್ನುವುದು ಭಗವಂತನ ಉದ್ಗಾರ. ಇಂತಹ ಭಗವಂತನನ್ನು ಸೇರಲು ಪ್ರಯತ್ನಿಸುವ ಸಾಧಕ, ಶ್ರವಣ-ಮನನ-ನಿಧಿಧ್ಯಾಸನದಿಂದ ಶ್ರುತಿಯನ್ನು ಅರಿಯುವ ಪ್ರಯತ್ನ ಮಾಡಬೇಕು.

**೧೫). ಜ್ಞಾನಂ:** ಭಗವಂತ ಸರ್ವಜ್ಞ. ಅಂತಹ ಭಗವಂತನನ್ನು ಅರಿಯುವ ಪ್ರಯತ್ನವನ್ನು ಪ್ರತಿಯೊಬ್ಬ ಸಾಧಕ ಕೂಡಾ ಮಾಡಬೇಕು.

**೧೬). ವಿರಕ್ತಿಃ:** ಭಗವಂತ ಸರ್ವವಿರಕ್ತ. ಆತ ಎಲ್ಲವುದರ ಜೊತೆಗೂ ಇರುತ್ತಾನೆ, ಆದರೆ ಯಾವುದೇ ಒಂದರ ಅಭಿಮಾನ ಆತನಿಗಿಲ್ಲ. ಶ್ರೀಕೃಷ್ಣನನ್ನು ನೋಡಿದರೆ ಆತ ೧೬,೧೦೮ ಸ್ತ್ರೀಯರ ಗಂಡ. ಆದರೆ ಆತ ಆಜನ್ಮ ಬ್ರಹ್ಮಚಾರಿ! ಸಾಧಕ ಎಲ್ಲರೊಂದಿಗಿದ್ದರೂ ಕೂಡಾ, ತನ್ನತನವನ್ನು ಕಳೆದುಕೊಳ್ಳದೆ ಭಿನ್ನವಾಗಿರುತ್ತಾನೆ. ಯಾವುದರ ಸ್ಪರ್ಶವೂ ಇಲ್ಲದೆ ಎಲ್ಲರ ಜೊತೆಗೂ ಇರುವುದು ವಿರಕ್ತಿ. ಹೀಗೆ ಎಲ್ಲವನ್ನೂ ಮಾಡುತ್ತಾ ಯಾವುದನ್ನೂ ಅಂಟಿಸಿಕೊಳ್ಳದೆ ಬದುಕುವುದನ್ನು ನಾವು ಕಲಿಯಬೇಕು.

**೧೭). ಐಶ್ವರ್ಯ:** ಐಶ್ವರ್ಯ ಎಂದರೆ ಒಡೆತನ. ಧರ್ಮ-ಜ್ಞಾನ-ವೈರಾಗ್ಯ ಪೂರಕವಾದ ಐಶ್ವರ್ಯ ನಮ್ಮದಾಗಿರಬೇಕು. ಐಶ್ವರ್ಯ-ಗಳಿಸುವಂತಹದ್ದಲ್ಲ, ಅದು ನಮ್ಮ ಧರ್ಮ-ಜ್ಞಾನ-ವೈರಾಗ್ಯಕ್ಕನುಗುಣವಾಗಿ ಬರುವಂತಹದ್ದು. ಧನ ಸಂಪತ್ತು ಐಶ್ವರ್ಯವಲ್ಲ. ಜನ ಅಥವಾ ಶಿಷ್ಯ ಸಂಪತ್ತು ನಿಜವಾದ ಐಶ್ವರ್ಯ. ಭಗವಂತ ಸರ್ವೇಶ್ವರ. ಆತನಲ್ಲಿ ಈ ಗುಣ ಪೂರ್ಣಪ್ರಮಾಣದಲ್ಲಿದೆ. ಸಾಧಕನಾದವನು ಇಂತಹ ಐಶ್ವರ್ಯವನ್ನು ಪಡೆಯಬೇಕು. ಇಲ್ಲಿ ನಮಗೆ ಒಂದು ಎಚ್ಚರ ಅತ್ಯಗತ್ಯ. ಧರ್ಮ-ಜ್ಞಾನ-ವೈರಾಗ್ಯ ಇಲ್ಲದ ಐಶ್ವರ್ಯ ಅಧಃಪಾತಕ್ಕೆ ಕಾರಣವಾಗುತ್ತದೆ. ಅಂತಹ ಐಶ್ವರ್ಯವನ್ನು ಹೊಂದುವುದು ಅಸುರ ಲಕ್ಷಣ.

**೧೮). ಶೌರ್ಯಂ:** ಶೌರ್ಯ ಎಂದರೆ ಅನ್ಯಾಯವನ್ನು ದಮನಿಸುವ, ದುಷ್ಟರನ್ನು ನಿಗ್ರಹಿಸುವ ಶಕ್ತಿ. ಇದು ಭಗವಂತನ ಅಸಾಧಾರಣ ಗುಣ. ಈ ಗುಣ ಎಲ್ಲರಲ್ಲಿಯೂ ಪೂರ್ಣಪ್ರಮಾಣದಲ್ಲಿರಬೇಕೆಂದೇನೂ ಇಲ್ಲ. ಆದರೆ ಇದು ಕ್ಷತ್ರಿಯರಲ್ಲಿ ಇರಲೇ ಬೇಕಾದ ಗುಣ. ಭಗವದ್ಭಕ್ತರ ರಕ್ಷಣೆಗಾಗಿ, ದುಷ್ಟರ ನಿಗ್ರಹಕ್ಕಾಗಿ ಶೌರ್ಯವನ್ನು ವಿನಿಯೋಗ ಮಾಡಬೇಕು. ಅದು ಒಂದು ಸಾಧನೆ.

**೧೯). ತೇಜಃ:** ತೇಜಸ್ಸು ಎನ್ನುವುದು ವ್ಯಕ್ತಿತ್ವ. ತೇಜಸ್ಸು ಉಳ್ಳವರ ಎದುರು ನಿಲ್ಲುವ ಧೈರ್ಯ ಒಬ್ಬ ಸಾಮಾನ್ಯನಿಗೆ ಬರುವುದೇ ಇಲ್ಲ. ಇದು ಅಂತರಂಗದ ಬಲ. ಭಗವಂತನದ್ದು ಪೂರ್ಣ ತೇಜಸ್ಸು. ಇದು ಆತನ ಅಸಾಧಾರಣ ಗುಣ. ಪ್ರಾಮಾಣಿಕವಾಗಿ ಸಾಧನೆ ಮಾಡುವ ಸಾಧಕನಲ್ಲಿ ಇಂತಹ ತೇಜಸ್ಸಿರುತ್ತದೆ.

**೨೦). ಧೃತಿಃ:** ಎಂತಹ ಸಂದರ್ಭದಲ್ಲೂ ಎದೆಗೆಡದ ಆತ್ಮವಿಶ್ವಾಸ ಧೃತಿ. ಭಗವಂತ ಧೃತಿಸ್ವರೂಪ. ಆತ ಎದೆಗೆಡುವ ಪ್ರಸಂಗವೇ ಇಲ್ಲ. ಇಂತಹ ಭಗವಂತ ರಕ್ಷಕನಾಗಿ ನಮಗಿರುವಾಗ ನಾವು ಹೆದರುವ ಅಗತ್ಯವಿಲ್ಲ. **"ರಕ್ಷತೀತ್ಯೇವ ವಿಶ್ವಾಸಃ"** ಭಗವಂತ ರಕ್ಷಿಸಿಯೇ ರಕ್ಷಿಸುತ್ತಾನೆ ಎನ್ನುವ ಆತ್ಮವಿಶ್ವಾಸ ನಮ್ಮಲ್ಲಿರುವಾಗ ಯಾರೂ ನಮ್ಮನ್ನು ಏನೂ ಮಾಡಲು ಸಾಧ್ಯವಿಲ್ಲ.

**೨೧). ಸ್ಮೃತಿಃ :** ಯಾವುದನ್ನೂ ಮರೆಯದೇ ಇರುವುದು ಸ್ಮೃತಿ. ಇದು ಭಗವಂತನ ಸಹಜ ಗುಣ. ನಾವೂ ಕೂಡಾ ಈ ಗುಣವನ್ನು ನಮ್ಮದಾಗಿಸಿಕೊಳ್ಳಬೇಕು. ಮುಖ್ಯವಾಗಿ ಶಾಸ್ತ್ರಗಳು. ಶಾಸ್ತ್ರಗಳನ್ನು ನಾವು ಪುಸ್ತಕದಲ್ಲಿರಿಸದೇ, ನಮ್ಮ ಮಸ್ತಕದಲ್ಲಿರಿಸಿಕೊಳ್ಳಲು ಪ್ರಯತ್ನಿಸಬೇಕು. ಆ ರೀತಿ ನಮ್ಮ ಮನಸ್ಸನ್ನು ತರಬೇತಿಗೊಳಿಸಬೇಕು. ಸ್ಮರಣಶಕ್ತಿ

ಎನ್ನುವುದು ಸಾಧನೆಯಲ್ಲಿ ಬಹಳ ಮುಖ್ಯ. ಆದರೆ ಇದು ಒಂದು ಜನ್ಮದ ಸಾಧನೆಯಿಂದ ಬರುವುದಿಲ್ಲ, ಅದಕ್ಕೆ ಅನೇಕ ಜನ್ಮದ ಸಾಧನೆ ಅಗತ್ಯ. ಹಾಗಾಗಿ ಸ್ಮರಣ ಶಕ್ತಿ ಕಡಿಮೆ ಇದ್ದರೆ ಗಾಬರಿಯಾಗದೇ, ನಿರಂತರ ಪ್ರಯತ್ನವನ್ನು ನಾವು ಮುಂದುವರಿಸಬೇಕು.

**೨೨). ಸ್ವಾತಂತ್ರ್ಯಂ:** ಭಗವಂತ ಸರ್ವತಂತ್ರ ಸ್ವತಂತ್ರ. ಆತ ಯಾರ ನಿಯತಿಗೂ ಬದ್ಧನಲ್ಲ. ಜೀವನಿಗೂ ಸ್ವತಂತ್ರ್ಯದ ಬಯಕೆ ಇದ್ದೇ ಇರುತ್ತದೆ. ನಾವು ನಮ್ಮಿಂದ ಕನಿಷ್ಠರಿಂದ ಆಳಿಸಿಕೊಳ್ಳುವುದು ಪಾರತಂತ್ರ್ಯ. ನಮ್ಮಿಂದ ದೊಡ್ಡವರು ನಮ್ಮನ್ನು ಆಳಿದರೆ ಅದು ಪಾರತಂತ್ರ್ಯವಾಗುವುದಿಲ್ಲ.

**೨೩). ಕೌಶಲಂ:** ಯಾವ ಕೆಲಸವನ್ನೇ ಆಗಲಿ, ಅದನ್ನು ಚೊಕ್ಕವಾಗಿ ಮಾಡುವ ತಾಕತ್ತು ಕೌಶಲ. ಭಗವಂತ ಸರ್ವಕರ್ತ. ಅವನಲ್ಲಿ ಈ ಗುಣ ಪೂರ್ಣಪ್ರಮಾಣದಲ್ಲಿದೆ. ನಾವೂ ಕೂಡಾ ಯಾವುದೇ ಕೆಲಸವನ್ನು ಮಾಡಿದರೂ ಚೊಕ್ಕವಾಗಿ ಮಾಡುವ ಕಲೆಗಾರಿಕೆಯನ್ನು ಬೆಳೆಸಿಕೊಳ್ಳಬೇಕು.

**೨೪).ಕಾಂತಿಃ:** ಕಾಂತಿ ಎಂದರೆ 'ಕಮನೀಯತೆ'. ಇದು ವ್ಯಕ್ತಿತ್ವಕ್ಕೆ ಸಂಬಂಧಿಸಿದ ಗುಣ. ಇನ್ನೊಬ್ಬರಿಗೆ ನಾವು ನಮ್ಮನ್ನು ಶ್ರುತಿಗೂಡಿಸಿಕೊಳ್ಳುವುದು ಕಾಂತಿ. ಇದು ಅಂತರಂಗದಲ್ಲಿ ಅರಳುವ ಗುಣ. ವ್ಯಕ್ತಿಯ ಸಾಮಿಪ್ಯ ನಮಗೆ ಇಷ್ಟವಾಗಿ ಅವನು ಇನ್ನಷ್ಟು ಹೊತ್ತು ನಮ್ಮೊಂದಿಗಿರಲಿ ಎಂದು ನಮಗೆ ಅನಿಸುವುದು ಆ ವ್ಯಕ್ತಿಯ ಕಾಂತಿಯಿಂದ. ಸೂರ್ಯ ಉದಿಸಿದಾಗ ಹೇಗೆ ಕಮಲ ಅರಳುತ್ತದೋ, ಹಾಗೇ ವ್ಯಕ್ತಿಯ ಸಾಮಿಪ್ಯದಿಂದ ನಮ್ಮ ಹೃದಯ ಅರಳುವುದು ಕಾಂತಿಯಿಂದ. ಭಗವಂತ ತನ್ನ ಕೃಷ್ಣಾವತಾರದಲ್ಲಿ ಈ ವ್ಯಕ್ತಿತ್ವವನ್ನು ಪೂರ್ಣಪ್ರಮಾಣದಲ್ಲಿ ನಮಗೆ ತೋರಿಸಿ ಕೊಟ್ಟಿರುವುದನ್ನು ಕಾಣುತ್ತೇವೆ. ಪ್ರಾಣಿಗಳು, ಪಕ್ಷಿಗಳು, ಸ್ತ್ರೀಯರು, ಗಂಡಸರು, ಎಲ್ಲರೂ ಕೃಷ್ಣನ ಸಾಮಿಪ್ಯವನ್ನು ಬಯಸುತ್ತಿದ್ದರು ಎನ್ನುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು.

**೨೫). ಸೌಭಾಗ್ಯಂ:** **"ಶುಭೈಕ ಭಾಗೀ ಸುಭಗಃ"** ಬದುಕಿನಲ್ಲಿ ಎಂದೂ ಅಶುಭತನಕ್ಕೆ ಒಳಗಾಗದೆ, ಆನಂದಮಯವಾಗಿರುವುದು ಸುಭಗತನ. ಬದುಕಿನಲ್ಲಿ ಒಳ್ಳೆಯದನ್ನು ಮಾತ್ರ ಕಾಣುವುದು, ಕೆಟ್ಟದ್ದನ್ನು ಕಾಣದಿರುವುದು ಸೌಭಾಗ್ಯ. ಇದು ಕೇವಲ ಭಗವಂತನಿಗೆ ಮಾತ್ರ ಅನ್ವಯವಾಗುವ ಗುಣ. ಆದರೆ ಭಗವದ್ಭಕ್ತರೂ ಕೂಡಾ ಯಥಾಶಕ್ತಿ ಬೆಳೆಸಿಕೊಳ್ಳಬೇಕಾದ ಗುಣ.

**೨೬). ಮಾರ್ದವಂ:** ಯಾವುದೇ ಸಂದರ್ಭದಲ್ಲೂ ಕೂಡಾ ನಿಷ್ಠುರವಾಗಿ ಮಾತನಾಡದೇ, ಮೃದುವಾಗಿ, ಸಭ್ಯತನದಿಂದ ವರ್ತಿಸುವುದು ಮಾರ್ದವ. ಈ ಗುಣವನ್ನು ಭಗವಂತ ತನ್ನ ರಾಮಾವತಾರದಲ್ಲಿ ಪೂರ್ಣ ಪ್ರಮಾಣದಲ್ಲಿ ನಮಗೆ ತೋರಿಸಿಕೊಟ್ಟಿದ್ದಾನೆ. ತನ್ನನ್ನು ಕಾಡಿಗೆ ಕಳುಹಿಸಿದ ಕೈಕೇಯಿಯೊಂದಿಗೆ ಶ್ರೀರಾಮಚಂದ್ರ ನೆಡೆದುಕೊಂಡ ರೀತಿ ಇದಕ್ಕೊಂದು ಉತ್ತಮ ಉದಾಹರಣೆ. ತನ್ನನ್ನು ಕಾಡಿನಿಂದ ಹಿಂದೆ ಕರೆತರಬೇಕೆಂದು ಬಂದ ಭರತನಿಗೆ ಪಾದುಕೆಯನ್ನು ನೀಡಿ ಕಳುಹಿಸುವಾಗ ಶ್ರೀರಾಮ "ಎಂದೆಂದಿಗೂ ತಾಯಿಯನ್ನು ಹಂಗಿಸಿ ಮಾತನಾಡುವುದಿಲ್ಲ" ಎಂದು ಮಾತು ಕೊಡು ಎಂದು ಕೇಳುತ್ತಾನೆ. ಹೀಗೆ ಯಾವ ಸಂದರ್ಭದಲ್ಲೂ ಮನಸ್ಸಿನಲ್ಲಿ ಕ್ರೂರವಾದ ಭಾವನೆ ಬಾರದೇ ಇರುವುದು ಮಾರ್ದವ.

**೨೭). ಕ್ಷಮಾ:** ಯಾರ ಬಗ್ಗೆಯೂ ಕೋಪ ಇಲ್ಲದಿರುವುದು, ಯಾರ ಬಗ್ಗೆಯೂ ಕೆಟ್ಟ ಭಾವನೆಯನ್ನು ಮನಸ್ಸಿನಲ್ಲಿ ತಂದುಕೊಳ್ಳದೇ ಇರುವುದು ಕ್ಷಮಾ ಗುಣ. [ತಪ್ಪನ್ನು ತಿದ್ದಿಕೊಂಡು ಒಳ್ಳೆಯನಾಗಿ ಬಾಳಲಿ ಎನ್ನುವ ಕಾರುಣ್ಯದಿಂದ ತಪ್ಪಿತಸ್ಥರನ್ನು ಅಧಿಕಾರಿ ಶಿಕ್ಷಿಸುವುದು ಕ್ರೌರ್ಯವಲ್ಲ.]

**೧೮). ಪ್ರಾಗಲ್ಭ್ಯಂ:** ಯಾವುದೇ ಒಂದು ಕ್ರಿಯೆಯಲ್ಲಿ, ಜೀವನದ ಪ್ರತಿಯೊಂದು ವಿಷಯದಲ್ಲಿ ದಕ್ಷತೆ(Maturity/Perfection) ತೋರುವುದು ಪ್ರಾಗಲ್ಭ್ಯಂ. ಈ ಗುಣ ಭಗವಂತನಲ್ಲಿ ಪೂರ್ಣಪ್ರಮಾಣದಲ್ಲಿದೆ. ನಾವೂ ಕೂಡಾ ನಮ್ಮ ಜೀವನದಲ್ಲಿ ಪ್ರಾಗಲ್ಭ್ಯತೆಯನ್ನು ಬೆಳೆಸಿಕೊಳ್ಳಬೇಕು.

**೧೯). ಪ್ರಶ್ರಯಃ:** ನಮ್ಮಲ್ಲಿ ದಕ್ಷತೆ ಬೆಳೆದಾಗ ಅಹಂಕಾರ(Ego) ಬರುವ ಸಾಧ್ಯತೆ ಹೆಚ್ಚು. ಹಾಗಾಗದೇ ಇರಬೇಕಾದರೆ ನಮ್ಮಲ್ಲಿ ವಿನಯ, ಸೌಜನ್ಯ ಇರಬೇಕು. ಇದನ್ನು ಪ್ರಶ್ರಯ ಎನ್ನುತ್ತಾರೆ. ರಾಮ ಮತ್ತು ಕೃಷ್ಣಾವತಾರದಲ್ಲಿ ಭಗವಂತ ಈ ಗುಣವನ್ನು ಯಥೇಚ್ಛವಾಗಿ ನಮಗೆ ತೋರಿಸಿಕೊಟ್ಟಿದ್ದಾನೆ. ಕಾಡಿಗೆ ಹೊರಡುವ ಮುನ್ನ, ತಾನು ಕಾಡಿಗೆ ಹೋಗಲು ಕಾರಣೀಕರ್ತೆಯಾದ ಕೈಕೇಯಿಗೆ ನಮಸ್ಕರಿಸಿ ಆಶೀರ್ವಾದ ಬೇಡುತ್ತಾನೆ ಶ್ರೀರಾಮಚಂದ್ರ. ಇದು ಪ್ರಶ್ರಯ.

**೨೦). ಶೀಲಂ:** ಶೀಲ ಎಂದರೆ ನಡತೆ(Character). ನಾವು ನಮ್ಮ ಜೀವನದಲ್ಲಿ ಏನನ್ನು ಆಚರಿಸುತ್ತೇವೆ-ಅದು ಮುಖ್ಯ. ಇನ್ನೊಬ್ಬರಿಗೆ ಉಪದೇಶ ಕೊಟ್ಟು ಅದಕ್ಕೆ ವ್ಯತಿರಿಕ್ತ ನಾವು ನಡೆಯುವುದು ಸನ್ನಡತೆಯಲ್ಲ. ಶ್ರೀಕೃಷ್ಣ ಯುದ್ಧರಂಗದಲ್ಲಿ ಅರ್ಜುನನಿಗೆ ಏನನ್ನು ಉಪದೇಶಿದ್ದನೋ, ಅದನ್ನೇ ತನ್ನ ಅವತಾರದಲ್ಲಿ ನಡೆದು ತೋರಿದ.

**೨೧-೨೨). ಸಹಃ-ಓಜಃ:** "ಅನಭಿಬಾಧ್ಯತ್ವಂ ಸಹಃ"- ಇನ್ನೊಬ್ಬರಿಗೆ ಮಣಿಯದ ತಾಕತ್ತು ಸಹಃ. "ಅತಿಭವಶಕ್ತಿತಃ ಓಜಃ"-ಇನ್ನೊಬ್ಬರನ್ನು ಮಣಿಸುವ ತಾಕತ್ತು ಓಜಃ. ಇವು ಒಂದೇ ನಾಣ್ಯದ ಎರಡು ಮುಖಗಳು. ಶತ್ರುಗಳು ನಮ್ಮ ಮೇಲೆ ಎರಗಿದಾಗ ಅವರ ಬಲ ಪ್ರಯೋಗವನ್ನು ಸಹಿಸುವ ತಾಕತ್ತು ಸಹಃ. ಅವರನ್ನು ಮಣಿಸುವ ತಾಕತ್ತು ಓಜಃ.

**೨೩). ಬಲಂ:** ಮನೋಬಲ, ಆತ್ಮಬಲ ಮತ್ತು ದೇಹಬಲ. ಇದು ಒಬ್ಬ ಸಾಧಕನಿಗೆ ಸಾಧನಾ ಮಾರ್ಗದಲ್ಲಿ ಅತ್ಯವಶ್ಯಕ.

**೨೪). ಭಗಃ:** ಸೌಭಾಗ್ಯದ ಇನ್ನೊಂದು ಮುಖ ಭಗಃ. ಷಡ್ಗುಣಗಳು ಪೂರ್ಣಪ್ರಮಾಣದಲ್ಲಿರುವ ಭಗವಂತ ಭಗಃ. ಸಾಧಕನಲ್ಲಿಯೂ ಯಥಾಶಕ್ತಿ ಜ್ಞಾನ, ಶಕ್ತಿ, ಐಶ್ವರ್ಯ, ವೀರ್ಯ, ಬಲ, ತೇಜಸ್ಸು(ಷಡ್ಗುಣ) ಇರತಕ್ಕದ್ದು. ಇನ್ನು ಭಗಃ ಎಂದರೆ ಭಾಗ್ಯವಿಶೇಷ, ಎಲ್ಲಕ್ಕಿಂತ ಎತ್ತರಕ್ಕೇರುವ ಯೋಗ್ಯತೆ. ಭಗವಂತ ಎಲ್ಲಕ್ಕಿಂತ ಎತ್ತರದಲ್ಲಿರುವವನು. ನಾವೂ ಕೂಡಾ ಜ್ಞಾನ ಮಾರ್ಗದ ಮುಖೇನ ಎತ್ತರಕ್ಕೇರುವ ಪ್ರಯತ್ನ ಮಾಡಬೇಕು.

**೨೫). ಗಾಂಭೀರ್ಯಂ:** ಆಳವಾದ ವ್ಯಕ್ತಿತ್ವ ಗಾಂಭೀರ್ಯ. ಒಬ್ಬರ ವ್ಯಕ್ತಿತ್ವ ಇನ್ನೊಬ್ಬರಿಗೆ ಲಘುವಾಗಿ ಕಾಣುವಂತೆ ಇರಬಾರದು. ವ್ಯಕ್ತಿತ್ವದ ಆಳ ಇನ್ನೊಬ್ಬರಿಗೆ ಸಿಗದಷ್ಟು ಗಾಂಭೀರ್ಯವನ್ನು ಜ್ಞಾನದ ಮುಖೇನ ನಾವೂ ನಮ್ಮ ಜೀವನದಲ್ಲಿ ಬೆಳೆಸಿಕೊಳ್ಳಬೇಕು.

**೨೬). ಸ್ಥೈರ್ಯಂ:** ಯಾರು ಏನೇ ಹೇಳಿದರೂ, ನಮ್ಮದೇ ಆದ ಅಚಲ ಬುದ್ಧಿಯಿಂದ ಸತ್ಕಾರ್ಯ ನಿರ್ವಹಿಸುವುದು ಸ್ಥೈರ್ಯ(Conviction).

**೨೭). ಆಸ್ತಿಕ್ಯಂ:** ನಮ್ಮ ಅನುಭವಕ್ಕೆ ಈ ತನಕ ಬಾರದೇ ಇರುವುದೂ ಈ ಪ್ರಪಂಚದಲ್ಲಿ ಇರಲು ಸಾಧ್ಯ ಎನ್ನುವ ನಂಬಿಕೆ ಆಸ್ತಿಕ್ಯ. ಈ ಪ್ರಪಂಚದಲ್ಲಿ ನಮಗೆ ಗೊತ್ತಿರುವುದಕ್ಕಿಂತ ಗೊತ್ತಿಲ್ಲದೇ ಇರುವ ವಿಚಾರಗಳೇ ಅಧಿಕ. ಈ ಎಚ್ಚರ ನಮಗಿರಬೇಕು. ಭಗವಂತನಿಗೆ ಅಗೋಚರವಾದುದು ಯಾವುದೂ ಇಲ್ಲ. ಹೀಗಿರುವಾಗ ಅಲ್ಲಿ ನಾಸ್ತಿಕ್ಯದ ಪ್ರಶ್ನೆಯೇ ಇಲ್ಲ.

**೨೮). ಕೀರ್ತಿಃ:** ಜಗತ್ತಿನ ಜನರು ನಮ್ಮ ಬಗ್ಗೆ ಒಳ್ಳೆಯ ಮಾತನಾಡುವಂತೆ, ನೂರಾರು ಕಾಲ ನಮ್ಮ ವ್ಯಕ್ತಿತ್ವವನ್ನು ನೆನಸಿಕೊಂಡು ಸ್ಫೂರ್ತಿಯಿಂದ ಬದುಕುವಂತೆ ನಾವು ಬದುಕುವುದು ಕೀರ್ತಿ. ಸರ್ವಶಬ್ದವಾಚ್ಯನಾದ ಭಗವಂತ ಸರ್ವಶಬ್ದದಿಂದಲೂ ಕೀರ್ತನೀಯ.

**೩೯). ಮಾನಃ: "ಮಾನಃ ಪರೇಷಾಂ"**- ಇನ್ನೊಬ್ಬರು ನಮಗೆ ಗೌರವ ಕೊಡುವಂತೆ ಬದುಕುವ ಗುಣ ಮಾನ. ನಾವು ಇನ್ನೊಬ್ಬರಲ್ಲಿ "ನಮಗೆ ಗೌರವ ಕೊಡಿ" ಎಂದು ಕೇಳುವುದನ್ನು ಬಿಟ್ಟು, ಇನ್ನೊಬ್ಬರಿಗೆ ಗೌರವ ಕೊಡುವುದನ್ನು ಕಲಿಯಬೇಕು. ಎಲ್ಲಿ ಗೌರವಾನ್ವಿತ ವ್ಯಕ್ತಿತ್ವವಿದೆ, ಅದನ್ನು ಗೌರವದಿಂದ ಕಾಣುವುದು ಬಹಳ ದೊಡ್ಡ ಗುಣ. ರಾಜಸೂಯ ಯಾಗದಲ್ಲಿ ಅಗ್ರಪೂಜೆ ಪಡೆದ ಶ್ರೀಕೃಷ್ಣ, ಪೂಜೆಗೆ ಮೊದಲು ಅಲ್ಲಿಗೆ ಆಗಮಿಸಿದ ಋಷಿ-ಮುನಿಗಳ ಚಾಕರಿ ಮಾಡುವುದರಲ್ಲಿ ನಿರತನಾಗಿದ್ದ. ಅದೇ ರೀತಿ- 'ದ್ವಾರಕೆಯನ್ನೊಮ್ಮೆ ನೋಡಬೇಕು' ಎಂದು ಬಯಸಿದ ದುರ್ವಾಸ ಮುನಿಗಳನ್ನು, ಸ್ವಯಂ ಶ್ರೀಕೃಷ್ಣ ಕೈಗಾಡಿಯಲ್ಲಿ ಕುಳ್ಳಿರಿಸಿಕೊಂಡು ರಾಜಧಾನಿಯನ್ನು ತೋರಿಸಿ ಗೌರವಿಸಿದ್ದ. ಇವೆಲ್ಲವೂ ಹಿರಿಯರನ್ನು, ಜ್ಞಾನಿಗಳನ್ನು ನಾವು ಹೇಗೆ ಗೌರವದಿಂದ ಕಾಣಬೇಕು ಎನ್ನುವುದನ್ನು ಭಗವಂತ ತೋರಿಸಿದ ರೀತಿ. ಕಂಸನನ್ನು ಕೊಂದು, ತಂದೆ-ತಾಯಿಯರನ್ನು ಕಾಣಲು ಬಂದ ಶ್ರೀಕೃಷ್ಣ, ತಾಯಿ ದೇವಕಿಯಲ್ಲಿ ನುಡಿದ ಮಾತು ಮನ ಮಿಡಿಯುವಂತಹದ್ದು. "ಹೆತ್ತ ತಾಯಿಯನ್ನು ಹತ್ತು ವರ್ಷ ಕಣ್ಣೀರು ಸುರಿಸುವಂತೆ ಮಾಡಿದ ಭಾಗ್ಯಹೀನ ಮಗ ನಾನು. ನನ್ನನ್ನು ಕ್ಷಮಿಸು ತಾಯಿ" ಎಂದು ನಮಸ್ಕರಿಸಿದ್ದ ಶ್ರೀಕೃಷ್ಣ. ಇವೆಲ್ಲವೂ ಇನ್ನೊಬ್ಬರನ್ನು ಗೌರವದಿಂದ ಕಾಣುವ ರೀತಿ.

**೪೦). ಅನಹಂಕೃತಿಃ:** ಎಷ್ಟೇ ಎತ್ತರಕ್ಕೇರಿದರೂ ಕೂಡಾ, ನಾವು ನಮ್ಮ ಎತ್ತರದ ಬಗೆಗೆ ಅಹಂಕಾರ ಪಡಬಾರದು. ನಮ್ಮ ಬಗ್ಗೆ ನಮಗೆ ಗೊತ್ತಿಲ್ಲದೇ ಇರುವುದು ಅಹಂಕಾರಕ್ಕೆ ಕಾರಣ. ಸರ್ವಜ್ಞನಾದ ಭಗವಂತನಿಗೆಲ್ಲಿಯ ಅಹಂಕಾರ? ನಾವೂ ಕೂಡಾ ನಮ್ಮ ಜೀವನದಲ್ಲಿ ಅನಹಂಕಾರವನ್ನು ಬೆಳೆಸಿಕೊಳ್ಳಬೇಕು.

ಇಮೇ ಚಾನ್ಯೇ ಚ ಭಗವನ್ ನಿತ್ಯಾ ಯತ್ರ ಮಹಾಗುಣಾಃ ।
ಪ್ರಾರ್ಥ್ಯಾ ಮಹತ್ತ್ವಮಿಚ್ಛದ್ಭಿಃ ನ ಚ ಯಾಂತಿ ಸ್ಮ ಕರ್ಹಿಚಿತ್ ॥೩೦॥

ತೇನಾಹಂ ಗುಣಪಾತ್ರೇಣ ಶ್ರೀನಿವಾಸೇನ ಸಾಂಪ್ರತಮ್ ।
ಶೋಚಾಮಿ ರಹಿತಂ ಲೋಕಂ ಪಾಪ್ಮನಾ ಕಲಿನೇಕ್ಷಿತಮ್ ॥೩೧॥

ಇಂತಹ ಅನಂತ ಗುಣಗಳು ಭಗವಂತನಲ್ಲಿ ನಿತ್ಯ. ಅವು ತಾತ್ಕಾಲಿಕವಲ್ಲ. ನಾವು ಎತ್ತರಕ್ಕೇರಿ ಮೋಕ್ಷವನ್ನು ಪಡೆಯಬೇಕಾದರೆ ಜೀವನದಲ್ಲಿ ಬಯಸಬೇಕಾದ ಗುಣಗಳಿವು. ಇಂತಹ ಗುಣಗಳನ್ನು ಗಳಿಸಿ, ಅದನ್ನು ನಿತ್ಯವಾಗಿ ಉಳಿಸಿಕೊಳ್ಳಬೇಕು.

ಹೀಗೆ ಗೋವಿನ-ರೂಪದಲ್ಲಿರುವ ಭೂದೇವಿ, ವೃಷಭ ರೂಪದಲ್ಲಿರುವ ಧರ್ಮದ ಬಳಿ ಭಗವಂತನ ಗುಣಗಾನ ಮಾಡಿ ಹೇಳುತ್ತಾಳೆ: "ಇಂತಹ ಗುಣಪೂರ್ಣ ಶ್ರೀಕೃಷ್ಣ ತನ್ನ ಅವತಾರ ಸಮಾಪ್ತಿಗೊಳಿಸಿದ. ಆದ್ದರಿಂದ ಇಂದು ಈ ಯಾವ ಗುಣಗಳೂ ಭೂಮಿಯಲ್ಲಿ ಉಳಿದಿಲ್ಲ ಎನಿಸುತ್ತಿದೆ" ಎಂದು. ಮುಂದುವರಿದು ಭೂದೇವಿ ಹೇಳುತ್ತಾಳೆ: "ಶ್ರೀನಿವಾಸ ಭೂಮಿಯನ್ನು ಬಿಟ್ಟು ಹೊರಟುಹೋದನೆಂದು ದುಃಖವಾಗುತ್ತಿದೆ. ಶ್ರೀಕೃಷ್ಣನಿಲ್ಲದೆ, ಪಾಪಿಯಾದ ಕಲಿಯ ದೃಷ್ಟಿಪಾತಕ್ಕೆ ಬಲಿಯಾಗುತ್ತಿರುವ ಈ ಜನರನ್ನು ಕಂಡಾಗ 'ಅಯ್ಯೋ' ಎನಿಸುತ್ತಿದೆ" ಎಂದು.

ಇಲ್ಲಿ ಶ್ರೀಕೃಷ್ಣನನ್ನು 'ಶ್ರೀನಿವಾಸ' ಎಂದು ಸಂಬೋಧಿಸಿದ್ದಾರೆ. ಶ್ರೀನಿವಾಸ ಎನ್ನುವುದು ಕೃಷ್ಣನ ಒಂದು ರೂಪ. ಮದುವೆ ಆಗದ ಕೃಷ್ಣ ವಿಠಲನಾದರೆ, ಮದುವೆಯಾದ ಕೃಷ್ಣ ಶ್ರೀನಿವಾಸ. ಯಾರು ಭಗವಂತನ ತೊಡೆಯನ್ನು ಆಶ್ರಯಿಸಿಕೊಂಡಿದ್ದಾಳೋ-ಅವಳು ಶ್ರೀ. ಅಂತಹ ತೊಡೆಯಲ್ಲಿ ಶ್ರೀದೇವಿಯನ್ನು ಕೂರಿಸಿಕೊಂಡಿರುವ ನಾರಾಯಣನೇ

ಶ್ರೀನಿವಾಸ. ಇದಲ್ಲದೆ ಶ್ರೀ ಎಂದರೆ ಸದ್ಗುಣಗಳು; ಶ್ರೀ ಎಂದರೆ ವೇದಗಳು. ಸದ್ಗುಣಗಳ ನಿವಾಸ ವೇದವೇದ್ಯ ಭಗವಂತ ಶ್ರೀನಿವಾಸ.

ಈ ರೀತಿ ಧರ್ಮ-ಭೂದೇವಿಯರ ನಡುವೆ ನಡೆಯುತ್ತಿರುವ ಸಂವಾದವನ್ನು ಅಚ್ಚರಿಯಿಂದ ನೋಡಿದ ಪರೀಕ್ಷಿತರಾಜ, ಅವರಿದ್ದಲ್ಲಿಗೆ ಹೋಗುತ್ತಾನೆ.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಷೋಡಶೋಽಧ್ಯಾಯಃ ॥**

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹದಿನಾರನೇ ಅಧ್ಯಾಯ ಮುಗಿಯಿತು.

*********

# ಸಪ್ತದಶೋಽಧ್ಯಾಯಃ

## ಕಲಿ ನಿಗ್ರಹ ಮಾಡಿದ ಪರೀಕ್ಷಿತ

**ಸೂತ ಉವಾಚ--**

ತತ್ರ ಗೋಮಿಥುನಂ ರಾಜಾ ಹನ್ಯಮಾನಮನಾಥವತ್ ।
ದಂಡಹಸ್ತಂ ಚ ವೃಷಳಂ ದದೃಶೇ ನೃಪಲಾಂಛನಮ್ ॥೧॥

ವೃಷಂ ಮೃಣಾಲಧವಳಂ ಮೇಹಂತಮಿವ ಬಿಭ್ಯತಮ್ ।
ವೇಪಮಾನಂ ಪದೈಕೇನ ಸೀದಂತಂ ಶೂದ್ರಪೀಡಿತಮ್ ॥೨॥

ರಾಜನ ವೇಷತೊಟ್ಟ ಕರಾಳ ವ್ಯಕ್ತಿ ಹಸು ಮತ್ತು ಎತ್ತನ್ನು ಹೊಡೆಯುತ್ತಿರುವಂತೆ; ಕಮಲದ ನಾಳದಂತೆ ಶುಭ್ರ ಬಿಳಿ ಬಣ್ಣದ, ಮೂರು ಕಾಲುಗಳನ್ನು ಕಳೆದುಕೊಂಡು ಒಂದೇ ಕಾಲಲ್ಲಿ ನಿಂತಿರುವ ಎತ್ತು ಆ ವ್ಯಕ್ತಿಯನ್ನು ಕಂಡು ಹೆದರಿ ಸೆಗಣಿ ಹಾಕುತ್ತಿರುವಂತೆ; ಹೊಡೆತಕ್ಕೆ ಹೆದರಿ ಹಸು ಕಣ್ಣೀರು ಸುರಿಸುತ್ತಿರುವಂತೆ ಪರೀಕ್ಷಿತನಿಗೆ ದರ್ಶನವಾಗುತ್ತದೆ(Vison).

ಪೌರಾಣಿಕ ಸಾಹಿತ್ಯದಲ್ಲಿ ಕೆಲವು ಸಂಕೇತಗಳಿರುತ್ತವೆ. ಉದಾಹರಣೆಗೆ ಅಧ್ಯಾತ್ಮದಲ್ಲಿ 'ಹಾವು' ಕುಂಡಲಿನಿ ಸಂಕೇತ. ಅದೇ ರೀತಿ ಇಲ್ಲಿ ಹಸು ಭೂದೇವಿ ಸಂಕೇತ; ಎತ್ತು ಧರ್ಮದ ಸಂಕೇತ ಮತ್ತು ಬಿಳಿ ಬಣ್ಣ ಸಾತ್ವಿಕತೆಯ ಸಂಕೇತ. ಇಲ್ಲಿ 'ಶೂದ್ರ' ಎನ್ನುವ ಪದವನ್ನು ಕ್ರೌರ್ಯದ ಸಂಕೇತವಾಗಿ ಬಳಸಲಾಗಿದೆ. ಕ್ಷತ್ರಿಯ ವೇಷವಿದೆ ಆದರೆ ಪಾಲಕತ್ವವಿಲ್ಲ. ನಿರಂತರ ಪೀಡಿಸುತ್ತಿದ್ದಾನೆ ಆ ವ್ಯಕ್ತಿ.

ಇಂತಹ ವಿಚಿತ್ರ ದೃಶ್ಯವನ್ನು ಕಂಡ ಪರೀಕ್ಷಿತ ತಕ್ಷಣ ಕೇಳುತ್ತಾನೆ: "ಯಾರು ನೀವು? ನಿನ್ನ ಮೂರು ಕಾಲುಗಳಿಗೆ ಏನಾಗಿದೆ? ನೀನೇಕೆ ತತ್ತರಿಸುತ್ತಿರುವೆ? ನಿಮ್ಮನ್ನು ಹೊಡೆಯುತ್ತಿರುವ ಈ ವ್ಯಕ್ತಿ ಯಾರು? ನನ್ನ ಅಜ್ಜಂದಿರರಾದ ಪಾಂಡವರು ಮತ್ತು ಅವರಿಗೆ ರಕ್ಷಕನಾಗಿದ್ದ ಶ್ರೀಕೃಷ್ಣ ಭೂಮಿಯಿಂದ ಹೊರಟುಹೋದ ಮೇಲೆ, ದೂರ್ತರಿಗೆ ಇಷ್ಟೊಂದು ಸ್ವಾತಂತ್ರ್ಯ ಬಂದು ಹೋಯಿತೇ? ಪಾಂಡವರ ಮೊಮ್ಮಗನಾದ ನಾನು ಶ್ರೀಕೃಷ್ಣನ ಆಶ್ರಯದಿಂದ ನಿಂತವನು. ನಾನಿರುವಾಗ ಇಲ್ಲಿ ಇಂತಹ ಅನ್ಯಾಯಕ್ಕೆ ಅವಕಾಶವಿಲ್ಲ" ಎಂದು ಗರ್ಜಿಸುತ್ತಾನೆ ಪರೀಕ್ಷಿತ.

ಕೋಽವೃಶ್ಚತ್ತವ ಪಾದಾಂಸ್ತ್ರೀನ್ ಸೌರಭೇಯ ಚತುಷ್ಪದಃ ।
ಮಾ ಭೂವಂಸ್ತ್ವಾದೃಶಾ ರಾಷ್ಟ್ರೇ ರಾಜ್ಞಾಂ ಕೃಷ್ಣಾನುವರ್ತಿನಾಮ್ ॥೧೨॥

ತಾನು ಕಾಣುತ್ತಿರುವುದು ಕೇವಲ ಹಸು-ಗೂಳಿಯನ್ನಲ್ಲ. ಯಾವುದೋ ದೇವತಾ ಶಕ್ತಿ ಇಂತಹ ದರ್ಶನ(Vision) ಕೊಡುತ್ತಿದೆ ಎನ್ನುವುದನ್ನು ಮನಗಂಡ ಪರೀಕ್ಷಿತ ಕೇಳುತ್ತಾನೆ : "ನಿನಗೆ ನಾಲ್ಕು ಕಾಲುಗಳಿರಬೇಕು. ನಿನ್ನ ಮೂರು ಕಾಲುಗಳನ್ನು ಕತ್ತರಿಸಿದವರು ಯಾರು? ಶ್ರೀಕೃಷ್ಣ ಮತ್ತು ಪಾಂಡವರ ಆಶೀರ್ವಾದ ಇರತಕ್ಕಂತಹ ನನ್ನ ಕರ್ಮಭೂಮಿಯಲ್ಲಿ ಇಂತಹ ಒಂದು ಘಟನೆ ನಡೆಯಿತು ಎಂದರೆ ಅದು ನಮ್ಮ ಹಿರಿಯರಿಗೆ ಅವಮಾನ" ಎಂದು.

ಅನಾಗಃಸ್ವಿಹ ಭೂತೇಷು ಯ ಆಗಸ್ಕೃನ್ನಿರಂಕುಶಃ ।
ಆಹರ್ತಾಸ್ಮಿ ಭುಜಂ ಸಾಕ್ಷಾದಮರ್ತ್ಯಸ್ಯಾಪಿ ಸಾಂಗದಮ್ ॥೧೪॥

"ಯಾರು ನಿನ್ನ ಕಾಲನ್ನು ಮುರಿದವರು ? ನಿನ್ನ ಕಾಲನ್ನು ಮುರಿದವರು ಯಾರೇ ಇರಲಿ, ಅವರು ನಿನಗೆ ಅನ್ಯಾಯ ಮಾಡಿದ್ದರೆ, ಅವರ ತೋಳನ್ನು ಕತ್ತರಿಸುತ್ತೇನೆ. ಅವರು ದೇವಲೋಕದಿಂದ ಬಂದವರೇ ಆಗಿರಲಿ; ನನ್ನ ರಾಜ್ಯದಲ್ಲಿ ಇಂತಹ ಅನ್ಯಾಯವನ್ನು ನಾನು ಸಹಿಸಲಾರೆ" ಎಂದು ಆವೇಶದಿಂದ ನುಡಿಯುತ್ತಾನೆ ಪರೀಕ್ಷಿತ.

ಧರ್ಮ ಉವಾಚ--

ಏತದ್ವಃ ಪಾಂಡವೇಯಾನಾಂ ಯುಕ್ತಮಾರ್ತಾಭಯಂ ವಚಃ ।
ಯೇಷಾಂ ಗುಣಗಣೈಃ ಕೃಷ್ಣೋ ದೌತ್ಯಾದೌ ಭಗವಾನ್ ವೃತಃ ॥೧೬॥

ಪರೀಕ್ಷಿತನ ಮಾತಿಗೆ ವೃಷಭ(ಧರ್ಮ) ಉತ್ತರಿಸುತ್ತಾನೆ. "ನೀನು ಆಡಬೇಕಾದ ಮಾತನ್ನೇ ಆಡಿದ್ದೀಯ. ಪಾಂಡವರ ವಂಶದಲ್ಲಿ ಹುಟ್ಟಿದವರ ಬಾಯಿಯಲ್ಲಿ ಬರಬೇಕಾದ ಮಾತಿದು. ಕಷ್ಟಕ್ಕೆ ಒಳಗಾದವರಿಗೆ ಅಭಯರಕ್ಷೆ ನೀಡುವುದನ್ನು ಪಾಂಡವರು ನಿರಂತರ ಮಾಡಿದರು. ಯಾರ ಗುಣಕ್ಕೆ ಮರುಳಾಗಿ ಭಗವಂತ ಅವರ ಧೂತನಾಗಿ ನಡೆದುಕೊಂಡನೋ, ಅಂತಹ ಪಾಂಡವರ ಮೊಮ್ಮಗನಾದ ನಿನ್ನ ಬಾಯಿಯಲ್ಲಿ ಬರಬೇಕಾದ ನ್ಯಾಯವಾದ ಮಾತಿದು. ಇಂತಹ ಮಾತನ್ನು ನಿನ್ನಿಂದ ಕೇಳಿ ಬಹಳ ಸಂತೋಷವಾಯಿತು" ಎನ್ನುತ್ತಾನೆ.

ನ ವಯಂ ಕ್ಲೇಶಬೀಜಾನಿ ಯತಃ ಸ್ಯುಃ ಪುರುಷರ್ಷಭ ।
ಪುರುಷಂ ತಂ ವಿಜಾನೀಮೋ ವಾಕ್ಯಭೇದವಿಮೋಹಿತಾಃ ॥೧೭॥

ಪರೀಕ್ಷಿತನ ಪ್ರಶ್ನೆಗೆ ಒಗಟಿನಂತೆ ಉತ್ತರಿಸುತ್ತಾ ವೃಷಭ ಹೇಳುತ್ತಾನೆ: ಯಾರು ನನ್ನ ಕಾಲನ್ನು ಮುರಿದರು ಎನ್ನುವುದು ನನಗೆ ತಿಳಿದಿಲ್ಲ. ಜೀವನದಲ್ಲಿ ಅನೇಕ ಆಪತ್ತುಗಳು ಬರುತ್ತವೆ. ಅದು ಯಾರಿಂದ ಯಾಕಾಗಿ ಬರುತ್ತವೆ ಯಾರಿಗೆ ಗೊತ್ತು? ಯಾರಿಂದಾಗಿ ಈ ರೀತಿಯ ದುರಂತಗಳು ಜೀವನದಲ್ಲಿ ನಡೆಯುತ್ತವೆ, ಆ ಪುರುಷ ಯಾರು ಎನ್ನುವುದೇ ನನಗೆ ತಿಳಿದಿಲ್ಲ. ಶಾಸ್ತ್ರಗಳಲ್ಲೂ ಕೂಡಾ ವಾಕ್ಯ ಭೇದವಿರುವುದರಿಂದ ಅದರ ಅರ್ಥ ತಿಳಿಯದಾಗಿದೆ.

ಕೇಚಿದ್ ವೈಕಲ್ಪವಚಸ ಆಹುರಾತ್ಮಾನಮಾತ್ಮನಃ ।
ದೈವಮನ್ಯೇ ಪರೇ ಕರ್ಮ ಸ್ವಭಾವಮಪರೇ ಪ್ರಭುಮ್ ॥೧೮॥

ಅಪ್ರತರ್ಕ್ಯಾದನಿರ್ವಾಚ್ಯಾದಿತಿ ಕೇಷ್ವಪಿ ನಿಶ್ಚಯಃ ।
ಅತ್ರಾನುರೂಪಂ ರಾಜರ್ಷೇ ವಿಮೃಶ ಸ್ವಮನೀಷಯಾ ॥೧೯॥

ಕೆಲವರು "ನಿನ್ನ ಸುಖ-ದುಃಖಗಳಿಗೆ ನೀನೇ ಕಾರಣ" ಎನ್ನುತ್ತಾರೆ; ಕೆಲವರು ಅದೃಷ್ಟ ಕಾರಣ ಎನ್ನುತ್ತಾರೆ; ಕೆಲವರು ಜೀವನದಲ್ಲಿ ನಡೆಯುವ ದುರಂತಗಳಿಗೆ ನಮ್ಮ ಕರ್ಮ ಕಾರಣ ಎನ್ನುತ್ತಾರೆ; ಕೆಲವರು ಮನಸ್ಸು ಕಾರಣ ಎಂದರೆ, ಇನ್ನು ಕೆಲವರು ಎಲ್ಲವುದಕ್ಕೂ ಕೊನೆಯ ನಿರ್ಣಾಯಕ ನಮ್ಮ ಜೀವಸ್ವಭಾವ ಎನ್ನುತ್ತಾರೆ.
ನಮ್ಮ ಸ್ವಭಾವವನ್ನು ನಿಯಂತ್ರಿಸತಕ್ಕಂತಹ ಸ್ವತಂತ್ರವಾದ ಭಾವ ಭಗವಂತ. ಅವನು ನಮ್ಮ ಸ್ವಭಾವಕ್ಕನುಸಾರವಾಗಿ ಎಲ್ಲವನ್ನೂ ಮಾಡಿಸುತ್ತಾನೆ. ಭಗವಂತನ ನಿಯಂತ್ರಣ ತರ್ಕಕ್ಕೆ ಮೀರಿದ ವಿಚಾರ. ಅದನ್ನು ವಿವರಿಸಲು ಯಾರಿಂದಲೂ ಸಾಧ್ಯವಿಲ್ಲ. ಹೀಗೆ ನಮ್ಮ ಮಾತಿಗೆ, ಮನಸ್ಸಿಗೆ, ಚಿಂತನೆಗೆ ಮೀರಿದ ಭಗವಂತನೇ ಎಲ್ಲವನ್ನೂ ನಿಯಂತ್ರಿಸುತ್ತಾನೆ ಎನ್ನುತ್ತಾರೆ ಕೆಲವರು. "ಈ ಎಲ್ಲಾ ಕಾರಣದಿಂದ ನನ್ನ ಈ ಸ್ಥಿತಿಗೆ ಕಾರಣ ಏನೆಂಬುದು ನನಗೆ ತಿಳಿಯುತ್ತಿಲ್ಲ. ರಾಜರ್ಷಿಯಾದ ನಿನಗೆ ಭಗವಂತ ಚಿಂತನಾಶಕ್ತಿ ಕೊಟ್ಟಿದ್ದಾನೆ. ನೀನೇ ವಿಮರ್ಶೆ ಮಾಡಿ ನನ್ನ ಈ ಸ್ಥಿತಿಗೆ ಕಾರಣವನ್ನು ತಿಳಿದುಕೋ" ಎಂದು ರೋಚಕವಾದ ಉತ್ತರ ಕೊಡುತ್ತಾನೆ ಧರ್ಮ.

**ಸೂತ ಉವಾಚ--**

ಏವಂ ಧರ್ಮೇ ಪ್ರವದತಿ ಸ ಸಮ್ರಾಟ್ ದ್ವಿಜಸತ್ತಮಾಃ ।
ಸಮಾಹಿತೇನ ಮನಸಾ ವಿದಿತ್ವಾ ಪ್ರತ್ಯಚಷ್ಟ ತಮ್ ॥೨೦॥

ಶೌನಕಾದಿಗಳಿಗೆ ಭಾಗವತದ ಹಿನ್ನೆಲೆಯನ್ನು ವಿವರಿಸುತ್ತಿರುವ ಉಗ್ರಶ್ರವಸ್ಸರು ಹೇಳುತ್ತಾರೆ: "ವೃಷಭ ಇಷ್ಟೊಂದು ಆಳವಾಗಿ, ಆಧ್ಯಾತ್ಮಿಕವಾಗಿ ಮಾತನಾಡಿದ್ದನ್ನು ಕೇಳಿಸಿಕೊಂಡ ಪರೀಕ್ಷಿತ, ಅಲ್ಲೇ ಕಣ್ಮುಚ್ಚಿ ಕುಳಿತು(Meditation), ತನ್ನ ಮನಸ್ಸನ್ನು ವಿಷಯಕ್ಕೆ ಶ್ರುತಿಗೂಡಿಸಿ(Tuning), ವಿಷಯ ಗ್ರಹಣ ಮಾಡಿದ" ಎಂದು.

**ರಾಜೋವಾಚ--**

ಧರ್ಮಂ ಬ್ರವೀಷಿ ಧರ್ಮಜ್ಞ ಧರ್ಮೋಽಸಿ ವೃಷರೂಪಧೃಕ್ ।
ಯದಧರ್ಮಕೃತಃ ಸ್ಥಾನಂ ಸೂಚಕಸ್ಯಾಪಿ ತದ್ ಭವೇತ್ ॥೨೧॥

ಅಥವಾ ದೇವಮಾಯಾಯಾ ನೂನಂ ಗತಿರಗೋಚರಾ ।
ಚೇತಸೋ ವಚಸಶ್ಚಾಪಿ ಭೂತಾನಾಮಿತಿ ನಿಶ್ಚಯಃ ॥೨೨॥

ಧ್ಯಾನದ ಮೂಲಕ ವಿಷಯ ಗ್ರಹಣ ಮಾಡಿದ ಪರೀಕ್ಷಿತ ಹೇಳುತ್ತಾನೆ: "ತಿಳಿಯಿತು! ನೀನು ಗೂಳಿಯ ರೂಪದಲ್ಲಿರುವ ಧರ್ಮದೇವತೆ. ನೀನು ಧರ್ಮವನ್ನೇ ಮಾತನಾಡಿದೆ. ನಿನ್ನ ಬಾಯಿಂದ ಅಧರ್ಮದ ಮಾತು ಬರಲಾರದು" ಎಂದು. ಏಕೆ ಧರ್ಮ ದೇವತೆ ಈ ರೀತಿ ಒಗಟಿನಂತೆ ಮಾತನಾಡಿದ ಎನ್ನುವುದನ್ನು ಇಲ್ಲಿ ಪರೀಕ್ಷಿತ ವಿಶ್ಲೇಷಿಸಿದ್ದಾನೆ. "ಯದಧರ್ಮಕೃತಃ ಸ್ಥಾನಂ ಸೂಚಕಸ್ಯಾಪಿ ತದ್ ಭವೇತ್" ಅಂದರೆ "ಮಾಡಿದವರ ಪಾಪ ಆಡಿದವರ ಬಾಯಲ್ಲಿ" ಎಂದಂತೆ. "ಅನ್ಯರು ಮಾಡಿದ ಪಾಪಕಾರ್ಯವನ್ನು ಎತ್ತಿ ಹೇಳಬಾರದು ಎನ್ನುವ ಉದ್ದೇಶದಿಂದ ನೀನು ಈ ರೀತಿ ಮಾತನಾಡಿದೆ. ಅಥವಾ: ದೇವರ ಲೀಲೆ ಅಪಾರ, ಯಾರಿಗೆ ಯಾವ ಸಮಯದಲ್ಲಿ ಏನಾಗುತ್ತದೆ, ದೇವರ ಚಿತ್ತ ಏನು

ಎನ್ನುವುದು ಅಗೋಚರ. ಅದಕ್ಕಾಗಿ ನೀನು ಹೀಗೆ ಈ ರೀತಿ ಮಾತನಾಡಿದೆ. ನನಗೀಗ ಸತ್ಯ ತಿಳಿಯಿತು" ಎನ್ನುತ್ತಾನೆ ಪರೀಕ್ಷಿತ.

ತಪಃ ಶೌಚಂ ದಯಾ ಸತ್ಯಮಿತಿ ಪಾದಾಃ ಕೃತೇ ಕೃತಾಃ ।
ಅಧರ್ಮಾಂಗೈಸ್ತ್ರಯೋ ಭಗ್ನಾಃ ಸ್ಮಯಸಂಗಮದೈಸ್ತವ ॥೨೩॥

ಇದಾನೀಂ ಧರ್ಮ ಪಾದಸ್ತೇ ಸತ್ಯಂ ನಿರ್ವರ್ತತೇ ಯತಃ ।
ತಂ ಜಿಘೃಕ್ಷತ್ಯಧರ್ಮೋಽಯಮನೃತೇನೈಧಿತಃ ಕಲಿಃ ॥೨೪॥

"ನೀನು ಧರ್ಮಪುರುಷ; ನಿನಗೆ ತಪಸ್ಸು-ಶೌಚ-ದಯಾ-ಸತ್ಯ ಎನ್ನುವ ನಾಲ್ಕು ಪಾದಗಳು. ಕೃತಯುಗದಲ್ಲಿ ನಿನಗೆ ಈ ನಾಲ್ಕೂ ಪಾದಗಳಿದ್ದವು. ಕೃತಯುಗದ ಕೊನೆಯಲ್ಲಿ ತಪಸ್ಸು ಹೋಗಿ, ಕೇವಲ ಮೂರು ಪಾದಗಳು ಉಳಿದವು. ದ್ವಾಪರದ ಕೊನೆಯಲ್ಲಿ ತಪಸ್ಸು-ಶೌಚ-ದಯೆ ಈ ಮೂರೂ ಪಾದಗಳು ಹೊರಟು ಹೋದವು. ತಪಸ್ಸಿನ ಜಾಗದಲ್ಲಿ ಅಹಂಕಾರ ಬೆಳೆಯಿತು, ಶೌಚ ಹೊರಟುಹೋಗಿ ಸಂಗ ಬೆಳೆಯಿತು, ದಯೆ ಹೋಗಿ ಮದ ಬಂತು. ಹೀಗೆ ಧರ್ಮದ ಮೂರು ಕಾಲುಗಳು ಹೊರಟುಹೋಗಿ, ಅಧರ್ಮದ ಮೂರು ಪಾದಗಳು(ಅಹಂಕಾರ-ಸಂಗ-ಮದ) ಬೆಳೆದವು. ಇಂದು ನೀನು ಕೇವಲ ಒಂದು ಪಾದದಲ್ಲಿ ನಿಂತಿದ್ದೀಯ. ಅದೇ ಪ್ರಾಮಾಣಿಕತೆ(ಸತ್ಯ). ತಪಸ್ಸಿಲ್ಲ, ಶೌಚವಿಲ್ಲ, ದಯೆಯಿಲ್ಲ. ಆದರೂ ಎಲ್ಲೋ ಒಂದು ಮೂಲೆಯಲ್ಲಿ ನಾವು ಪ್ರಾಮಾಣಿಕರಾಗಿರಬೇಕು ಎನ್ನುವ ಆಸೆ ಇಂದೂ ಮನುಷ್ಯನಲ್ಲಿದೆ. ಇಲ್ಲಿ ನಿಂತಿರುವವನು ಕಲಿಪುರುಷ. ಅವನು ನಿನ್ನ ನಾಲ್ಕನೇ ಪಾದವನ್ನೂ ಮುರಿಯುವುದಕ್ಕಾಗಿ ನಿಂತಿದ್ದಾನೆ. ಸತ್ಯದ ಕಾಲನ್ನು ಮುರಿದು, ಸುಳ್ಳಿನ ಕಾಲನ್ನು ಜೋಡಿಸುವ ಸಂಕಲ್ಪ ಆತನದು. ಆದರೆ ನಾನು ಹಾಗಾಗಲು ಬಿಡುವುದಿಲ್ಲ. ಪರೀಕ್ಷಿತನ ಆಡಳಿತದಲ್ಲಿ ಇಲ್ಲಿ ಮತ್ತೆ ಕೃತಯುಗ ಮರಳಬೇಕು" ಎಂದು ಹೇಳಿದ ಪರೀಕ್ಷಿತ, "ನಿನ್ನ ತಲೆಯನ್ನು ಕತ್ತರಿಸುತ್ತೇನೆ" ಎಂದು ಖಡ್ಗ ಹಿಡಿದು ಕಲಿಯತ್ತ ಮುನ್ನುಗ್ಗುತ್ತಾನೆ.

ಪರೀಕ್ಷಿತ ಖಡ್ಗ ಹಿಡಿದು ಮುನ್ನುಗ್ಗುತ್ತಿರುವುದನ್ನು ಕಂಡ ಕಲಿ ಆತನಿಗೆ ಶರಣಾಗುತ್ತಾನೆ. " ಕ್ಷಮಿಸು ರಾಜ, ಇದು ನನ್ನ ಯುಗ, ಅದಕ್ಕಾಗಿ ನಾನು ಬಂದೆ. ಇಲ್ಲಿ ನನ್ನದೇನೂ ತಪ್ಪಿಲ್ಲ. ನನ್ನ ಯುಗದಲ್ಲಿ ನಾನೇನೂ ಮಾಡಬಾರದು ಎಂದರೆ ನನಗೆ ಅಸ್ತಿತ್ವವೆಲ್ಲಿ? ದೀನವತ್ಸಲನಾದ ನೀನು ನನ್ನನ್ನು ಕ್ಷಮಿಸಿ ನನಗೊಂದು ನೆಲೆ ಕೊಡು" ಎಂದು ಕೇಳುತ್ತಾನೆ ಕಲಿ.

**ರಾಜೋವಾಚ--**

ನ ವರ್ತಿತವ್ಯಂ ತದಧರ್ಮಬಂಧೋ ಧರ್ಮೇಣ ಸತ್ಯೇನ ಚ ವರ್ತಿತವ್ಯೇ ।
ಬ್ರಹ್ಮಾವರ್ತೇ ಯತ್ರ ಯಜಂತಿ ಯಜ್ಞೈಃ ಯಜ್ಞೇಶ್ವರಂ ಬ್ರಹ್ಮವಿತಾನಯಜ್ಞಾಃ ॥೩೨॥

ಕಲಿಯ ಮಾತನ್ನು ಆಲಿಸಿದ ಪರೀಕ್ಷಿತ ಹೇಳುತ್ತಾನೆ: "ಅಧರ್ಮದ ಸ್ನೇಹಿತ ನೀನು; ಹಾಗಾಗಿ ನನ್ನ ದೇಶದಲ್ಲಿ ನಿನಗೆ ಆಶ್ರಯವಿಲ್ಲ. ಈ ದೇಶದ ಹೆಸರೇ ಬ್ರಹ್ಮಾವರ್ತ. ಇದು ಬ್ರಹ್ಮರ್ಷಿಗಳು ಅವತರಿಸಿದ ನೆಲ. ಇಲ್ಲಿ ಧರ್ಮ ಮತ್ತು ಸತ್ಯದ

ನಿರಂತರ ಪ್ರವೃತ್ತಿ ಆಗಬೇಕು ಎನ್ನುವುದು ಭಗವಂತನ ಸಂಕಲ್ಪ. ಯಜ್ಞೇಶ್ವರನಾದ ಭಗವಂತನನ್ನು ಯಜ್ಞದಿಂದ ಆರಾಧಿಸುವ ಪದ್ಧತಿ ಬ್ರಹ್ಮಾವರ್ತ ಭಾರತದಲ್ಲಲ್ಲದೇ ಇನ್ಯಾವ ರಾಷ್ಟ್ರದಲ್ಲೂ ಇಲ್ಲ" ಎಂದು.

ಇಲ್ಲಿ ಯಜ್ಞದ ಕುರಿತು ಹೇಳುವಾಗ 'ಬ್ರಹ್ಮಯಜ್ಞ ಮತ್ತು ವಿತಾನಯಜ್ಞ' ಎನ್ನುವ ಪದಗಳನ್ನು ಪ್ರಯೋಗಿಸಿದ್ದಾರೆ. ಇದು ಎರಡು ವಿಧದ ಯಜ್ಞವನ್ನು ಸೂಚಿಸುತ್ತದೆ. ಬ್ರಹ್ಮಯಜ್ಞ ಎಂದರೆ ಧ್ಯಾನದ ಮುಖೇನ ಭಗವಂತನನ್ನು ಆರಾಧಿಸುವ ಮಾನಸಯಜ್ಞ; ವಿತಾನಯಜ್ಞ ಎಂದರೆ ನಾನಾ ವಿಧದ ಕರ್ಮಾನುಷ್ಠಾನದ ಮುಖೇನ, ಅಗ್ನಿಮುಖದಲ್ಲಿ ಆಹುತಿ ಕೊಟ್ಟು ಭಗವಂತನನ್ನು ಆರಾಧಿಸುವ ಕರ್ಮಯಜ್ಞ. "ನಾನಾ ಬಗೆಯ ಯಜ್ಞಗಳಿಂದ ಆರಾಧನೆ ನಡೆಯುವ ಬ್ರಹ್ಮಾವರ್ತವಿದು. ಅದನ್ನು ನಾನು ನಿಲ್ಲಗೊಡುವುದಿಲ್ಲ. ನೀನು ಅದಕ್ಕೆ ಅಡ್ಡಿ ಮಾಡಕೂಡದು" ಎನ್ನುತ್ತಾನೆ ಪರೀಕ್ಷಿತ.

ಯಸ್ಮಿನ್ ಹರಿರ್ಭಗವಾನಿಜ್ಯಮಾನ ಇಷ್ಟಾತ್ಮಮೂರ್ತಿರ್ಯಜತಾಂ ಶಂ ತನೋತಿ ।
ಕಾಮಾನಮೋಘಾನ್ ಸ್ಥಿರಜಂಗಮಾನಾಮಂತರ್ಬಹಿರ್ವಾಯುರಿವೇಶ ಆತ್ಮಾ ॥೩೩॥

ನಾವು ಭಗವಂತನನ್ನು ಏಕೆ ಯಜ್ಞಗಳಿಂದ ಆರಾಧಿಸಬೇಕು? ನಾವು ಕೊಡುವ ಆಹುತಿಯಿಂದ ಅವನ ಹೊಟ್ಟೆ ತುಂಬಬೇಕೇನು? ಇತ್ಯಾದಿಯಾಗಿ ಪ್ರಶ್ನೆ ಹಾಕುವವರಿದ್ದಾರೆ. ಈ ಪ್ರಶ್ನೆಗಳಿಗೆ ವ್ಯಾಸರು ಇಲ್ಲಿ ಉತ್ತರಿಸಿದ್ದಾರೆ.
ಯಜ್ಞಗಳಿಂದ ಆರಾಧಿಸಲ್ಪಡುವ ಭಗವಂತನಿಗೆ 'ಹರಿ' ಎಂದು ಹೆಸರು. ಭಕ್ತರು ಕೊಡುವ ಆಹುತಿಯನ್ನು ಸ್ವೀಕರಿಸಿ, ಅದರ ಮುಖೇನ ಭಕ್ತರ ಸಂಕಷ್ಟವನ್ನು ಪರಿಹರಿಸಿ, ಅವರ ಅಭೀಷ್ಟವನ್ನು ಪೂರೈಸುತ್ತಾನೆ ಆ ಭಗವಂತ. ಆತನದು ಸ್ವರೂಪಭೂತ ರೂಪ. ಆತ ತನ್ನ ಇಚ್ಛೆಗೆ ತಕ್ಕಂತೆ, ಭಕ್ತ ಜನರ ಅಭಿಲಾಷೆಯಂತೆ, ನಾನಾ ರೂಪಗಳನ್ನು ತೊಟ್ಟು ಅವತರಿಸಿ ಬರುತ್ತಾನೆ. ತನ್ನನ್ನು ಆರಾಧಿಸುವ ಭಕ್ತರನ್ನು ಸಲಹುವುದಷ್ಟೇ ಅಲ್ಲ, ಚಲಿಸುವ, ಚಲಿಸದ ತೃಣಾಂತ ಜೀವರನ್ನೂ ಆತ ಪೋಷಿಸುತ್ತಾನೆ. "ಹೀಗೆ ವಾಯುವಿನಂತೆ ಹೊರಗೂ-ಒಳಗೂ (ಅಂತರ್ಯಾಮಿ) ತುಂಬಿ, ಎಲ್ಲರನ್ನೂ ರಕ್ಷಿಸುವ ಸರ್ವಸಮರ್ಥ ಭಗವಂತ ಅವತರಿಸಿ ಬಂದ ಈ ನಾಡಲ್ಲಿ ನಿನ್ನ ಆಟ ನಡೆಯದು" ಎಂದು ಗರ್ಜಿಸುತ್ತಾನೆ ಪರೀಕ್ಷಿತ.

ತನ್ಮೇ ಧರ್ಮಭೃತಾಂ ಶ್ರೇಷ್ಠ ಸ್ಥಾನಂ ನಿರ್ದೇಷ್ಟುಮರ್ಹಸಿ ।
ಯತ್ರೈವ ನಿಯತೋ ವತ್ಸ್ಯ ಆತಿಷ್ಠಂಸ್ತೇಽನುಶಾಸನಮ್ ॥೩೭॥

ಪರೀಕ್ಷಿತನಿಗೆ ಶರಣಾದ ಕಲಿ ಹೇಳುತ್ತಾನೆ: " ಮಹಾರಾಜಾ, ನಿನ್ನ ಮಾತನ್ನು ಒಪ್ಪಿದೆ. ಆದರೆ ನಾನು ಎಲ್ಲಿಗೆ ಹೋಗಲಿ? ನನಗೆ ನಿಲ್ಲಲು ಒಂದು ಜಾಗ ಕೊಡು" ಎಂದು.

**ಸೂತ ಉವಾಚ--**

ಅಭ್ಯರ್ಥಿತಸ್ತದಾ ತಸ್ಮೈ ಸ್ಥಾನಾನಿ ಕಲಯೇಽಕರೋತ್ ।
ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ ॥೩೮॥

ತನಗೆ ಶರಣಾದ ಕಲಿಗೆ ರಾಜ ಪರೀಕ್ಷಿತ ನಾಲ್ಕು ಸ್ಥಾನಗಳನ್ನು ಕೊಟ್ಟು ಅಲ್ಲಿ ವಾಸ ಮಾಡುವಂತೆ ಅಪ್ಪಣೆ ನೀಡುತ್ತಾನೆ. ಅವುಗಳೆಂದರೆ: ದ್ಯೂತ, ಪಾನ, ಸ್ತ್ರೀ ಮತ್ತು ಸೂನಾ(ಹಿಂಸೆ). ಮೇಲ್ನೋಟಕ್ಕೆ ಈ ನಾಲ್ಕು ಸ್ಥಾನಗಳನ್ನು ನೋಡಿದರೆ ನಮಗೆ ಗೊಂದಲವಾಗುತ್ತದೆ. ದ್ಯೂತವನ್ನು ಕ್ಷತ್ರಿಯರು ಆಗಾಗ ಆಡುತ್ತಿದ್ದರು, ಮದ್ಯಪಾನ ಕ್ಷತ್ರಿಯರಿಗೆ ನಿಷಿದ್ಧವಲ್ಲ, ಎಲ್ಲಾ ಸ್ತ್ರೀಯರಲ್ಲಿ ಕಲಿ ವಾಸವಾಗಿರಲು ಸಾಧ್ಯವಿಲ್ಲ, ಪ್ರಾಣಿ ಬಲಿಯನ್ನು ಕ್ಷತ್ರಿಯರು ಯಜ್ಞದಲ್ಲೂ ನೀಡುತ್ತಿದ್ದರು. ಹೀಗಾಗಿ ಇಲ್ಲಿ ಹೇಳಿದ ಈ ನಾಲ್ಕು ಕಲಿ ಸ್ಥಾನವನ್ನು ಎಚ್ಚರಿಕೆಯಿಂದ ಅರ್ಥ ಮಾಡಿಕೊಳ್ಳಬೇಕು. ಇದನ್ನು ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ವರ್ಣಿಸುತ್ತಾ ಹೇಳುತ್ತಾರೆ: "**ವಿಹಿತಾತಿರೇಕೇಣ ನ ಸೇವೇತೇತಿ**" ಎಂದು. ಅಂದರೆ ಶಾಸ್ತ್ರ ವಿಹಿತವಾದುದನ್ನು ಹೊರತುಪಡಿಸಿ, ಈ ಮೇಲಿನ ನಾಲ್ಕು ಸ್ಥಾನಗಳಲ್ಲಿ ಕಲಿ ವಾಸಿಸುತ್ತಾನೆ ಎಂದರ್ಥ. ದ್ಯೂತದ ಚಟ, ಕುಡಿತದ ಚಟ, ಅತಿಕಾಮ/ಪರಸ್ತ್ರೀ ಸಂಗ, ಅತಿಮಾಂಸ ತಿನ್ನುವ ಚಟ ಇವು ಕಲಿಯ ವಾಸಸ್ಥಾನ. ಯಾವುದು ನಮಗೆ ವ್ಯಸನ(Addiction)ವಾಗಿ ಕಾಡುತ್ತದೋ ಅದು ಕಲಿಯ ತಾಣವಾಗಿರುತ್ತದೆ. ಅದರ ಹಿಂದೆ ಸುಳ್ಳು, ಅಹಂಕಾರ, ಅತಿಕಾಮುಕತೆ, ರಾಗ-ದ್ವೇಷಗಳು ಮನೆ ಮಾಡಿರುತ್ತವೆ.

ನಾಲ್ಕು ಸ್ಥಾನಗಳನ್ನು ಪಡೆದ ಕಲಿ ಹೇಳುತ್ತಾನೆ: "**ತತೋಽನೃತಂ ಮದಃ ಕಾಮೋ ರಜೋ ವೈರಂ ಚ ಪಂಚಮಮ್**"ಎಂದು. "ಸುಳ್ಳು, ಅಹಂಕಾರ, ಅತಿಕಾಮುಕತೆ, ರಾಗ-ದ್ವೇಷ ಎನ್ನುವ ಐದು ಪರಿವಾರ ನನ್ನದು. ಈ ಐದು ಪರಿವಾರದೊಂದಿಗೆ ವಾಸ ಮಾಡಲು ನನಗೆ ಕನಿಷ್ಠ ಐದು ಸ್ಥಾನಗಳನ್ನು ಕರುಣಿಸು" ಎಂದು ಕೇಳುತ್ತಾನೆ ಕಲಿ. ಕಲಿಯ ಪ್ರಾರ್ಥನೆಯನ್ನು ಮನ್ನಿಸಿದ ಪರೀಕ್ಷಿತ ಆತನಿಗೆ ಐದನೇ ಸ್ಥಾನವಾಗಿ "ಚಿನ್ನ"ದಲ್ಲಿರಲು ಸೂಚಿಸುತ್ತಾನೆ. ಹೀಗಾಗಿ ಚಿನ್ನದ ಅಥವಾ ಸಂಪತ್ತಿನ ಅತಿಮೋಹ ಕಲಿಯ ವಾಸಸ್ಥಾನವಾಗುತ್ತದೆ.

**ಇತ್ಥಂಭೂತಾನುಭಾವೋಽಯಮಭಿಮನ್ಯುಸುತೋ ನೃಪಃ ।**
**ಯಸ್ಯ ಪಾಲಯತಃ ಕ್ಷೋಣೀಂ ಯೂಯಂ ಸತ್ರಾಯ ದೀಕ್ಷಿತಾಃ ॥೪೪॥**

"ಯಾವ ಪರೀಕ್ಷಿತರಾಜ ಕಲಿಯನ್ನು ನಿಗ್ರಹಿಸಿ ಕೃತಯುಗ ಧರ್ಮವನ್ನು ಸ್ಥಾಪನೆ ಮಾಡಿದನೋ, ಅಂತಹ ಮಹಾಮಹಿಮ ಇತ್ತೀಚಿನ ತನಕ ನಮ್ಮನ್ನು ಆಳುತ್ತಿದ್ದ" ಎಂದು ಪರೀಕ್ಷಿತನನ್ನು ನೆನಪಿಸಿಕೊಳ್ಳುತ್ತಾರೆ ಸೂತರು. ಸೂತರು ಶೌನಕಾದಿಗಳನ್ನು ಉದ್ದೇಶಿಸಿ ಹೇಳುತ್ತಾರೆ: ಕಲಿಯನ್ನು ನಿಗ್ರಹಮಾಡಿ, ಕಲಿಯುಗದಲ್ಲಿ ಕೃತಯುಗದ ಧರ್ಮವನ್ನು ಸ್ಥಾಪನೆ ಮಾಡಿದ ಮಹಾಮಹಿಮ; ಹಿರಿಯರ ಹೆಸರನ್ನು ಉಳಿಸಿದ ಪುಣ್ಯಾತ್ಮ; ಅಭಿಮನ್ಯು ಪುತ್ರ ಪರೀಕ್ಷಿತ. ಅವನ ರಾಜ್ಯಭಾರ ಕಾಲದಲ್ಲೇ ಇಲ್ಲಿ ಸತ್ರಯಾಗ ಪ್ರಾರಂಭವಾಗಿತ್ತು" ಎಂದು.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಸಪ್ತದಶೋಽಧ್ಯಾಯಃ ॥**
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹದಿನೇಳನೇ ಅಧ್ಯಾಯ ಮುಗಿಯಿತು.

*********

# ಅಷ್ಟಾದಶೋಽಧ್ಯಾಯಃ

ಶೌನಕಾದಿಗಳಿಗೆ ಕಥೆಯನ್ನು ಹೇಳುತ್ತಿರುವ ಸೂತರು ಮುಂದೆ ಕಥೆಯನ್ನು ತುಂಬಾ ಚುಟುಕು ಮಾಡುತ್ತಾರೆ. ಚುಟುಕು ಮಾಡಿ, ಕುತೂಹಲ ಕೆರಳಿಸಿ ಮತ್ತೆ ಆ ಕಥೆಯನ್ನು ವಿಸ್ತಾರ ಮಾಡುತ್ತಾರೆ. ಇದೊಂದು ಪ್ರಾಚೀನ ಗ್ರಂಥಗಳಲ್ಲಿನ ತಂತ್ರ. ಚುಟುಕು ಮಾಡಿ ಹೇಳಿದಾಗ ಶಿಷ್ಯರು "ವಿವರವಾಗಿ ಹೇಳಿ" ಎಂದು ಕೇಳಿದರೆ ಮಾತ್ರ ವಿಸ್ತಾರವಾದ ವಿವರಣೆ, ಇಲ್ಲದಿದ್ದರೆ ಇಲ್ಲ.

ಪರೀಕ್ಷಿತನಿಗೆ ಮೂವತ್ತಾರನೇ ವಯಸ್ಸಿನಲ್ಲಿ ಪಟ್ಟಾಭಿಷೇಕವಾಗಿತ್ತು. ಅಲ್ಲಿಂದ ಮುಂದೆ ಸುಮಾರು ಮೂವತ್ತು ವರ್ಷಗಳ ಕಾಲ ಧರ್ಮಮಯವಾದ ಆಡಳಿತ ನಡೆಸುತ್ತಾನೆ ಪರೀಕ್ಷಿತ. ನಂತರ ಸುಮಾರು ಅರವತ್ತೈದನೇ ವಯಸ್ಸಿನಲ್ಲಿ ಏನು ನಡೆಯಿತು ಎನ್ನುವುದನ್ನು ಇಲ್ಲಿ ಬಹಳ ಚುಟುಕಾಗಿ ವಿವರಿಸಲಾಗಿದೆ. ಭಗವಂತನ ಅನುಗ್ರಹದಿಂದಾಗಿ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದಲೂ ಪೀಡಿತನಾಗದೆ, ಭಗವಂತನ ರಕ್ಷೆಯಿಂದ ಹುಟ್ಟಿ ಬಂದವ ಆತ. ಇಂತಹ ಪರೀಕ್ಷಿತ- ಋಷಿ ಶಾಪದಿಂದ ಸಾಯಬೇಕಾದ ಪ್ರಸಂಗ ಬರುತ್ತದೆ. ಆದರೆ ಆತ ಈ ಸಂದರ್ಭದಲ್ಲೂ ಕೂಡಾ ಯಾವುದಕ್ಕೂ ಹೆದರದೇ, ಭಗವನ್ಮಯನಾಗಿ ತನ್ನ ಕೊನೆಯ ಕ್ಷಣವನ್ನು ಕಳೆದ ಎನ್ನುತ್ತಾರೆ ಸೂತರು. ಆ ಕೊನೆಯ ಕ್ಷಣದಲ್ಲಿ ಆತನ ಮನಃಸ್ಥಿತಿ ಹೇಗಿತ್ತು ಎನ್ನುವುದನ್ನು ಸೂತರು ಇಲ್ಲಿ ಒಂದೇ ಶ್ಲೋಕದಲ್ಲಿ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

**ಸೂತ ಉವಾಚ--**

ಉತ್ಸೃಜ್ಯ ಸರ್ವತಃ ಸಂಗಂ ವಿಜ್ಞಾನಾರ್ಜಿತಸಂಸ್ಥಿತಿಃ ।
ವೈಯಾಸಕೇರ್ಜಹೌ ಶಿಷ್ಯೋ ಗಂಗಾಯಾಂ ಸ್ವಕಲೇವರಮ್ ॥೩॥

ಪರೀಕ್ಷಿತನಲ್ಲಿ ಇಡೀ ದೇಶದ ಆಡಳಿತವಿತ್ತು, ದೊಡ್ಡ ಪರಿವಾರವಿತ್ತು, ದಾಸ ದಾಸಿಯರಿಂದ ಕೂಡಿದ ವಿಲಾಸಿ ಜೀವನ ಅವನದಾಗಿತ್ತು. ಇಷ್ಟೆಲ್ಲಾ ಇದ್ದರೂ ಕೂಡಾ, ಆತ ಯಾವ ಆವೇಶಕ್ಕೂ ಒಳಗಾಗದೇ, ನಿರ್ಲಿಪ್ತನಾಗಿ ನಿಂತುಬಿಟ್ಟನಂತೆ. ಅರಮನೆಯ ಸುಖ-ಭೋಗ ಇದ್ದೂ ಕೂಡಾ, ಅವನಿಗೆ ಯಾವುದರ ಸಂಗವೂ ಇಲ್ಲದೇ ನಿರ್ಲಿಪ್ತನಾಗಲು ಸಾಧ್ಯವಾಯಿತು. ಏಕೆಂದರೆ- "ಅವನ ವ್ಯಕ್ತಿತ್ವ ಅಂತಹದ್ದು-ಆತ ವಿಜ್ಞಾನಿಯಾದ" ಎನ್ನುತ್ತಾರೆ ಸೂತರು.

'ವಿಜ್ಞಾನ' ಎನ್ನುವ ಪದಕ್ಕೆ ಸಂಸ್ಕೃತದಲ್ಲಿ ಅನೇಕ ಅರ್ಥಗಳಿವೆ. ಈ ಸಂದರ್ಭದಲ್ಲಿ ಒಂದು ವಿಶಿಷ್ಠ ಅರ್ಥವನ್ನು ಆಚಾರ್ಯ ಮಧ್ವರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ವಿವರಿಸುತ್ತಾ ಹೇಳುತ್ತಾರೆ: "**ವಿಜ್ಞಾನಮಾತ್ಮಯೋಗ್ಯಂ ಸ್ಯಾದ್ ಜ್ಞಾನಂ ಸಾಧಾರಣಂ ಸ್ಮೃತಂ**" ಎಂದು. ಅಂದರೆ ಪ್ರತಿಯೊಬ್ಬ ವ್ಯಕ್ತಿ ತನ್ನ ಸಾಧನೆಯಿಂದ ಪಡೆಯುವ ಭಗವಂತನ ಬಗೆಗಿನ ಅಸಾಧಾರಣ ಸಿದ್ಧಿ(**Individual wisdom**) ವಿಜ್ಞಾನ. ಪರೀಕ್ಷಿತ ಭಗವಂತನ ವಿಷಯಿಕವಾದ ಅಸಾಧಾರಣ ಸಾಧನೆಯಿಂದ ಸಂಸ್ಥಿತಿಯನ್ನು ಗಳಿಸಿದ. ಭಗವಂತನ ಬಗೆಗಿನ ಅಸಾಧಾರಣ ಅರಿವಿನಿಂದಾಗಿ ಆತನಿಗೆ ತನ್ನ ಮನಸ್ಸನ್ನು ಭಗವಂತನಲ್ಲೇ ನೆಲೆಸುವಂತೆ ಮಾಡಲು(ಸಂಸ್ಥಿತಿ) ಸಾಧ್ಯವಾಯಿತು. ಈ ಸಂದರ್ಭದಲ್ಲಿ ಪ್ರಾಪಂಚಿಕ ವಿಷಯ ಅವನನ್ನು ಕಾಡಲಿಲ್ಲ. ಎಲ್ಲಾ ಲೇಪಗಳನ್ನು ಕಳಚಿಕೊಂಡು ಭಗವಂತನಲ್ಲೇ ಮನಸ್ಸನ್ನು ನೆಟ್ಟು ದೇಹತ್ಯಾಗ ಮಾಡಿದ ಪರೀಕ್ಷಿತ.

ಮನೋಭಿಮಾನಿ ದೇವತೆಯಾದ ರುದ್ರದೇವರ ಅವತಾರವಾದ ಶುಕಾಚಾರ್ಯರ ಶಿಷ್ಯನಾದ ಪರೀಕ್ಷಿತ ಆ ಎತ್ತರಕ್ಕೇರಿರುವುದು ಆಶ್ಚರ್ಯವಲ್ಲ. ಏಕೆಂದರೆ ಗುರುವಿನ ಅನುಗ್ರಹ, ಜೀವಯೋಗ್ಯತೆ, ಎರಡೂ ಆತನನ್ನು ಆ ಎತ್ತರಕ್ಕೇರಿಸಿತು. ಈ ಸ್ಥಿತಿಯಲ್ಲಿ ಗಂಗಾ ನದಿಯ ಪ್ರಾಕಾರದಲ್ಲೇ ತನ್ನ ದೇಹತ್ಯಾಗ ಮಾಡಿದ ಪರೀಕ್ಷಿತ.

ಉಪವರ್ಣಿತಮೇತದ್ ವಃ ಪುಣ್ಯಂ ಪಾರೀಕ್ಷಿತಂ ಮಯಾ ।
ವಾಸುದೇವಕಥೋಪೇತಮಾಖ್ಯಾನಂ ಯದಪೃಚ್ಛಥ ॥೯॥

"ಪುಣ್ಯಕರವಾದ ಪರೀಕ್ಷಿತ ರಾಜನ ಬದುಕಿನ ಬಿತ್ತರವನ್ನು ನಿಮಗೆ ವಿವರಿಸಿದೆ" ಎಂದು ಹೇಳಿದ ಸೂತರು, ಪರೀಕ್ಷಿತ ರಾಜನ ಪುಣ್ಯ ಕಥನವನ್ನು ಚುಟುಕಾಗಿ ಹೇಳಿ ಮುಗಿಸುತ್ತಾರೆ. ಹೀಗೆ ಸಂಕ್ಷಿಪ್ತವಾಗಿ ಕಥೆಯನ್ನು ಕೊನೆಗೊಳಿಸಿ ಶೌನಕಾದಿಗಳಲ್ಲಿ ಕುತೂಹಲ ಕೆರಳಿಸುತ್ತಾರೆ.

ಋಷಯ ಊಚುಃ--

ತುಲಯಾಮ ಲವೇನಾಪಿ ನ ಸ್ವರ್ಗಂ ನಾಪುನರ್ಭವಮ್ ।
ಭಗವತ್ಸಂಗಿಸಂಗಸ್ಯ ಮರ್ತ್ಯಾನಾಂ ಕಿಮುತಾಶಿಷಃ ॥೧೩॥

ಸೂತರು ಕಥೆಯನ್ನು ಕೊನೆಗೊಳಿಸಿದಾಗ ಶೌನಕಾದಿಗಳು ಹೇಳುತ್ತಾರೆ: "ನೀವು ಚುಟುಕಾಗಿ ಈ ಪುಣ್ಯ ಕಥೆಯನ್ನು ಹೇಳಿ ನಮ್ಮ ಕುತೂಹಲ ಕೆರಳಿಸಿದಿರಿ. ಸಾಕು ಅನಿಸುವಂತೆ ಹೇಳದೇ, ಇನ್ನೂ ಬೇಕು ಎನಿಸುವಂತೆ ಹೇಳಿದಿರಿ. ಭಗವದ್ಭಕ್ತರ ಒಡನಾಟ ಸ್ವರ್ಗ ಸುಖಕ್ಕಿಂತ ಮೇಲು. ಅಷ್ಟೇ ಅಲ್ಲ, ಮೋಕ್ಷ ತಡವಾದರೂ ತೊಂದರೆ ಇಲ್ಲ, ಭಗವದ್ಭಕ್ತರ ಒಡನಾಟದಲ್ಲೇ ಸ್ವಲ್ಪ ಕಾಲ ಇರಬೇಕು ಎನ್ನುವ ಸಂಕಲ್ಪ ನಮ್ಮದು. ಸ್ವರ್ಗ-ಮೋಕ್ಷಗಳೇ ಜ್ಞಾನಿಗಳ ಒಡನಾಟಕ್ಕೆ ಸಾಟಿಯಲ್ಲದಿರುವಾಗ ಇನ್ನು ಐಹಿಕ ಕ್ಷುದ್ರ ಕಾಮನೆಗಳು ಯಾವ ಲೆಕ್ಕ?" ಎಂದು.
ಮೇಲ್ನೋಟಕ್ಕೆ ಈ ಶ್ಲೋಕ ಜ್ಞಾನದ ಮಹತ್ವ ಮತ್ತು ಜ್ಞಾನಿಗಳ ಒಡನಾಟವನ್ನು ಪ್ರಶಂಸೆ ಮಾಡುವ ಆಲಂಕಾರಿಕ ಶ್ಲೋಕ ಎನಿಸುತ್ತದೆ. ಏಕೆಂದರೆ ಎಲ್ಲಾ ಜ್ಞಾನಗಳಿರುವುದೂ ಮೋಕ್ಷ ಸಾಧನೆಗಾಗಿ. ಹೀಗಿರುವಾಗ ಜ್ಞಾನದ ಮುಂದೆ ಮೋಕ್ಷವೇ ಬೇಡ ಎಂದರೆ ಏನರ್ಥ? ಆದರೆ ಇದು ಕೇವಲ ಆಲಂಕಾರಿಕ ಮಾತಲ್ಲ. ಏಕೆಂದರೆ ಇದು ಶಾಸ್ತ್ರ, ಕಾವ್ಯವಲ್ಲ. ಶಾಸ್ತ್ರದಲ್ಲಿ ಅಲಂಕಾರಕ್ಕೋಸ್ಕರ ಏನನ್ನೂ ಹೇಳುವುದಿಲ್ಲ. ಅಲ್ಲಿ ಪ್ರತಿಯೊಂದು ಮಾತಿನ ಹಿಂದೆ ಒಂದು ಪ್ರಮೇಯವಿರುತ್ತದೆ. ಇದನ್ನು ತಾತ್ಪರ್ಯ ನಿರ್ಣಯದಲ್ಲಿ ವಿವರಿಸುತ್ತಾ ಆಚಾರ್ಯ ಮಧ್ವರು ಹೇಳುತ್ತಾರೆ:

ಸಮ್ಯಕ್ ಸ್ವರೂಪಸ್ಯಾವ್ಯಕ್ತಿರಭಾವೋ ಜನನಸ್ಯ ಚ ।
ಅಲ್ಪಯತ್ನಾತ್ ತತೋ ವೃದ್ಧಿ ಹೇತೋ ಸತ್ಸಂಗತಿರ್ವರಾ ॥ ಇತಿ ವಾಯುಪ್ರೋಕ್ತೇ ।

ಮೋಕ್ಷಕ್ಕಿಂತ ಸಜ್ಜನರ ಒಡನಾಟ ಕೆಲವು ದೃಷ್ಟಿಯಿಂದ ಶ್ರೇಷ್ಠ ಎನ್ನುವುದು ಯಥಾರ್ಥ ಸಂಗತಿ. ಏಕೆಂದರೆ ಜ್ಞಾನಿಗಳ ಸಹವಾಸದಿಂದ ಇನ್ನಷ್ಟು ಹೆಚ್ಚು ಜ್ಞಾನವನ್ನು ಗಳಿಸಿ, ಇನ್ನಷ್ಟು ಹೆಚ್ಚು ಪುಣ್ಯವನ್ನು ಗಳಿಸಿ, ಆಮೇಲೆ ಮೋಕ್ಷಕ್ಕೆ ಹೋದರೆ ಆನಂದವೃದ್ಧಿ. ಅವಸರದಲ್ಲಿ ಹೋದರೆ ಆ ಹೆಚ್ಚಿನ ಆನಂದವನ್ನು ನಾವು ಕಳೆದುಕೊಳ್ಳಬೇಕಾಗಬಹುದು.

ನಮ್ಮ ಸ್ವರೂಪದಲ್ಲಿ ಎಷ್ಟು ಆನಂದ ತುಂಬಿಕೊಂಡಿದೆಯೋ, ಅದರ ಪೂರ್ಣ ಅಭಿವ್ಯಕ್ತಿ ಆಗಬೇಕಿದ್ದರೆ, ಜ್ಞಾನಿಗಳಿಂದ ಪೂರ್ತಿ ಜ್ಞಾನವನ್ನು ಪಡೆಯಬೇಕು. ಈ ರೀತಿ ಹೆಚ್ಚಿನ ಜ್ಞಾನವನ್ನು ಪಡೆಯದೆಯೂ ಕೂಡಾ, ಹುಟ್ಟು-ಸಾವಿಲ್ಲದ ಮೋಕ್ಷ ಪಡೆಯಬಹುದು. ಆದರೆ ಮೋಕ್ಷದಲ್ಲಿ ಆನಂದದ ಪರಿಮಾಣವನ್ನು ಹೆಚ್ಚಿಸಿಕೊಳ್ಳಬೇಕಾದರೆ, ಜ್ಞಾನಿಗಳ ಒಡನಾಟದಿಂದ ನಮ್ಮ ಜ್ಞಾನದ ಪರಿಮಾಣವನ್ನು ಹೆಚ್ಚಿಸಿಕೊಳ್ಳಬೇಕು. ಹೀಗೆ 'ಜ್ಞಾನವೃದ್ಧಿಯಿಂದ ಮೋಕ್ಷದಲ್ಲಿ ಆನಂದವೃದ್ಧಿ ಇರುವುದರಿಂದ, ಮೊಕ್ಷಕ್ಕಿಂತ ಹೆಚ್ಚಾಗಿ ಜ್ಞಾನಿಗಳ ಒಡನಾಟ ಬೇಕು' ಎನ್ನುವುದು ಮೇಲಿನ ಶ್ಲೋಕದ ತಾತ್ಪರ್ಯ. ಇದನ್ನು ಹೂವಿನ ದೃಷ್ಟಾಂತದೊಂದಿಗೆ ಹೇಳಬೇಕೆಂದರೆ: ಹೂ ಅರೆ ಮೊಗ್ಗಿನಂತೆ ಅರಳುವ ಸ್ಥಿತಿ ಮತ್ತು ಪೂರ್ಣ ಅರಳುವ ಸ್ಥಿತಿ. ಅರೆ ಮೊಗ್ಗಿನ ಸ್ಥಿತಿ ಕೂಡಾ ವಿಕಸನ ಹೌದು. ಆದರೆ ಹೂ ಪೂರ್ಣವಾಗಿ ಅರಳಬೇಕು. ಹಾಗೇ ನಾವು ಜ್ಞಾನಿಗಳ ಒಡನಾಟದಿಂದ ಜ್ಞಾನ ಸಾಧನೆಯ ಪೂರ್ಣತೆಯನ್ನು ಪಡೆಯಬೇಕು. ಅದು ಎಲ್ಲವುದಕ್ಕಿಂತ ಶ್ರೇಷ್ಠ. ಜ್ಞಾನ ಎಲ್ಲಕ್ಕಿಂತ ಮಿಗಿಲು. ಅದಕ್ಕಿಂತ ಮಿಗಿಲಾದ ಸಂಪತ್ತು ಜೀವನದಲ್ಲಿಲ್ಲ. ಭಗವಂತನನ್ನು ಬಲ್ಲವರರಿಂದ ನಾವು ಕೇಳಿ ತಿಳಿಯಬೇಕು. ಹಾಗಾಗಿ "ಚುಟುಕಾಗಿ ಹೇಳದೇ ವಿಸ್ತಾರವಾಗಿ ಹೇಳಿ" ಎಂದು ಶೌನಕಾದಿಗಳು ಸೂತರನ್ನು ಪ್ರಾರ್ಥಿಸಿಕೊಳ್ಳುತ್ತಾರೆ.

ತನ್ನಃ ಪರಂ ಪುಣ್ಯಮಸಂವೃತಾರ್ಥಮಾಖ್ಯಾನಮತ್ಯದ್ಭುತಯೋಗನಿಷ್ಠಮ್ ।
ಆಖ್ಯಾಹ್ಯನಂತಾಚರಿತೋಪಪನ್ನಂ ಪಾರೀಕ್ಷಿತಂ ಭಾಗವತಾಭಿರಾಮಮ್ ॥೧೭॥

ಭಗವಂತನ ಭಕ್ತರ ಕಥೆಯನ್ನು ಕೇಳುವುದು ಎಂದರೆ ಭಗವಂತನ ಮಹಿಮೆಯನ್ನು ಕೇಳಿದಂತೆ. ಏಕೆಂದರೆ ಭಗವಂತನ ಭಕ್ತರ ಕಥೆಯ ಹಿಂದಿರುವುದು ಅನಂತನಾದ ಭಗವಂತನೇ. ಭಗವಂತನ ಭಕ್ತರ ಮಹಿಮೆ ಎಂದರೆ ಅದು ಅವರಿಗೆ ಭಗವಂತನ ಅನುಗ್ರಹದಿಂದಲೇ ಬಂದಿರುವುದು. "ಹೀಗಾಗಿ ನಮಗೆ ಪರೀಕ್ಷಿತನ ಕಥೆ ಎಂದರೆ ಅದು ಭಗವಂತನ ಕಥೆಯೇ ಆಗಿದೆ" ಎನ್ನುತ್ತಾರೆ ಶೌನಕಾದಿಗಳು.
ಭಾಗವತರಿಗೆ(ಭಗವದ್ಭಕ್ತರಿಗೆ) ಮಹಾ ಸಂತೋಷದ ವಿಷಯ ಎಂದರೆ- ಭಗವಂತನ ಭಕ್ತಿಯಿಂದ ಎತ್ತರಕ್ಕೇರಿದ ಜ್ಞಾನಿಗಳ ಕಥೆ ಕೇಳುವುದು. " ಈ ನೆಲೆಯಿಂದ ನಮಗೆ ಪರೀಕ್ಷಿತ ರಾಜ ಕೊನೆಯ ಕಾಲದಲ್ಲಿ ಎಲ್ಲಾ ಸಂಗವನ್ನು ತೊರೆದು, ದೇಹತ್ಯಾಗ ಮಾಡಿದ ಘಟನೆಯನ್ನು ವಿವರವಾಗಿ ಹೇಳಿ" ಎಂದು ಉಗ್ರಶ್ರವಸ್ಸರನ್ನು ಶೌನಕಾದಿಗಳು ಪ್ರಾರ್ಥಿಸಿಕೊಳ್ಳುತ್ತಾರೆ.

ಸೂತ ಉವಾಚ--

ಅಹೋ ವಯಂ ಜನ್ಮಭೃತೋ ಮಹಾತ್ಮನ್ ವೃದ್ಧಾನುವೃತ್ತ್ಯಾಽಪಿ ವಿಲೋಮಜಾತಾಃ ।
ದೌಷ್ಕುಲ್ಯಮಾಧಿಂ ವಿಧುನೋತಿ ಶೀಘ್ರಂ ಮಹತ್ತಮಾನಾಮಭಿಧಾನಯೋಗಃ ॥೧೮॥

ಶೌನಕಾದಿಗಳ ಮಾತನ್ನು ಕೇಳಿ ಸೂತರು ಹೇಳುತ್ತಾರೆ: "ನಿಜ, ತುಂಬಾ ಎತ್ತರಕ್ಕೇರಿದವರ ಬದುಕಿನ ಬಿತ್ತರವನ್ನು ಕೇಳುವುದರಿಂದ ನಮ್ಮಲ್ಲಿರುವ ಮನೋರೋಗ ಪರಿಹಾರವಾಗುತ್ತದೆ" ಎಂದು. ನಮಗೆ ತಿಳಿದಂತೆ ಎಲ್ಲಾ ಸಮಸ್ಯೆಗೂ ಮೂಲ ಕಾರಣ ಮನೋರೋಗ. ಹಾಗಾಗಿ ಎಲ್ಲಾ ಸಮಸ್ಯೆಗಳಿಗೂ ಏಕಮಾತ್ರ ಔಷಧ ಎಂದರೆ ಬದುಕಿನಲ್ಲಿ ಎತ್ತರಕ್ಕೇರಿದವರ ಜೀವನ ಕಥನವನ್ನು ಕೇಳಿ ಕಲಿಯುವುದು. ಅದರಿಂದ ನಮ್ಮ ಬದುಕು ಸುಭದ್ರವಾಗುತ್ತದೆ.

ಅದರಲ್ಲೂ ಮುಖ್ಯವಾಗಿ ಹೀನ ಕುಲದಲ್ಲಿ ಹುಟ್ಟಿದವರು ಈ ಕಥೆಯನ್ನು ಮೊದಲು ಕೇಳಬೇಕು. ಏಕೆಂದರೆ ಹೀನ ಕುಲ ಎಂದರೆ ಭಗವಂತನ ಅರಿವು ಇಲ್ಲದಿರುವುದು. ಆ ಅರಿವು ಬಂದಾಗ ಅವರು ಎತ್ತರಕ್ಕೇರುತ್ತಾರೆ.

**ಕುತಃ ಪುನರ್ಗೃಣತೋ ನಾಮ ತಸ್ಯ ಮಹತ್ತಮೈಕಾಂತಪರಾಯಣಸ್ಯ ।**
**ಯೋಽನಂತಶಕ್ತಿರ್ಭಗವಾನನಂತೋ ಮಹದ್ಗುಣತ್ವಾದ್ ಯಮನಂತಮಾಹುಃ ॥೧೯॥**

ಭಗವಂತನನ್ನು ಅರಿತವರ ಬಗೆಗೆ ಕೇಳಿದಾಗಲೇ ನಾವು ಮಾನಸಿಕ ರೋಗದಿಂದ ಸ್ವಸ್ತರಾಗುತ್ತೇವೆ. ಹೀಗಿರುವಾಗ ಭಗವಂತನ ನಾಮಸ್ಮರಣೆಯನ್ನು ಭಕ್ತಿಯಿಂದ ಮಾಡಿದರೆ ಯಾವ ಮನೋರೋಗ ಬರಲು ಸಾಧ್ಯ? ಮಹಾತ್ಮರಿಗೂ ಏಕಮಾತ್ರ ಆಶ್ರಯನಾದ ಭಗವಂತನನ್ನು ನೆನೆಯುವವರಿಗೆ ಯಾವ ಚಿಂತೆ ಇರಲು ಸಾಧ್ಯ? ಭಗವಂತ ದೇಶ-ಕಾಲಗಳಿಂದ ಅನಂತ; ಆತ ಅನಂತ ಗುಣಪೂರ್ಣ. ಇಂತಹ ಅನಂತಶಕ್ತಿಯನ್ನು ಚಿಂತಿಸಿದವರಿಗೆ ಬದುಕಿನಲ್ಲಿ ಯಾವ ಭಯ ಕಾಡುವುದು ಸಾಧ್ಯ? "ಹಾಗಾಗಿ ಭಗವಂತನ ಮಹಿಮೆಯನ್ನೊಳಗೊಂಡ ಪರೀಕ್ಷಿತ ರಾಜನ ಮಹಿಮೆಯನ್ನು ನಾನು ನಿಮಗೆ ಹೇಳುತ್ತೇನೆ". ಎನ್ನುತ್ತಾರೆ ಸೂತರು.

**ಯತ್ರಾನುರಕ್ತಾಃ ಸಹಸೈವ ಧೀರಾ ವ್ಯಪೋಹ್ಯ ದೇಹಾದಿಷು ಸಂಗಮೂಢಂ ।**
**ವ್ರಜಂತಿ ತತ್ಪಾರಮಹಂಸ್ಯಸತ್ಯಂ ಯಸ್ಮಿನ್ನಹಿಂಸೋಪರಮಶ್ಚ ಧರ್ಮಃ ॥೨೨॥**

ನಮಗೆ ಭಗವಂತನ ಪರಿಚಯ ಇಲ್ಲದಿರುವುದರಿಂದ ನಮ್ಮ ಮನಸ್ಸು ಆತನೆಡೆಗೆ ವಾಲುವುದಿಲ್ಲ. ಆದರೆ ಒಮ್ಮೆ ಅನುರಕ್ತಿ ಬಂದು ರುಚಿ ಗೊತ್ತಾದರೆ, ಆಗ ಇತರ ಲೌಕಿಕ ವಿಚಾರಗಳು ಭಗವಂತನ ಮುಂದೆ ನಶ್ವರ ಎನ್ನುವುದು ತಿಳಿಯುತ್ತದೆ. ಸಾಮಾನ್ಯವಾಗಿ ನಮ್ಮ ಮನಸ್ಸು ನಮ್ಮ ದೇಹದ ಮೂಲಕ ನಾವು ಪಡೆಯುವ ಸುಖ-ಭೋಗವೇ ಸರ್ವಸ್ವ ಎಂದು ತಿಳಿದು ಅದರಲ್ಲೇ ಗಟ್ಟಿಯಾಗಿ ಕುಳಿತುಬಿಟ್ಟಿರುತ್ತದೆ. 'ಧೀರ'ನಾದವನು ಆ ಸ್ಥಿತಿಯಿಂದ ಈಚೆ ಬಂದು ಭಗವಂತನನ್ನು ಅರಿಯುತ್ತಾನೆ.

ಈ ಶ್ಲೋಕದಲ್ಲಿ ಬಳಸಿರುವ 'ಧೀರ' ಎನ್ನುವ ಪದಕ್ಕೆ ಎರಡು ಅರ್ಥಗಳಿವೆ. ಜ್ಞಾನದಲ್ಲಿ ರತಿ ಉಳ್ಳವನು, 'ತಿಳಿದುಕೊಳ್ಳಬೇಕು' ಎನ್ನುವ ಛಲ ಉಳ್ಳವನು ಧೀರ. ಈ ರೀತಿ ಛಲದಿಂದ ಆಸಕ್ತಿ ಬೆಳೆಸಿಕೊಂಡ ತಕ್ಷಣ ಎಲ್ಲವೂ ತಿಳಿಯುವುದಿಲ್ಲ. ಅಲ್ಲಿ ಅನೇಕ ಸಮಸ್ಯೆಗಳು ಬರುತ್ತವೆ. ಪ್ರತಿರೋಧ ಬರಬಹುದು. ಜನ ಪರಿಹಾಸ್ಯ ಮಾಡಬಹುದು. ಆಗ ದುರ್ಬಲನಾಗದೆ ಮುನ್ನೆಡೆಯುವ ಧೈರ್ಯ ಉಳ್ಳವನು ಧೀರ.

ಇಲ್ಲಿ ಭಗವಂತನನ್ನು "ಪಾರಮಹಂಸ್ಯಸತ್ಯಂ" ಎನ್ನುವ ವಿಶೇಷಣ ಬಳಸಿ ಸಂಬೋಧಿಸಿದ್ದಾರೆ. ಪರಮಹಂಸರು ಎಂದರೆ ಸಂಸಾರದಲ್ಲಿ ಸರ್ವಸ್ವವನ್ನೂ ತ್ಯಾಗ ಮಾಡಿದವರು. ಭಗವಂತ ಇಂತಹ 'ಪರಮಹಂಸರಿಗೆ ಸುಲಭವಾಗಿ ಗೋಚರನಾಗುತ್ತಾನೆ. ನಮ್ಮಲ್ಲಿ ಕೂಡಾ ಆ ಪರಮಹಂಸರ ಕಿಂಚಿತ್ ನಡೆ ಇರಬೇಕು. ಆಗ ಆ ಸದ್ಗುಣಪೂರ್ಣ(ಸತ್ಯಃ) ಭಗವಂತನ ಅನುಗ್ರಹವಾಗುತ್ತದೆ. ನಾವು ತಪ್ಪಿನ ಕಡೆ ನಮ್ಮ ಮನಸ್ಸು ಹರಿಯದಂತೆ ತಡೆದು, ಅದನ್ನು ಭಗವಂತನೆಡೆಗೆ ಹರಿಸಬೇಕು.

ಪರಮಹಂಸರು ಅಂದರೆ ಎಂತವರು ಎನ್ನುವುದನ್ನು ವಿವರಿಸುತ್ತಾ ಸೂತರು ಹೇಳುತ್ತಾರೆ: "ಯಸ್ಮಿನ್ನಹಿಂಸೋಪರಮಶ್ಚ ಧರ್ಮಃ" ಎಂದು. ಪರಮಹಂಸರಲ್ಲಿ ಮುಖ್ಯವಾಗಿ ಎರಡು ವಿಶೇಷ ಗುಣಗಳಿರುತ್ತವೆ. ಅವುಗಳೆಂದರೆ 'ಅಹಿಂಸೆ ಮತ್ತು ಉಪರಮ'.

ಯಮನಿಯಮಗಳಲ್ಲಿ ಮೊದಲನೆಯದು 'ಅಹಿಂಸೆ'. ಅಹಿಂಸೆ ಎನ್ನುವುದು ಭಗವಂತನನ್ನು ಆರಾಧಿಸುವ ಅಷ್ಟಪುಷ್ಪಗಳಲ್ಲಿ ಮೊದಲನೆಯದು. [ಅಷ್ಟಪುಷ್ಪಗಳು: ಅಹಿಂಸಾ, ದಮ, ದಯಾ, ಕ್ಷಮಾ, ಶಾಂತಿ, ತಪ, ಧ್ಯಾನ ಮತ್ತು ಸತ್ಯ] ಇದಕ್ಕಾಗಿ ಸನ್ಯಾಸಿಗಳು "ಸಮಸ್ತ ಪ್ರಾಣಿಗಳಿಗೂ ನಾನು ಅಭಯದಾನ ಮಾಡಿದ್ದೇನೆ, ನಾನು ಯಾರಿಗೂ ಹಿಂಸೆ ಮಾಡುವುದಿಲ್ಲ" ಎಂದು ಪ್ರತಿಜ್ಞೆ ಮಾಡುತ್ತಾರೆ. ಇದು ಅವರ ಜೀವನದ ಪ್ರತಿಜ್ಞೆ. ನಾವೂ ಕೂಡಾ ನಮ್ಮ ಜೀವನದಲ್ಲಿ ಎಷ್ಟು ಸಾಧ್ಯವೋ ಅಷ್ಟು ಅಹಿಂಸಾ ವ್ರತವನ್ನು ಪಾಲಿಸಬೇಕು. ಅಹಿಂಸೆಯ ಮಹತ್ವವನ್ನು ಪುರಾಣದಲ್ಲಿ ವರ್ಣಿಸುತ್ತಾ ಹೇಳುತ್ತಾರೆ: "ಹೇಗೆ ಆನೆಯ ಹೆಜ್ಜೆಯೊಳಗೆ ಎಲ್ಲಾ ಪ್ರಾಣಿಗಳ ಹೆಜ್ಜೆ ಅಂತರ್ಭೂತವಾಗುತ್ತದೋ-ಹಾಗೆ, ಅಹಿಂಸೆಯ ಒಳಗೆ ಎಲ್ಲಾ ಧರ್ಮಗಳೂ ಅಂತರ್ಭೂತವಾಗುತ್ತವೆ" ಎಂದು. ಹಾಗಾಗಿ ಅಹಿಂಸೆಯ ಧೀಕ್ಷೆ ಎಂದರೆ ಅದು ಎಲ್ಲಾ ಧರ್ಮಗಳ ಧೀಕ್ಷೆ. ಎರಡನೇ ಗುಣ- 'ಉಪರಮ'. ಉಪರಮ ಅಂದರೆ ಉತ್ಕೃಷ್ಟನಾದ ಭಗವಂತನಲ್ಲೇ ಆನಂದವನ್ನು ಅನುಭವಿಸುವುದು. ನಿರಂತರ ಭಗವಂತನ ಚಿಂತನೆಯಲ್ಲಿ ಆಸಕ್ತಿ ಬೆಳೆಸಿಕೊಳ್ಳುವುದು. ಹೀಗೆ ಅಹಿಂಸೆ ಮತ್ತು ಉಪರಮ ಎನ್ನುವ ಎರಡು ಮುಖ್ಯಗುಣಗಳು ಪರಮಹಂಸರಲ್ಲಿರುವುದರಿಂದ ಭಗವಂತ ಅವರಿಗೆ ಬಹಳ ಬೇಗ ಒಲಿಯುತ್ತಾನೆ.

**ಅಹಂ ಹಿ ಪೃಷ್ಟೋಽಸ್ಯ ಗುಣಾನ್ ಭವದ್ಭಿರಾಚಕ್ಷ ಆತ್ಮಾವಗಮೋಽತ್ರ ಯಾವಾನ್ ।**
**ನಭಃ ಪತಂತ್ಯಾತ್ಮಸಮಂ ಪತತ್ರಿಣಸ್ತಥಾ ಸಮಂ ವಿಷ್ಣುಗತಿಂ ವಿಪಶ್ಚಿತಃ ॥೨೩॥**

"ಭಗವಂತನ ಕಥೆಯನ್ನು ಕೇಳುವುದು ಎಷ್ಟು ಆನಂದವೋ, ಹೇಳುವುದೂ ಅಷ್ಟೇ ಆನಂದ. ನೀವು ಪರೀಕ್ಷಿತ ರಾಜನ ಕಥೆಯನ್ನು ಕೇಳಬೇಕು ಎನ್ನುವ ಅಭಿಲಾಷೆಯನ್ನು ಮುಂದಿಟ್ಟಿದ್ದೀರಿ. ನಾನು ನನಗೆ ತಿಳಿದಷ್ಟನ್ನು ನಿಮಗೆ ಹೇಳುತ್ತೇನೆ" ಎನ್ನುತ್ತಾರೆ ಉಗ್ರಶ್ರವಸ್ಸು. ಈ ಮಾತಿನಲ್ಲಿ ಉಗ್ರಶ್ರವಸ್ಸಿನ ಸೌಜನ್ಯವನ್ನು ನಾವು ಗಮನಿಸಬೇಕು. ವೇದವ್ಯಾಸರ ಮತ್ತು ರೋಮಹರ್ಷಣರ ಒಡನಾಟದಲ್ಲಿದ್ದು, ಅನೇಕ ಪುರಾಣ ಪ್ರವಚನ ಮಾಡಿದ್ದ ಮಹಾಜ್ಞಾನಿ ಉಗ್ರಶ್ರವಸ್ಸು ಇಲ್ಲಿ ಹೇಳುತ್ತಾರೆ: "ಅನಂತ ಆಕಾಶದಲ್ಲಿ ಹೇಗೆ ಪ್ರತಿಯೊಂದು ಪಕ್ಷಿಗಳು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಹಾರುತ್ತವೋ-ಹಾಗೇ, ಭಗವಂತನ ಮತ್ತು ಭಗವದ್ ಭಕ್ತರ ಅನಂತ ಮಹಿಮೆಯನ್ನು ಯಥಾಶಕ್ತಿ ನಿಮಗೆ ಹೇಳುತ್ತೇನೆ" ಎಂದು. ಈ ಮಾತು ಪರೀಕ್ಷಿತ ರಾಜನ ಎತ್ತರವನ್ನೂ ಸೂಚಿಸುತ್ತದೆ.

## ಶಮೀಕ ಮುನಿಯ ಹೆಗಲ ಮೇಲೆ ಸತ್ತ ಹಾವು!

ಈ ಹಿಂದೆ ಹೇಳಿದಂತೆ ಪರೀಕ್ಷಿತ ರಾಜ ತನ್ನ ಅರವತ್ತೈದನೇ ವಯಸ್ಸಿನ ತನಕ ಧರ್ಮದಿಂದ ರಾಜ್ಯಭಾರ ಮಾಡುತ್ತಾನೆ. ಹೀಗೆ ರಾಜ್ಯಭಾರ ನಡೆಸುತ್ತಿರುವಾಗ ಒಂದು ವಿಚಿತ್ರ ಘಟನೆ ನಡೆಯುತ್ತದೆ. ಯಾರು ಕಲಿಯನ್ನು ನಿಗ್ರಹ ಮಾಡಿದನೋ, ಅಂತಹ ಪರೀಕ್ಷಿತ ರಾಜನೊಳಗೆ ಕಲಿಪ್ರವೇಶವಾಗಿ, ಅವನ ಸಾವಿಗೆ ಕಾರಣವಾಗುವ ಘಟನೆ ನಡೆಯುತ್ತದೆ!

ಏಕದಾ ಧನುರುದ್ಯಮ್ಯ ವಿಚರನ್ ಮೃಗಯಾಂ ವನೇ ।
ಮೃಗಾನನುಗತಃ ಶ್ರಾಂತಃ ಕ್ಷುಧಿತಸ್ತೃಷಿತೋ ಭೃಶಮ್ ॥೨೪॥

ಒಮ್ಮೆ ಮೃಗ ಬೇಟೆಗಾಗಿ ಪರೀಕ್ಷಿತ ಕಾಡಿಗೆ ಹೋಗುತ್ತಾನೆ. [ಬೇಟೆಯಲ್ಲಿ ಎರಡು ವಿಧ. ಒಂದು ಮೋಜಿಗಾಗಿ ಬೇಟೆ, ಇನ್ನೊಂದು ಪ್ರಜಾರಕ್ಷಣೆಗಾಗಿ ಬೇಟೆ. ಸಾಮಾನ್ಯವಾಗಿ ಕ್ಷತ್ರಿಯರು ಮೋಜಿಗಾಗಿ ಬೇಟೆಯಾಡುತ್ತಿರಲಿಲ್ಲ. ಬದಲಿಗೆ ಕಾಡು ಪ್ರಾಣಿಗಳಿಂದ ಜನರನ್ನು ರಕ್ಷಿಸುವುದಕ್ಕೋಸ್ಕರ ಬೇಟೆಯಾಡುತ್ತಿದ್ದರು]. ಹೀಗೆ ಬೇಟೆಗೆ ಹೋಗಿದ್ದ ಪರೀಕ್ಷಿತನಿಗೆ ತುಂಬಾ ಹಸಿವು ಮತ್ತು ಬಾಯಾರಿಕೆಯಾಗುತ್ತದೆ.

ಜಲಾಶಯಮಚಕ್ಷಾಣಃ ಪ್ರವಿವೇಶ ಸ ಆಶ್ರಮಮ್ ।
ದದೃಶೇ ಮುನಿಮಾಸೀನಂ ಶಾಂತಂ ಮೀಲಿತಲೋಚನಮ್ ॥೨೫॥

ಹಸಿವು ಬಾಯಾರಿಕೆಯಿಂದ ತತ್ತರಿಸಿದ ರಾಜನಿಗೆ ಎಲ್ಲಿಯೂ ಜಲಾಶಯ ಕಾಣ ಸಿಗುವುದಿಲ್ಲ. ಹಾಗಾಗಿ ಆತ ನೀರನ್ನು ಅರಸುತ್ತಾ ಸಾಗುತ್ತಿರುತ್ತಾನೆ. ಹೀಗೆ ಸಾಗುತ್ತಿರುವಾಗ ಆತನಿಗೊಂದು ಋಷಿ ಆಶ್ರಮ ಕಾಣಸಿಗುತ್ತದೆ. ತಕ್ಷಣ ರಾಜ ಆ ಆಶ್ರಮದ ಬಳಿಗೆ ಬರುತ್ತಾನೆ. ಅಲ್ಲಿ ಆತನಿಗೆ ಯಾರೂ ಕಾಣಿಸುವುದಿಲ್ಲ. ಆದರೆ ಒಬ್ಬ ಋಷಿ ಮಾತ್ರ ಆಶ್ರಮದಿಂದ ಹೊರಗೆ ಧ್ಯಾನದಲ್ಲಿ ಆತ್ಮಾನಂದವನ್ನು ಪಡೆಯುತ್ತಿರುವುದು ಕಾಣಿಸುತ್ತದೆ.

ಪ್ರತಿರುದ್ಧೇಂದ್ರಿಯಪ್ರಾಣಮನೋಬುದ್ಧಿಮುಪಾರತಮ್ ।
ಸ್ಥಾನತ್ರಯಾತ್ ಪರಂ ಪ್ರಾಪ್ತಂ ಬ್ರಹ್ಮಭೂತಮವಿಕ್ರಿಯಮ್ ॥೨೬॥

ಧ್ಯಾನ ಮಗ್ನನಾಗಿರುವ ಶಮೀಕ ಮುನಿಯ ಧ್ಯಾನ ಸ್ಥಿತಿ ಹೇಗಿತ್ತು ಎನ್ನುವುದನ್ನು ಈ ಶ್ಲೋಕದಲ್ಲಿ ವಿವರಿಸಲಾಗಿದೆ. ಮನಸ್ಸು-ಬುದ್ಧಿ-ಇಂದ್ರಿಯಗಳನ್ನು ಸ್ಥಗನಗೊಳಿಸಿ, ತಮ್ಮ ಆತ್ಮಸ್ವರೂಪದಿಂದ ಜ್ಞಾನಾನಂದಮಯನಾದ ಭಗವಂತನನ್ನು ಅವರು ಅನುಭವಿಸುತ್ತಿದ್ದರು. ಅವರಿಗೆ ಬಾಹ್ಯ ಪ್ರಪಂಚದ ಯಾವ ಎಚ್ಚರವೂ ಇರಲಿಲ್ಲ. ಇದು ಎಚ್ಚರ-ಕನಸು-ನಿದ್ದೆಯಿಂದ ಆಚೆಗಿನ ಸ್ವರೂಪಭೂತ ಸ್ಥಿತಿ. ಇದನ್ನು ಉನ್ಮನೀಭಾವ ಎನ್ನುತ್ತಾರೆ. ಇದು ಸ್ವರೂಪಭೂತ ಆತ್ಮದಿಂದ ಸ್ವರೂಪಭೂತನಾದ ಭಗವಂತನ ವಾಸುದೇವ ರೂಪವನ್ನು ಕಾಣುವ ಅಪೂರ್ವ ಸಮಾಧಿ-ಸ್ಥಿತಿ.
ಶಮೀಕ ಅನಾಯಾಸವಾಗಿ, ನಿರ್ವಿಕಾರ-ನಿಶ್ಚಲನಾಗಿ ಭಗವಂತನಲ್ಲಿ ನೆಲೆ ನಿಂತಿರುವುದು, ಹಸಿವು-ಬಾಯಾರಿಕೆಯಿಂದ ತತ್ತರಿಸಿದ ಪರೀಕ್ಷಿತನಿಗೆ ತಿಳಿಯದಾಗುತ್ತದೆ. 'ವಿನಾಶ ಕಾಲೇ ವಿಪರೀತ ಬುದ್ಧಿ' ಎನ್ನುವಂತೆ-ಆತನಿಗೆ "ಈ ಮುನಿ ಮನೆಗೆ ಬಂದ ಅತಿಥಿಯನ್ನು ಸತ್ಕರಿಸದೇ ಧ್ಯಾನದ ನಾಟಕವಾಡುತ್ತಾ ಕುಳಿತಿದ್ದಾನೆ" ಎನ್ನುವ ತಪ್ಪು ಕಲ್ಪನೆ ಬರುತ್ತದೆ.

ಸ ತಸ್ಯ ಬ್ರಹ್ಮಋಷೇರಂಸೇ ಗತಾಸುಮುರಗಂ ರುಷಾ ।
ವಿನಿರ್ಗಚ್ಛನ್ ಧನುಷ್ಕೋಟ್ಯಾ ನಿಧಾಯ ಪುರಮಾಗತಃ ॥೩೦॥

ಎಲ್ಲವೂ ವಿಧಿಯ ವ್ಯವಸ್ಥೆ ಎನ್ನುವಂತೆ- ತಪ್ಪು ತಿಳುವಳಿಕೆಯಿಂದ ಕೋಪಗೊಂಡ ಪರೀಕ್ಷಿತನಿಗೆ ಅಲ್ಲೇ ಸಮೀಪದಲ್ಲಿ ಒಂದು ಸತ್ತ ಹಾವು ಕಾಣಿಸುತ್ತದೆ. ಸಿಟ್ಟಿನಲ್ಲಿ ವಿವೇಕ ಕಳೆದುಕೊಂಡ ಆತ "ಧ್ಯಾನದ ನಾಟಕವಾಡುತ್ತಿರುವ ಈ ಋಷಿಗೆ ತಕ್ಕ ಪಾಠ ಕಲಿಸಬೇಕು" ಎಂದುಕೊಂಡು, ಆ ಸತ್ತ ಹಾವನ್ನು ಎತ್ತಿ ಋಷಿಯ ಕೊರಳಿಗೆ ಹಾಕಿ ಊರಿಗೆ ಹಿಂದಿರುಗುತ್ತಾನೆ.

ಅರಮನೆಗೆ ಹಿಂದಿರುಗಿದ ರಾಜನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ತಾನು ಒಬ್ಬ ತಪಸ್ವಿಗೆ ಅನ್ಯಾಯ ಮಾಡಿದೆ ಎನ್ನುವುದು ತಿಳಿಯುತ್ತದೆ. "ನಾನೇಕೆ ಹೀಗೆ ಮಾಡಿದೆ" ಎಂದು ಯೋಚಿಸಿದ ಪರೀಕ್ಷಿತನಿಗೆ "ಪ್ರಾಯಃ ನನ್ನ ಅಂತ್ಯಕಾಲ ಸಮೀಪಿಸುತ್ತಿರಬಹುದು" ಎನಿಸುತ್ತದೆ ಹಾಗೂ ಅಲ್ಲಿಂದಲೇ ಆತನಿಗೆ ವಿರಕ್ತಿ ಪ್ರಾರಂಭವಾಗುತ್ತದೆ. ತಕ್ಷಣ "ನನಗೆ ಏನೂ ಬೇಡ" ಎನ್ನುವ ನಿರ್ಧಾರ ತಳೆದ ಆತ, ತನ್ನ ಮಗ ಜನಮೇಜಯನಿಗೆ ಪಟ್ಟಾಭಿಷೇಕ ಮಾಡಿ ಏಕಾಂತದಲ್ಲಿ ಧ್ಯಾನ ಸ್ಥಿತನಾಗಲು ನಿರ್ಧರಿಸುತ್ತಾನೆ.

ಇಲ್ಲಿ ಸರ್ವೇಸಾಮಾನ್ಯವಾಗಿ ನಮಗೊಂದು ಪ್ರಶ್ನೆ ಬರುತ್ತದೆ. ಅದೇನೆಂದರೆ: ಕಲಿಯನ್ನು ನಿಗ್ರಹ ಮಾಡಿದ್ದ ಪರೀಕ್ಷಿತನೊಳಗೆ ಕಲಿ ಹೇಗೆ ಪ್ರವೇಶಿಸಿದ ಎನ್ನುವ ಪ್ರಶ್ನೆ. ಈ ಪ್ರಶ್ನೆಗೆ ಉತ್ತರಿಸಬೇಕಾದರೆ ನಾವು ಭಾಗವತವನ್ನು ಸ್ವಲ್ಪ ವಿಶ್ಲೇಷಣೆ ಮಾಡಿ ನೋಡಬೇಕು. ಈ ಹಿಂದೆ ಹೇಳಿದಂತೆ ಪರೀಕ್ಷಿತ ಕಲಿ ಮತ್ತು ಆತನ ಪರಿವಾರದ ವಾಸಕ್ಕೆ ಐದು ಸ್ಥಾನಗಳನ್ನು ಕೊಟ್ಟಿದ್ದ. ಅವುಗಳೆಂದರೆ ದ್ಯೂತ, ಮದ್ಯ, ಸ್ತ್ರೀ, ಮಾಂಸ ಮತ್ತು ಚಿನ್ನ. ಶಾಸ್ತ್ರದಲ್ಲಿ ಹೇಳುವಂತೆ ಈ ಐದು ಸ್ಥಾನಗಳು ಕಲಿಯ ಆಕ್ರಮಣ ಸ್ಥಾನವಾಗಿರುವುದರಿಂದ, ಜೀವನದಲ್ಲಿ ಎತ್ತರಕ್ಕೇರ ಬಯಸುವವರು ಇವುಗಳ ಬೆನ್ನು ಹತ್ತಬಾರದು. ವಿಶೇಷವಾಗಿ ರಾಜರುಗಳಿಗೆ ಈ ಸ್ಥಾನಗಳ ಸೆಳೆತ ಹೆಚ್ಚು. ಅವರು ಅನೇಕ ಮಂದಿ ಸ್ತ್ರೀಯರ ನಡುವೆ ಮಾಂಸ-ಮದ್ಯ ಸೇವನೆ ಮಾಡಿಕೊಂಡು ಇರುವವರು. ಅವರಿಗೆ ಅದು ನಿಷಿದ್ಧವೂ ಅಲ್ಲ. ಆದ್ದರಿಂದ ಧರ್ಮಶೀಲ ರಾಜನಾದವನಿಗೆ ಇವುಗಳ ಅಪಾಯ ಹೆಚ್ಚು ಮತ್ತು ಆತ ಆ ಕುರಿತು ಅತಿ ಹೆಚ್ಚು ಎಚ್ಚರ ವಹಿಸಬೇಕು. ಇಷ್ಟೇ ಅಲ್ಲದೆ, ಗೀತೆಯಲ್ಲಿ ಕೃಷ್ಣ ಹೇಳುವಂತೆ: **ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ । ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥೩-೨೧॥** ಲೋಕಪಾಲಕ ರಾಜ ಏನನ್ನು ಪಾಲನೆ ಮಾಡುತ್ತಾನೋ ಅದನ್ನೇ ಆತನ ಪ್ರಜೆಗಳು ಪಾಲಿಸುತ್ತಾರೆ. ಅವನು ಯಾವುದನ್ನು ಆಧಾರವಾಗಿ ಬಳಸುತ್ತಾನೋ ಜನತೆ ಅದನ್ನೇ ಬೆನ್ನು ಹತ್ತುತ್ತದೆ. **ಅಥೈತಾನಿ ನ ಸೇವೇತ ಬುಭೂಷುಃ ಪುರುಷಃ ಕ್ವಚಿತ್ । ವಿಶೇಷತೋ ಧರ್ಮಶೀಲೋ ರಾಜಾ ಲೋಕಪತಿರ್ಗುರುಃ** ॥ಭಾಗವತ-೦೧-೧೭-೪೦॥ ರಾಜ ಪ್ರಜಾಪಾಲಕ. ಆತ ಪ್ರಜೆಗಳ ಮಾರ್ಗದರ್ಶಕ ಮತ್ತು ಗುರು. ಹಾಗಾಗಿ ಸಾಮಾನ್ಯರಿಗಿಂತ ಮುಂದಾಳುವಾದವನ ಹೊಣೆಗಾರಿಕೆ ದೊಡ್ಡದು.

ಈ ಹಿಂದೆ ವಿಶ್ಲೇಶಿಸಿದಂತೆ: ಇಲ್ಲಿ ಕಲಿಸ್ಥಾನಗಳನ್ನು ಬಳಸಬಾರದು ಎಂದರೆ ಅವಿಹಿತವಾದುದನ್ನು ಬಳಸಬಾರದು ಎಂದರ್ಥ. (**"ವಿಹಿತಾತಿರೇಕೇಣ ನ ಸೇವೇತೇತಿ"**). ಆದ್ದರಿಂದ ಯಾವುದು ಯಾರಿಗೆ ವಿಹಿತ ಎನ್ನುವುದನ್ನು ತಿಳಿಯುವುದು ಬಹಳ ಮುಖ್ಯ. ಉದಾಹರಣೆಗೆ ಮದ್ಯಪಾನ, ಮಾಂಸಭಕ್ಷಣೆ ಮತ್ತು ಸ್ತ್ರೀಸಂಗ. ಇದು ಯಾರಿಗೆ ವಿಹಿತ ಮತ್ತು ಎಷ್ಟು ವಿಹಿತ? ಇವೆಲ್ಲವನ್ನೂ ಪೂರ್ಣವಾಗಿ ಬಿಡಬೇಕು ಎಂದು ಶಾಸ್ತ್ರ ಹೇಳುವುದಿಲ್ಲ. ಎಲ್ಲವುದಕ್ಕೂ ಒಂದು ವ್ಯವಸ್ಥೆಯನ್ನು ಶಾಸ್ತ್ರ ಹೇಳುತ್ತದೆ. ಈ ಎಲ್ಲಾ ಸ್ಥಾನಗಳು ಭಗವಂತನ ಪೂಜಾರೂಪವಾದಾಗ ವಿಹಿತವಾಗುತ್ತದೆ ಮತ್ತು ಚಟವಾದಾಗ ದೋಷವಾಗುತ್ತದೆ. ಈ ಕುರಿತು ಆಚಾರ್ಯ ಮಧ್ವರು ಭಾಗವತ ತಾತ್ಪರ್ಯ ನಿರ್ಣಯದಲ್ಲಿ(ಹನ್ನೊಂದನೇ ಸ್ಕಂಧ- ಅಧ್ಯಾಯ ಐದು, ಶ್ಲೋಕ-ಹನ್ನೊಂದು) ಪ್ರಮಾಣಶ್ಲೋಕದೊಂದಿಗೆ ಸುಂದರ ವಿವರಣೆಯೊಂದನ್ನು ನೀಡಿದ್ದಾರೆ:

**ವ್ಯವಾಯಾಮಿಷಮದ್ಯಾನಿ ಹರೇಃ ಪೂಜಾರ್ಥಮೇವ ತು ।** ಸ್ತ್ರೀ-ಪುರುಷ ಸಮಾಗಮ, ಮದ್ಯಪಾನ ಮತ್ತು ಮಾಂಸಭಕ್ಷಣೆಯನ್ನು ಭಗವಂತನ ಪೂಜಾರೂಪವಾಗಿ ಬಳಸುವಂತಹ ಒಂದು ವಿಧಿ ಇದೆ. ಅಂತಹ ಸಂದರ್ಭದಲ್ಲಿ ಇವು ದೋಷವಾಗುವುದಿಲ್ಲ. **ವಾಮದೇವ್ಯೋ ನಾಮ ಯಜ್ಞೋ ವ್ಯವಾಯೋ ಹರಿಪೂಜನಮ್ ।** ಉಪನಿಷತ್ತಿನಲ್ಲಿ ವಾಮದೇವ ಎನ್ನುವ ಯಜ್ಞದ ಕುರಿತು ಹೇಳುತ್ತಾರೆ. ಇದು ಸ್ತ್ರೀ-ಪುರುಷ ಸಮಾಗಮವನ್ನು ಭಗವಂತನ ಯಜ್ಞರೂಪದಲ್ಲಿ ಅನುಸಂಧಾನ ಮಾಡುವ ವಿಧಾನ. ದಂಪತಿಗಳು "ಲಕ್ಷ್ಮೀನಾರಾಯಣರು ನಮ್ಮೊಳಗಿದ್ದು, ನಮ್ಮನ್ನು ಪ್ರತೀಕವಾಗಿ ಬಳಸಿ, ಪ್ರಜಾವೃದ್ಧಿಗಾಗಿ ನಮ್ಮಿಂದ ಈ ಪವಿತ್ರ ಕಾರ್ಯ ಮಾಡಿಸುತ್ತಿದ್ದಾರೆ" ಎನ್ನುವ ಅನುಸಂಧಾನದಿಂದ ಒಂದಾದಾಗ ಅದು ಭಗವಂತನ ಪೂಜೆಯಾಗುತ್ತದೆ. ಈ ರೀತಿ ಭೋಗದ ಹಿಂದೆ ಭವ್ಯವಾದ ಅನುಸಂಧಾನವಿದ್ದಾಗ ಅದು ಹರಿಪೂಜೆಯಾಗುತ್ತದೆ. **ಪಿತೃ ಯಜ್ಞೋ ದೇವ ಯಜ್ಞೋ ಮಾಂಸೇನ ಪರಿಪೂಜನಮ್ ।** ಪಿತೃಯಜ್ಞ ಮತ್ತು ದೇವಯಜ್ಞದಲ್ಲಿ ಪ್ರಾಣಿಗಳನ್ನು ಬಲಿ ಕೊಡುವ ವಿಧಾನವಿದೆ. ಈ ರೀತಿಯ ಯಜ್ಞವನ್ನು ಕ್ಷತ್ರಿಯರು ಮಾಡುತ್ತಿದ್ದರು. ಇಲ್ಲಿ ಅವರು ತಾವು ತಿನ್ನುವ ಆಹಾರವನ್ನು ಭಗವಂತನಿಗೆ ಅರ್ಪಿಸಿ, ಅದನ್ನು ಭಗವಂತನ ಪ್ರಸಾದ ರೂಪವಾಗಿ ಸೇವಿಸುತ್ತಾರೆ. ಈ ರೀತಿಯ ಪ್ರಾಣಿಹಿಂಸೆ ಅಥವಾ ಮಾಂಸಾಹಾರ ಅವಿಹಿತವಲ್ಲ. ಆದರೆ ಇಲ್ಲಿ ಒಂದು ಎಚ್ಚರ ಅಗತ್ಯ. ಯಾರಿಗೆ ಮಾಂಸ ಭಕ್ಷಣೆ ಅವಿಹಿತವೋ(ಉದಾಹರಣೆಗೆ ವಿಪ್ರರು) ಅವರು ಈ ರೀತಿ ದೇವರಿಗೆ ಅರ್ಪಿಸಿ ಸೇವಿಸುವಂತಿಲ್ಲ. ಕೇವಲ ಮಾಂಸಭಕ್ಷಣೆ ಮಾಡುವವರು ಮಾತ್ರ ಅದನ್ನು ದೇವರಿಗೆ ಅರ್ಪಿಸಿ ಸೇವಿಸಬಹುದು ಅಷ್ಟೇ. **ವ್ಯವಾಯಯಜ್ಞೇ ಮದ್ಯಂ ತು ಸೋಮಾತ್ಮಕತಯೇಷ್ಯತೇ ।** ಕ್ಷತ್ರಿಯರಿಗೆ ಮದ್ಯಪಾನ ನಿಷಿದ್ಧವಲ್ಲ. ಅವರು ಸ್ತ್ರೀ-ಪುರುಷ ಸಮಾಗಮದ ಪೂರ್ವಭಾವಿಯಾಗಿ ಮದ್ಯಪಾನ ಮಾಡಬಹುದು. ಅವರಿಗೆ ಸೃಷ್ಟಿಯಜ್ಞವಾದ ಸ್ತ್ರೀ-ಪುರುಷ ಸಮಾಗಮದಲ್ಲಿ ಮದ್ಯ ಹವಿಸ್ಸಿನಂತೆ. ಆದರೆ ಇಂತಹ ಸೇವನೆ ಅಧ್ಯಯನ, ಅಧ್ಯಾಪನ ಮುಂತಾದ ಭೌದ್ಧಿಕ ಕಾರ್ಯ ಮಾಡುವವರಿಗೆ ನಿಷಿದ್ಧ. **ಕ್ಷತ್ರಿಯಾದೇರ್ನ ವಿಪ್ರಾಣಾಂ ವಿಪ್ರೋ ದೋಷೇಣ ಲಿಪ್ಯತೇ ।** ಒಂದು ವೇಳೆ ಕ್ಷತ್ರಿಯರು ಪ್ರಾಣಿಯನ್ನು ಯಜ್ಞದಲ್ಲಿ ಬಳಸಿದರೆ, ಅವರು ಅದನ್ನು ಸೇವಿಸಬಹುದು. ಆದರೆ ಅಲ್ಲಿ ಪೌರೋಹಿತ್ಯ ಮಾಡಿದ ಋತ್ವಿಜರು ಅದನ್ನು ಸೇವಿಸುವಂತಿಲ್ಲ. **ಆರಾಗತಃ ಪ್ರವೃತ್ತಿಃ ಸ್ಯಾದ್ರಾಗೋ ದೋಷಸ್ಯ ಕಾರಣಮ್ । ಪ್ರಾಣಭಕ್ಷೋಽಥವಾ ಯಜ್ಞೇ ದೈವೇ ಸರ್ವಸ್ಯ ಚೇಷ್ಯತಿ । ಪೈಷ್ಟಮದ್ಯಸ್ಯ ಮಾಧ್ವ್ಯದಿ ಕ್ಷತ್ರಿಯಸ್ಯ ನ ದುಷ್ಯತಿ ।** ವೇದದಲ್ಲಿ ಸೌತ್ರಾಮಣಿ ಯಜ್ಞದ ಪ್ರಸ್ತಾಪವಿದೆ. ಅದು ಮದ್ಯವನ್ನು ಬಳಸಿ ಮಾಡುವ ಯಜ್ಞ. ಆ ರೀತಿ ಯಜ್ಞ ಮಾಡಿದಾಗ ಅದನ್ನು ಮಾಡುವ ಋತ್ವಿಜರು ಯಜ್ಞ ಶೇಷವಾಗಿ ಮದ್ಯ ಸೇವನೆ ಮಾಡುವಂತಿಲ್ಲ. ಒಂದು ವೇಳೆ ಅಲ್ಲಿ ಬಳಸಿದ ಮದ್ಯ ಕಡಿಮೆ ಮದ್ಯಸಾರದಿಂದ(alcohol) ಕೂಡಿದ್ದರೆ, ಅದನ್ನು ಪುರೋಹಿತರು ಕೇವಲ ಆಘ್ರಾಣಿಸಬಹುದು ಅಷ್ಟೇ. ಇಲ್ಲದಿದ್ದರೆ ಅದನ್ನು ಮೂಸುವುದೂ ನಿಷಿದ್ಧ.

ಇಲ್ಲಿ ನಾವು ತಿಳಿಯಬೇಕಾಗಿರುವುದು ಪರೀಕ್ಷಿತ ರಾಜ ಮಾಡಿರುವ ಅವಿಹಿತ ಕಾರ್ಯ. ಆತ ಬೇಟೆಯ ಪೂರ್ವದಲ್ಲಿ ಮದ್ಯವನ್ನು ಭಗವಂತನ ಪ್ರಸಾದ ರೂಪದಲ್ಲಿ ಸೇವಿಸುವ ಬದಲು, ಅತಿಸೇವನೆ ಮಾಡಿರಬೇಕು. ಹಾಗಾಗಿ ಅಲ್ಲಿ ಕಲಿಗೆ ಅವಕಾಶ ಸಿಕ್ಕಿರುವುದು.

**ಅಭೂತಪೂರ್ವಃ ಸಹಸಾ ಕ್ಷುತ್ತೃಡ್ಭ್ಯಾಮರ್ದಿತಾತ್ಮನಃ ।**
**ಬ್ರಾಹ್ಮಣಂ ಪ್ರತ್ಯಭೂದ್ ಬ್ರಹ್ಮನ್ ಮತ್ಸರೋ ಮನ್ಯುರೇವ ಚ ॥೧೮-೨೯॥**

ಈತನಕ ಪರೀಕ್ಷಿತ ಎಂದೂ ಇಂತಹ ಪ್ರಮಾದ ಮಾಡಿರಲಿಲ್ಲ. ಆದರೆ ಅತಿಯಾದ ಹಸಿವು-ಬಾಯಾರಿಕೆ ನಡುವೆ ಅವನಿಂದ ಇಂತಹ ಒಂದು ಪ್ರಮಾದ ನಡೆಯುವಂತೆ ಕಲಿ ಪ್ರೇರೇಪಿಸುತ್ತಾನೆ. ಕಲಿಯ ಪ್ರಭಾವದಿಂದಾಗಿ ಆತನಿಗೆ ಶಮೀಕ ಮುನಿಯ ಮೇಲೆ ಮತ್ಸರ ಮತ್ತು ಕೋಪ ಬರುತ್ತದೆ. ಇಲ್ಲಿ ಮತ್ಸರ ಎಂದರೆ ಹೊಟ್ಟೆಕಿಚ್ಚು ಎಂದರ್ಥವಲ್ಲ. [ಅಸೂಯೆ ಎಂದರೆ ಹೊಟ್ಟೆಕಿಚ್ಚು]. ಇಲ್ಲಿ ಮತ್ಸರ ಎಂದರೆ ನಮ್ಮ ಅಧೀನವಿರುವ ಒಬ್ಬ ವ್ಯಕ್ತಿ, ನಮ್ಮ ಅಪೇಕ್ಷೆಯಂತೆ ನಡೆದುಕೊಳ್ಳದೇ ಇದ್ದಾಗ ನಮಗಾಗುವ ಅಸಮಾಧಾನ. ತನ್ನ ರಾಜ್ಯದ ಒಬ್ಬ ಪ್ರಜೆ ನನಗೆ ಸತ್ಕಾರ ಮಾಡಲಿಲ್ಲ ಎನ್ನುವ ಅಸಮಾಧಾನ ಪರೀಕ್ಷಿತನನ್ನು ಕಾಡುತ್ತದೆ ಮತ್ತು ಕಲಿಯ ಪ್ರಭಾವದಿಂದ ಆತನಿಗೆ ಕೋಪ ಬಂದು ಪ್ರಮಾದವೆಸಗುತ್ತಾನೆ.

## ಶಮೀಕ ಮುನಿಯ ಮಗನಿಂದ ಪರೀಕ್ಷಿತನಿಗೆ ಶಾಪ

ಇದೇ ಸಮಯದಲ್ಲಿ ಇತ್ತ ಶಮೀಕ ಮುನಿಯ ಆಶ್ರಮದಲ್ಲಿ ಸತ್ತ ಹಾವನ್ನು ಪರೀಕ್ಷಿತ ತಂದೆಯ ಹೆಗಲ ಮೇಲೆ ಹಾಕಿರುವ ವಿಷಯ ಶಮೀಕನ ಮಗ ಶೃಂಗಿಗೆ ತಿಳಿಯುತ್ತದೆ. ದೂರದಲ್ಲಿ ಋಷಿ ಕುಮಾರರೊಂದಿಗೆ ಆಟವಾಡುತ್ತಿದ್ದ ಆತನಿಗೆ ಈ ಸುದ್ದಿ ಕೇಳಿದ ತಕ್ಷಣ ಕೋಪ ಬರುತ್ತದೆ. ಕೋಪದಲ್ಲಿ ಆತ ಹೇಳುತ್ತಾನೆ: "ರಾಜರುಗಳಿಗೆ ತಪಸ್ಸು ಮಾಡಿ ಶಕ್ತಿ ಕೊಡುವವರು ನಾವು; ನಮ್ಮ ಮನೆ ಕಾಯುವ ನಾಯಿಗಳು ಮನೆಯೊಳಗೆ ಬಂದು ನಮ್ಮ ಮೇಲೇ ಸವಾರಿ ಮಾಡುತ್ತವೆ" ಎಂದು.

ಕೃಷ್ಣೇ ಗತೇ ಭಗವತಿ ಶಾಸ್ತರ್ಯುತ್ಪಥಗಾಮಿನಾಮ್ ।
ತಾನ್ ಭಿನ್ನಸೇತೂನದ್ಯಾಹಂ ಶಾಸ್ಮಿ ಪಶ್ಯತ ಮೇ ಬಲಮ್ ॥೩೫॥

"ಶ್ರೀಕೃಷ್ಣನಿದ್ದಾಗ ಈ ಎಲ್ಲಾ ಕ್ಷತ್ರಿಯರು ಹೆದರಿ ಓಡುತ್ತಿದ್ದರು. ಆಗ ಯಾರೂ ಅನ್ಯಾಯ ಮಾಡುತ್ತಿರಲಿಲ್ಲ. ಏಕೆಂದರೆ ದಾರಿ ತಪ್ಪಿದವರಿಗೆ ಶ್ರೀಕೃಷ್ಣ ತಕ್ಕ ಶಾಸ್ತಿ ಮಾಡುತ್ತಿದ್ದ. ಆದರೆ ಶ್ರೀಕೃಷ್ಣ ಹೊರಟುಹೋದ ಮೇಲೆ, ಇವರಿಗೆಲ್ಲಾ ಬಾರೀ ಧೈರ್ಯ ಬಂದಿದೆ. ಈ ದಾರಿ ತಪ್ಪಿದ ಮಂದಿಗೆ ಶ್ರೀಕೃಷ್ಣ ಇರುತ್ತಿದ್ದರೆ ಏನು ಮಾಡುತ್ತಿದ್ದನೋ, ಅದನ್ನು ನಾನು ಮಾಡುತ್ತೇನೆ" ಎಂದು ಅಹಂಕಾರದಿಂದ ನುಡಿಯುತ್ತಾನೆ ಮುನಿಕುಮಾರ. "ಮುನಿಕುಮಾರನ ಸಿಟ್ಟೆಂದರೆ ಏನೆಂಬುದನ್ನು ನೀವೂ ನೋಡಿ" ಎಂದು ತನ್ನ ಸ್ನೇಹಿತರ ಮುಂದೆ ಬಡಾಯಿ ಕೊಚ್ಚಿಕೊಳ್ಳುತ್ತಾನೆ ಆತ.

ಇತ್ಯುಕ್ತ್ವಾ ರೋಷತಾಮ್ರಾಕ್ಷೋ ವಯಸ್ಯಾನೃಷಿಬಾಲಕಾನ್ ।
ಕೌಶಿಕ್ಯಾಪ ಉಪಸ್ಪೃಶ್ಯ ವಾಗ್ವಜ್ರಂ ವಿಸಸರ್ಜ ಹ ॥೩೬॥

ಶೃಂಗಿ ಇನ್ನೂ ಚಿಕ್ಕ ಹುಡುಗ. ಆದರೆ ಬಾಲ್ಯದಿಂದಲೂ ಸಾಧನೆ ಮಾಡಿ ಆತನಲ್ಲಿ ತಪಃಶಕ್ತಿ ಬೆಳೆದಿದೆ. ಇಲ್ಲಿ ಕೋಪಗೊಂಡ ಆತನ ಕಣ್ಣುಗಳು ಕೆಂಪಾಗಿವೆ. ಆತ ಕೋಪದಿಂದ ದುಡುಕಿ ಶಾಪವೆನ್ನುವ ವಜ್ರಾಯುಧವನ್ನು ಪರೀಕ್ಷಿತನತ್ತ ಎಸೆಯುತ್ತಾನೆ.

ಅನೇಕ ಭಾಷ್ಯಾಕಾರರು ಈ ಶ್ಲೋಕದಲ್ಲಿ ಬಂದಿರುವ "ಕೌಶಿಕ್ಯಾಪ ಉಪಸ್ಪೃಶ್ಯ" ಎನ್ನುವ ಮಾತನ್ನು "ಕೌಶಿಕ ನದಿಯ ನೀರಿನಿಂದ ಆಚಮನ ಮಾಡಿ" ಎಂದು ಅರ್ಥೈಸಿದ್ದಾರೆ. ಆದರೆ ನಮಗೆ ತಿಳಿದಂತೆ ಪರೀಕ್ಷಿತ ರಾಜ ಎಲ್ಲೂ ನೀರನ್ನು ಕಾಣದೇ ಮುನಿಯ ಆಶ್ರಮ ಪ್ರವೇಶಿಸಿದ್ದ. ಇದರಿಂದ ನಮಗೆ ಅಲ್ಲಿ ಹತ್ತಿರದಲ್ಲಿ ಎಲ್ಲೂ ನದಿ ಇರಲಿಲ್ಲ ಎನ್ನುವುದು

ತಿಳಿಯುತ್ತದೆ. ಹಾಗಾಗಿ ಆಚಾರ್ಯ ಮಧ್ವರು "ಕೌಶಿಕ್ಯಾಪ ಉಪಸ್ಪೃಶ್ಯ" ಎಂದರೆ "**ಕೌಶಿಕೀ ಕುಶಪಾಣಿಃ** ।" ಎಂದು ವಿವರಿಸಿದ್ದಾರೆ. ಅಂದರೆ "ಕುಶದಿಂದ(ದರ್ಭೆಯಿಂದ) ನಿರ್ಮಿತವಾದ (ಕೌಶಿಕೀ) 'ಪವಿತ್ರ'ವನ್ನು ಕೈಯಲ್ಲಿ ಧರಿಸಿ" ಎಂದರ್ಥ. ಶೃಂಗಿ 'ಪವಿತ್ರ'ವನ್ನು ಕೈಯಲ್ಲಿ ಧರಿಸಿ, ಮಂತ್ರಸ್ನಾನ(ಆಚಮನ) ಮಾಡಿ, ಪರೀಕ್ಷಿತನಿಗೆ ಶಾಪವನ್ನಿತ್ತ. [ಧರ್ಭೆಯ 'ಪವಿತ್ರ'ವನ್ನು ಕೈಯಲ್ಲಿ ಧರಿಸುವುದರಿಂದ ಅಲ್ಲಿ ದುಷ್ಟ ಶಕ್ತಿಗಳ ಪ್ರವೇಶವಾಗುವುದಿಲ್ಲ. ಇನ್ನು ಆಚಮನ ಎಂದರೆ- ಭಗವಂತನ ನಾಮ ಮತ್ತು ವೇದ ಮಂತ್ರಗಳಿಂದ ಅಂಗಾಂಗಗಳಲ್ಲಿ ಭಗವಂತನ ಚಿಂತನೆ ಮಾಡಿ, ಭಗವಂತ ತನ್ನನ್ನು ಶುದ್ಧಗೊಳಿಸಲಿ ಎಂದು ಅಂತರಂಗದಲ್ಲಿ ಸ್ಮರಣೆ ಮಾಡುವುದು].

**ಇತಿ ಲಂಘಿತಮರ್ಯಾದಂ ತಕ್ಷಕಃ ಸಪ್ತಮೇSಹನಿ ।**
**ದಂಕ್ಷ್ಯತಿ ಸ್ಮ ಕುಲಾಂಗಾರಂ ಚೋದಿತೋ ಮೇ ಪಿತೃದ್ರುಹಮ್ ॥೩೭॥**

"ಒಬ್ಬ ರಾಜನಾಗಿ ಮಹರ್ಷಿಗಳಿಗೆ ಹೇಗೆ ಗೌರವ ಸಲ್ಲಿಸಬೇಕು ಅನ್ನುವುದನ್ನು ಅರಿಯದೇ, ಸಂಪ್ರದಾಯವನ್ನು ಮುರಿದು, ನನ್ನ ತಂದೆಗೆ ದ್ರೋಹ ಬಗೆದ ಪರೀಕ್ಷಿತನನ್ನು, ಇಂದಿನಿಂದ ಏಳನೇ ದಿನಕ್ಕೆ, ನನ್ನ ಪ್ರೇರಣೆಯಂತೆ, ನಾಗರ ಕಚ್ಚಿ ನಾಶಮಾಡಲಿ" ಎಂದು ಮುನಿಕುಮಾರ ಶಾಪವನ್ನೀಯುತ್ತಾನೆ. ಇಂತಹ ಘೋರ ಶಾಪವನ್ನಿತ್ತ ಬಳಿಕ ಶೃಂಗಿ ತಂದೆಯ ಬಳಿ ಬಂದು ಅಳುತ್ತಾ ಕೂರುತ್ತಾನೆ.

ಸಮಾಧಿ ಸ್ಥಿತಿಯಿಂದ ಈಚೆ ಬಂದ ಶಮೀಕ ಮುನಿಗೆ ತನ್ನ ಹೆಗಲ ಮೇಲೆ ಸತ್ತ ಹಾವಿರುವುದು ತಿಳಿಯುತ್ತದೆ. ಆತ ತಕ್ಷಣ ಆ ಹಾವನ್ನು ದೂರ ಎಸೆಯುತ್ತಾನೆ. ಅದೇ ಸಮಯದಲ್ಲಿ ಆತ ತನ್ನೆದುರು ಅಳುತ್ತಾ ಕುಳಿತಿರುವ ತನ್ನ ಮಗನನ್ನು ಕಂಡು "ಏಕೆ ಅಳುತ್ತಿರುವೆ? ಏನಾಯ್ತು?" ಎಂದು ಕೇಳುತ್ತಾನೆ. ಆಗ ಮುನಿಕುಮಾರ ಹೇಳುತ್ತಾನೆ: "ಒಂದು ಅನ್ಯಾಯ ನಡೆದು ಹೋಯಿತು. ನಮ್ಮ ಕಾಲಿಗೆ ಬೀಳಬೇಕಾದ ಪರೀಕ್ಷಿತ ನಿಮ್ಮ ಹೆಗಲ ಮೇಲೆ ಸತ್ತ ಹಾವನ್ನು ಹಾಕಿ ನಮಗೆ ಅವಮಾನ ಮಾಡಿದ. ಈ ರೀತಿ ನಮ್ಮನ್ನು ಅವಮಾನಗೊಳಿಸಿದ ಆತನಿಗೆ ನಾನು ಶಾಪ ಕೊಟ್ಟೆ" ಎಂದು.

ತನ್ನ ಪುತ್ರ ಶೃಂಗಿಯ ಮಾತನ್ನು ಕೇಳಿಸಿಕೊಂಡ ಶಮೀಕ ಮುನಿ ಹೇಳುತ್ತಾನೆ: "ಎಂತಹಾ ತಪ್ಪು ಮಾಡಿಬಿಟ್ಟೆ? ಪರೀಕ್ಷಿತ ನಮಗೆ ಏನು ಅನ್ಯಾಯ ಮಾಡಿದ? ಆತ ಹಾಕಿರುವುದು ಸತ್ತ ಹಾವನ್ನು. ಆ ಸತ್ತ ಹಾವಿನಿಂದ ನಮ್ಮ ಬದುಕಿನಲ್ಲಿ ಯಾವ ವ್ಯತ್ಯಯವಾಯಿತು? ಏನೂ ಅನ್ಯಾಯ ಮಾಡದ ಅವನಿಗೆ ಇಂತಹ ಘೋರ ಶಾಪವನ್ನಿತ್ತ ನೀನು ಮೂರ್ಖ" ಎಂದು.

**ಅರಕ್ಷಮಾಣೇ ನರದೇವನಾಮ್ನಿ ರಥಾಂಗಪಾಣಾವಯಮಂಗ ಲೋಕಃ ।**
**ತದಾ ಹಿ ಚೋರಪ್ರಚುರೋ ವಿನಂಕ್ಷ್ಯತ್ಯರಕ್ಷ್ಯಮಾಣೋ ವಿವರೂಥವತ್ ಕ್ಷಣಾತ್ ॥೪೩॥**

"ರಾಜಾ ಪ್ರತ್ಯಕ್ಷ ದೇವತಾ" ಎನ್ನುವ ಮಾತೊಂದಿದೆ. ಪರೀಕ್ಷಿತ ರಾಜ ಎಂದರೆ ಅಂತಿಂತಹ ಮನುಷ್ಯನಲ್ಲ. "ಅವನು ನರದೇವ" ಎನ್ನುತ್ತಾನೆ ಶಮೀಕ. ಅಂದರೆ: ಮನುಷ್ಯ ರೂಪದಲ್ಲಿ ರಕ್ಷಣೆ ಮಾಡಲು ಬಂದಿರುವ ದೇವಾಂಶ ಸಂಭೂತ. ಚಕ್ರಪಾಣಿಯಾದ ಭಗವಂತ ಪ್ರತಿಯೊಬ್ಬ ಕ್ಷತ್ರಿಯನಲ್ಲೂ ಕೂಡಾ 'ರಾಜರಾಜೇಶ್ವರ' ನಾಮಕನಾಗಿ ಸನ್ನಿಹಿತನಾಗಿದ್ದಾನೆ. "ಹೀಗಿರುವಾಗ ಭಗವದ್ ಸನ್ನಿಧಾನಕ್ಕೆ ಪಾತ್ರನಾಗಿರುವ ಪರೀಕ್ಷಿತನಿಗೆ ನೀನು ಶಾಪ ಕೊಟ್ಟೆಯಲ್ಲಾ" ಎಂದು ಮರುಗುತ್ತಾನೆ ಮುನಿ. "ನಿನ್ನ ಶಾಪದಿಂದ ಮಹಾತ್ಮನಾದ ಪರೀಕ್ಷಿತ ಏಳು ದಿನಗಳಲ್ಲಿ

ಸಾಯುತ್ತಾನೆ. ಆಗ ಈ ದೇಶದಲ್ಲಿ ಅರಾಜಕತೆ ಉಂಟಾಗುತ್ತದೆ. ಇದರಿಂದಾಗಿ ದೇಶದಾದ್ಯಂತ ಕಳ್ಳ-ಕಾಕರು ತುಂಬಿ ದೇಶವನ್ನು ದೋಚುತ್ತಾರೆ. ಯಾರೂ ಮರ್ಯಾದೆಯಿಂದ ಬದುಕಲು ಸಾಧ್ಯವಿಲ್ಲದಾಗುತ್ತದೆ. ಇಂತಹ ಸ್ಥಿತಿಗೆ ಈ ದೇಶವನ್ನು ತಳ್ಳಿದೆ ನೀನು" ಎನ್ನುತ್ತಾನೆ ಶಮೀಕ.

ಈ ಶ್ಲೋಕದಲ್ಲಿ 'ವಿವರೂಥ' ಎನ್ನುವ ಪದ ಬಳಕೆಯಾಗಿದೆ. ಇದೊಂದು ಅಪೂರ್ವವಾದ ಶಬ್ದ. ಸಂಸ್ಕೃತದಲ್ಲಿ 'ವರೂಥಿನಿ' ಎಂದರೆ ಸೇನೆ. 'ವರೂಥ' ಎಂದರೆ ಸಾಮಾನ್ಯವಾಗಿ ರಕ್ಷಣೆ ಎಂದರ್ಥ. ಸೇನೆಯ ಮೂಲಕ ರಕ್ಷಣೆ ಅಥವಾ ವ್ಯೂಹ ರಚಿಸಿ ಸೇನೆಗೆ ರಕ್ಷಣೆ ನೀಡುವುದನ್ನು 'ವರೂಥ' ಎನ್ನುತ್ತಾರೆ. ಅಭೇಧ್ಯ ಕೋಟೆ 'ವರೂಥ' . ಒಟ್ಟಿನಲ್ಲಿ ವರೂಥ ಎಂದರೆ ಆವರಣ ಅಥವಾ ತಡೆ. ಕಳ್ಳ-ಕಾಕರನ್ನು ತಡೆಯುವ ವ್ಯವಸ್ಥೆ ಇಲ್ಲದಿರುವುದು 'ವಿವರೂಥ'.

ರಕ್ಷಕನಾದ ರಾಜ ಇಲ್ಲದಾದಾಗ ಆ ದೇಶ ನಾಶವಾಗುತ್ತದೆ. "ನಿನ್ನ ಶಾಪದಿಂದಾಗಿ ಇಡೀ ದೇಶಕ್ಕೆ ಅನ್ಯಾಯವಾಯಿತು. ಪರೀಕ್ಷಿತ ರಾಜ ಧರ್ಮದ ಪ್ರಕಾರ ದೇಶವನ್ನು ರಕ್ಷಣೆ ಮಾಡುತ್ತಿರುವವನು. ಆತನಿಂದಾಗಿ ನಾವಿಲ್ಲಿ ನಿರಾತಂಕವಾಗಿ ತಪಸ್ಸು ಮಾಡುತ್ತಿದ್ದೇವೆ. ಅಂತಹ ಸಜ್ಜನ ಸಾಯುವಂತೆ ಮಾಡಿ ಬಹಳ ದೊಡ್ಡ ಅನ್ಯಾಯ ಮಾಡಿದೆ ನೀನು" ಎನ್ನುತ್ತಾನೆ ಶಮೀಕ.

> ತದದ್ಯ ನಃ ಪಾಪಮುಪೈತ್ಯನನ್ವಯಂ ಯನ್ನಷ್ಟನಾಥಸ್ಯ ಪಶೋರ್ವಿಲುಂಪಕಾಃ ।
> ಪರಸ್ಪರಂ ಘ್ನಂತಿ ಶಪಂತಿ ವೃಂಜತೇ ಪಶೂನ್ ಸ್ತ್ರಿಯೋಽರ್ಥಾನ್ ಪುರುದಸ್ಯವೋ ಜನಾಃ ॥೪೪॥

"ನೀನು ಮಾಡಿದ ಈ ತಪ್ಪಿನಿಂದಾಗಿ ನಾನು ಪರಿಹಾರವಿಲ್ಲದ ಪಾಪಕ್ಕೆ ಬಲಿಯಾದೆ. ಈ ತಪ್ಪಿಗೆ ಪ್ರಾಯಶ್ಚಿತವಿಲ್ಲ. ನೇತಾರನಿಲ್ಲದ ರಾಷ್ಟ್ರವನ್ನು ದರೋಡೆಕೋರರು ದೋಚುತ್ತಾರೆ. ಪುಂಡ-ಪೋಕರಿಂದ ದೇಶದ ನಾಗರೀಕ ವ್ಯವಸ್ಥೆ ಅಸ್ತವ್ಯಸ್ತವಾಗುತ್ತದೆ. ಅವರು ಪಶುಗಳನ್ನೂ, ಸ್ತ್ರೀಯರನ್ನೂ ಮತ್ತು ಸಂಪತ್ತನ್ನೂ ದೋಚುತ್ತಾರೆ. ಜನ ಒಬ್ಬರಿಗೊಬ್ಬರು ಜಗಳಾಡಿಕೊಂಡು ಶಾಪ ಹಾಕಿಕೊಂಡು ಬದುಕುತ್ತಾರೆ. ಇಂತಹ ಘೋರ ಅಪರಾಧ ಮಾಡಿದೆಯಲ್ಲಾ" ಎಂದು ಮಗನನ್ನು ಬಯ್ಯುತ್ತಾನೆ ಶಮೀಕ ಮುನಿ.

ಈ ಶ್ಲೋಕದಲ್ಲಿ 'ಪಶೋರ್ವಿಲುಂಪಕಾಃ' ಎನ್ನುವ ಪದ ಬಳಕೆಯನ್ನು ಮೇಲ್ನೋಟದಲ್ಲಿ ನೋಡಿದರೆ- "ದರೋಡೆಕೋರರು ಪಶುಗಳನ್ನು ದೋಚುತ್ತಾರೆ" ಎಂದು ಹೇಳಿದಂತೆ ಕಾಣುತ್ತದೆ. ಆದರೆ ಇಲ್ಲಿ 'ಪಶು' ಎನ್ನುವ ಪದಕ್ಕೆ ಒಂದು ವಿಶಿಷ್ಠವಾದ ಅರ್ಥ ವಿವರಣೆಯನ್ನು ಆಚಾರ್ಯ ಮಧ್ವರ ತಾತ್ಪರ್ಯ ನಿರ್ಣಯದಲ್ಲಿ ಕಾಣುತ್ತೇವೆ. ಅಲ್ಲಿ ಆಚಾರ್ಯರು 'ಪಶು' ಶಬ್ದಕ್ಕೆ ಕೋಶವನ್ನು ನೀಡಿದ್ದಾರೆ. **ವಿಡ್ ರಾಷ್ಟ್ರಂ ಪಶುರುತ್ಸೇಕೋ ಭ್ರಮರಶ್ಚೇತಿ ಕಥ್ಯತೇ ।** ಅಂದರೆ ವಿಡ್, ರಾಷ್ಟ್ರ, ಪಶು, ಉತ್ಸೇಕ ಮತ್ತು ಭ್ರಮರ ಇವು ಸಮಾನಾರ್ಥಕ ಪದಗಳು ಎಂದರ್ಥ. ಆದ್ದರಿಂದ '**ಪಶೋರ್ವಿಲುಂಪಕಾಃ**' ಎಂದರೆ ಪಶುಗಳನ್ನು ದೋಚುತ್ತಾರೆ ಎಂದರ್ಥವಲ್ಲ, ರಾಷ್ಟ್ರವನ್ನು ದೋಚುತ್ತಾರೆ ಎಂದರ್ಥ.

> ಧರ್ಮಪಾಲೋ ನರಪತಿಃ ಸ ತು ಸಮ್ರಾಡ್ ಬೃಹಚ್ಛ್ರವಾಃ ।
> ಸಾಕ್ಷಾನ್ಮಹಾಭಾಗವತೋ ರಾಜರ್ಷಿರ್ಹಯಮೇಧಯಾಟ್ ।
> ಕ್ಷುತ್ತೃಟ್ ಶ್ರಮಾನ್ವಿತೋ ದೀನೋ ನೈವಾಸ್ಮಚ್ಛಾಪಮರ್ಹತಿ ॥೪೫॥

ಪರೀಕ್ಷಿತ ಎಂತಹ ರಾಜನಾಗಿದ್ದ ಎನ್ನುವುದನ್ನು ಇಲ್ಲಿ ಶಮೀಕರು ವಿವರಿಸಿದ್ದಾರೆ. "ಭಗವಂತನ ಕೃಪಾಕಟಾಕ್ಷದಿಂದ ಮರುಹುಟ್ಟು ಪಡೆದ ಪರೀಕ್ಷಿತ ಪರಮ ವಿಷ್ಣುಭಕ್ತ. ಆತ ಒಬ್ಬ ಮಹಾಜ್ಞಾನಿ. ಅಶ್ವಮೇಧಯಾಗವನ್ನು ಮಾಡಿದ ರಾಜರ್ಷಿ. ಆತ ಸಹಜ ಸ್ಥಿತಿಯಲ್ಲಿ ಈ ರೀತಿ ಮಾಡಿಲ್ಲ, ಹಸಿವು-ಬಾಯಾರಿಕೆ ತಾಳಲಾಗದೇ ಒಂದು ಕ್ಷಣ ಪರವಶತೆಯಲ್ಲಿ ಇಂತಹ ಘಟನೆ ನಡೆಯಿತು . ಘಟನೆ ನಡೆದ ಉತ್ತರ ಕ್ಷಣದಲ್ಲಿ ಆತ ಪಶ್ಚಾತ್ತಾಪ ಪಟ್ಟಿದ್ದಾನೆ. ಹೀಗಿರುವಾಗ ನಮ್ಮಂತವರು ಶಾಪ ಕೊಡುವ ವ್ಯಕ್ತಿ ಅವನಲ್ಲ. ಅವನಿಗೆ ಶಾಪ ಕೊಡಬಾರದಿತ್ತು" ಎಂದು ಮರುಗುತ್ತಾರೆ ಶಮೀಕ ಮುನಿ. ಬಹಳ ಸುಂದರವಾದ ಮಾತುಗಳಿವು. ಏಕೆಂದರೆ ಯಾವುದೇ ಒಂದು ಸಂಗತಿಯನ್ನು ಎಷ್ಟು ಭಿನ್ನ ಆಯಾಮಗಳಿಂದ ನೋಡಬಹುದು ಎನ್ನುವುದನ್ನು ನಾವಿಲ್ಲಿ ಕಾಣಬಹುದು. ಸಮಾಧಿಸ್ಥಿತಿಯಲ್ಲಿ ಧ್ಯಾನಮಗ್ನನಾಗಿದ್ದ ಋಷಿಯ ಹೆಗಲ ಮೇಲೆ ಸತ್ತ ಹಾವನ್ನು ಹಾಕಿರುವುದು ನಮಗೆ ತಪ್ಪಾಗಿ ಕಾಣುತ್ತದೆ. ಆದರೆ ಶಮೀಕರು ಹೇಳುತ್ತಾರೆ: "ಪರೀಕ್ಷಿತ ಏನೂ ತಪ್ಪು ಮಾಡಿಲ್ಲ" ಎಂದು. ಅವರ ದೃಷ್ಟಿಯಲ್ಲಿ ಅದು ಸತ್ತ ಹಾವು. ಅದರಿಂದ ಯಾವ ಅಪಾಯವೂ ಆಗಿಲ್ಲ, ದೈನ್ಯಾವಸ್ಥೆಯಲ್ಲಿ ಪರೀಕ್ಷಿತ ಆ ರೀತಿ ನಡೆದುಕೊಂಡ ಅಷ್ಟೇ.

ಅಪಾಪೇಷು ಸ್ವಭೃತ್ಯೇಷು ಬಾಲೇನಾಪಕ್ವಬುದ್ಧಿನಾ ।
ಪಾಪಂ ಕೃತಂ ತದ್ಭಗವಾನ್ ಸರ್ವಾತ್ಮಾ ಕ್ಷಂತುಮರ್ಹತಿ ॥೪೭॥

ಶಮೀಕರು ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳುತ್ತಾರೆ: "ಯಾವ ತಪ್ಪೂ ಮಾಡದ, ಪರಮಭಕ್ತನಾದ ಪರೀಕ್ಷಿತನಿಗೆ ತಿಳಿಗೇಡಿ ಹುಡುಗನೊಬ್ಬ ಶಾಪ ಕೊಟ್ಟುಬಿಟ್ಟ. ಪರಿಹಾರವಿಲ್ಲದ ತಪ್ಪು ನಡೆದುಹೋಯಿತು. ಎಲ್ಲರ ಅಂತರ್ಯಾಮಿಯಾಗಿ ನಿಂತು ಎಲ್ಲವನ್ನೂ ನಡೆಸುವ ನೀನು ಆತನನ್ನು ಕ್ಷಮಿಸಿ ಉದ್ಧರಿಸು" ಎಂದು.

ಸಾಧವಃ ಪ್ರಾಯಶೋ ಲೋಕೇ ಪರೈರ್ದ್ವಂದ್ವೇಷು ಯೋಜಿತಾಃ ।
ನ ವ್ಯಥಂತಿ ನ ಹೃಷ್ಯಂತಿ ಯತ ಆತ್ಮಾಗುಣಾಶ್ರಯಃ ॥೫೦॥

ಇಲ್ಲಿ ಉಗ್ರಶ್ರವಸ್ಸು, ಶಮೀಕರ ನಡೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ಸಜ್ಜನರ ಸ್ವಭಾವವನ್ನು ವಿವರಿಸಿದ್ದಾರೆ. ಸಜ್ಜನರಿಂದಲೂ ಒಮ್ಮೊಮ್ಮೆ ಅಪಚಾರವಾಗುತ್ತದೆ, ಇಲ್ಲವೆಂದಿಲ್ಲ. ಆದರೆ ಸುಮಾರಾಗಿ ಸಜ್ಜನರ ಸ್ವಭಾವೇನೆಂದರೆ- ಸಜ್ಜನರು ತಮಗೆ ದುಃಖ ಕೊಟ್ಟವರ ಮೇಲೆ ಕೋಪಿಸಿಕೊಳ್ಳುವುದಾಗಲೀ, ಉಪಕಾರವಾದಾಗ ಕುಣಿದು ಕುಪ್ಪಳಿಸುವುದಾಗಲೀ ಮಾಡುವುದಿಲ್ಲ. ಏಕೆಂದರೆ ನಾವು ಮಾಡಿದ ಪಾಪ-ಪುಣ್ಯಗಳಿಗೆ ನಾವೇ ಹೊಣೆಗಾರರು ಹೊರತು ಇನ್ನೊಬ್ಬರಲ್ಲ ಎನ್ನುವ ಸತ್ಯ ಅವರಿಗೆ ತಿಳಿದಿರುತ್ತದೆ. ಒಳ್ಳೆಯದನ್ನು ಮಾಡಿದರೆ ಒಳ್ಳೆಯದನ್ನು ಪಡೆಯುತ್ತೇವೆ, ಕೆಟ್ಟದ್ದನ್ನು ಮಾಡಿದರೆ ಕೆಟ್ಟದ್ದನ್ನು ಪಡೆಯುತ್ತೇವೆ. ನಾವು ಮಾಡದೇ ಇದ್ದದ್ದನ್ನು ಇನ್ನೊಬ್ಬರು ನಮಗೆ ಕೊಡುವುದು ಸಾಧ್ಯವಿಲ್ಲ. ಇನ್ನೊಬ್ಬರು ನಮಗೆ ತೊಂದರೆ ಕೊಟ್ಟರೆ ಅದಕ್ಕೆ ಮೂಲಭೂತ ಕಾರಣ ನಾವು ಹಿಂದೆ ಮಾಡಿದ ಪಾಪವೇ ಹೊರತು, ಇನ್ನೊಬ್ಬರಲ್ಲ. ನಾವು ಮಾಡಿದ ಪಾಪ ಪಕ್ವವಾಗಿ ನಾವದನ್ನು ಅನುಭವಿಸುವ ಕಾಲ ಬಂದಾಗ, ಅದಕ್ಕೆ ಯಾರೋ ಒಬ್ಬರು ನೆಪವಾಗುತ್ತಾರೆ ಅಷ್ಟೇ. ನಾವು ದುಃಖಕ್ಕೊಳಗಾಗುವ ಪ್ರಾರಾಬ್ಧಕರ್ಮ ನಮ್ಮಲಿಲ್ಲದಿದ್ದರೆ ಯಾರೂ ನಮಗೆ ದುಃಖ ಕೊಡಲು ಸಾಧ್ಯವಿಲ್ಲ. ಹೀಗಾಗಿ ಇನ್ನೊಬ್ಬರು ಅನ್ಯಾಯ ಮಾಡಿದಾಗ ನಾವು ನಮ್ಮೊಳಗೊಮ್ಮೆ ನೋಡಿಕೊಳ್ಳಬೇಕು. ಇಂತಹ ದುಃಖವನ್ನು ಅನುಭವಿಸಬೇಕಾದ ಪಾಪ ನನ್ನಿಂದ ನಡೆದಿತ್ತು,

ಅದಕ್ಕೇ ಭಗವಂತ ಈ ಶಿಕ್ಷೆ ಕೊಟ್ಟ ಅನ್ನುವುದನ್ನು ಮೊದಲು ತಿಳಿದುಕೊಳ್ಳಬೇಕು. ಇದನ್ನು ಶಮೀಕರು ತಿಳಿದಿದ್ದರು. ಆದ್ದರಿಂದ ಅವರಿಗೆ ಕೋಪ ಬರಲಿಲ್ಲ.

ಶಮೀಕರು ನಡೆದ ಅಚಾತುರ್ಯದ ವಿಷಯವನ್ನು ಪರೀಕ್ಷಿತನಿಗೆ ತಲುಪಿಸುತ್ತಾರೆ. "ತನ್ನ ಮಗ ಅಚಾತುರ್ಯದಿಂದ ಶಾಪವನ್ನಿತ್ತಿದ್ದಾನೆ, ಆ ಶಾಪವನ್ನು ಹಿಂದೆ ತೆಗೆದುಕೊಳ್ಳುವ ಶಕ್ತಿ ನನ್ನಲ್ಲಿಲ್ಲ. ನಿನ್ನಲ್ಲೀಗ ಉಳಿದಿರುವುದು ಕೇವಲ ಏಳೇ ದಿನಗಳು. ಅದಕ್ಕಾಗಿ ದಯವಿಟ್ಟು ಬೇಕಾದ ವ್ಯವಸ್ಥೆ ಮಾಡಿಕೋ" ಎಂದು ರಾಜನಿಗೆ ಹೇಳಿ ಕಳುಹಿಸುತ್ತಾರೆ.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಅಷ್ಟಾದಶೋಽಧ್ಯಾಯಃ ॥**

ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಹದಿನೆಂಟನೇ ಅಧ್ಯಾಯ ಮುಗಿಯಿತು.

*********

# ಏಕೋನವಿಂಶೋಽಧ್ಯಾಯಃ

## ಸರ್ವಸ್ವವನ್ನೂ ತ್ಯಾಗ ಮಾಡಿದ ಪರೀಕ್ಷಿತ

ಇತ್ತ ಪರೀಕ್ಷಿತನ ರಾಜಧಾನಿಯಾದ ಹಸ್ತಿನಾಪುರದಲ್ಲಿ ರಾಜಾ ಪರೀಕ್ಷಿತ ತನ್ನಿಂದಾದ ತಪ್ಪಿಗೆ ಪಶ್ಚಾತ್ತಾಪಗೊಂಡು, ವಿರಕ್ತಿಯಿಂದ, ಪರಲೋಕ ಯಾತ್ರೆಗೆ ಬೇಕಾದ ಉಪಾಸನೆ-ಸಾಧನೆಗೆ ಮನಸ್ಸನ್ನು ಸಿದ್ಧಗೊಳಿಸಿಕೊಂಡ. ಆತ ಅಲ್ಲೇ ಸಮೀಪದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಹರಿಯುತ್ತಿರುವ ಗಂಗಾನದಿಯ ಸ್ವಲ್ಪ ದಕ್ಷಿಣ ಭಾಗದ ನೀರಿನಲ್ಲಿ ಸ್ಥಂಭವೊಂದರ ಮೇಲೆ ಎಲೆಮನೆಯನ್ನು ಕಟ್ಟಿ, ಅಲ್ಲಿದ್ದು, ತನ್ನ ಅಂತ್ಯಕಾಲದಲ್ಲಿ ಭಗವಂತನ ಧ್ಯಾನದಲ್ಲಿ ದಿನಕಳೆಯಬೇಕೆಂದು ನಿರ್ಧರಿಸಿದ. ಶಮೀಕ ಮುನಿ ಕಳುಹಿಸಿದ ಶಾಪ ಸಂದೇಶ ಆತನನ್ನು ಸ್ವಲ್ಪವೂ ವಿಚಲಿತಗೊಳಿಸಲಿಲ್ಲ. ತಾನಿನ್ನು ಅರಮನೆಯಲ್ಲಿ ವಾಸಿಸುವುದಿಲ್ಲ, ನಿರಾಹಾರನಾಗಿ, ಸಮಯ ವ್ಯರ್ಥ ಮಾಡದೇ, ಉಳಿದ ಏಳು ದಿನ ಭಗವದ್ ಚಿಂತನೆಯಲ್ಲಿ ಕಳೆಯಬೇಕೆಂದು ಸಂಕಲ್ಪಿಸಿದ ಪರೀಕ್ಷಿತ.
ಭಾಗವತದಲ್ಲೇ ಹೇಳುವಂತೆ- ಗಂಗೆ ಹರಿಪಾದ ನಖದಿಂದ ಬಂದವಳು. ಭಗವಂತನ ತ್ರಿವಿಕ್ರಮರೂಪದ ಪಾದದಿಂದ ಬಂದಿರುವ ಪಾದೋದಕ ಗಂಗೆ. ಅಂತಹ ಪರಮ ಪವಿತ್ರವಾದ ವಿಷ್ಣುಪದಿಯಲ್ಲಿ ನಿರ್ಮಿತವಾದ ಕುಟೀರದಲ್ಲಿ ವಾಸ ಮಾಡಲು ನಿರ್ಧರಿಸಿದ ಪರೀಕ್ಷಿತ.

ಇತಿ ಸ್ಮ ರಾಜಾ ವ್ಯವಸಾಯಯುಕ್ತಃ ಪ್ರಾಚೀನಕಾಗ್ರೇಷು ಕುಶೇಷು ಧೀರಃ ।
ಉದಙ್ಮುಖೋ ದಕ್ಷಿಣಕೂಲ ಆಸ್ತೇ ಸಮುದ್ರಪತ್ನ್ಯಾಃ ಸ್ವಸುತನ್ಯಸ್ತಭಾರಃ ॥೧೭॥

ಈ ಹಿಂದೆ ಹೇಳಿದಂತೆ- ತನ್ನ ಮಗ ಜನಮೇಜಯನಿಗೆ ಪಟ್ಟಕಟ್ಟಿದ ಪರೀಕ್ಷಿತ, ಸಮಸ್ತ ರಾಜ್ಯದ ಹೊಣೆಗಾರಿಕೆಯನ್ನು ಮಗನಿಗೆ ವಹಿಸಿದ. ನದಿಯಲ್ಲಿ ನಿರ್ಮಿಸಿದ ಕುಟೀರದಲ್ಲಿ ದರ್ಭೆಯನ್ನು ಪೂರ್ವಾಭಿಮುಖವಾಗಿ ಹಾಸಿ, ಆ ಪೂರ್ವಾಭಿಮುಖವಾದ ದರ್ಭೆಯ ಚಾಪೆಯ ಮೇಲೆ ಉತ್ತರಾಭಿಮುಖವಾಗಿ ಕುಳಿತ ಪರೀಕ್ಷಿತ. ನಮಗೆ ತಿಳಿದಂತೆ- ಉತ್ತರದ ಮಾರ್ಗ ಎತ್ತರದ ಮಾರ್ಗ. ಅಂದರೆ ಅದು ಮೋಕ್ಷಕ್ಕೆ ಹೋಗುವ ಮಾರ್ಗ. ದಕ್ಷಿಣದ ಮಾರ್ಗ ಸಂಸಾರದ ಚಕ್ರಭ್ರಮಣ. ಹೀಗಾಗಿ, ತಾನು ಮತ್ತೆ ಮರಳಿ ಸಂಸಾರಕ್ಕೆ ಬರುವ ಮಾರ್ಗದಿಂದ ಪಾರಾಗಲು ಪರೀಕ್ಷಿತ ದಕ್ಷಿಣಕ್ಕೆ ಬೆನ್ನು ಹಾಕಿ ಕುಳಿತ.

ಇದೇ ಸಮಯದಲ್ಲಿ ಅಲ್ಲಿಗೆ ವಸಿಷ್ಠರು, ಅಂಗೀರಸರು, ಭೃಗು, ಪರಾಶರರು, ವ್ಯಾಸರು ಮತ್ತು ದೇವರ್ಷಿ ನಾರದರು ಆಗಮಿಸುತ್ತಾರೆ. ಎಂದೂ ಹೀಗೆ ಕಾಣಸಿಗದ ಋಷಿ ಸಮೂಹವನ್ನು ಕಂಡು ಪರೀಕ್ಷಿತನಿಗೆ ಸಂತೋಷವಾಗುತ್ತದೆ ಮತ್ತು ಆತ "ತನ್ನನ್ನು ಹರಸಬೇಕೆಂದು" ಅವರಲ್ಲಿ ಕೇಳಿಕೊಳ್ಳುತ್ತಾನೆ. ಆಗ ನೆರೆದ ಋಷಿಗಳು ಏಳು ದಿನವೂ ಅಲ್ಲೇ ಇದ್ದು, ರಾಜನನ್ನು ಆಶೀರ್ವದಿಸಲು ನಿರ್ಧರಿಸುತ್ತಾರೆ.

# ವಿಂಶೋಽಧ್ಯಾಯಃ

## ಶುಕಮುನಿಗಳ ಆಗಮನ

ಪರೀಕ್ಷಿತ ನೆರೆದ ಋಷಿಗಳಲ್ಲಿ ತನ್ನ ಉದ್ಧಾರದ ಮಾರ್ಗದ ಉಪದೇಶ ಬೇಡಿ ನಿಂತಿರುವ ಸಂದರ್ಭದಲ್ಲಿ, ಅಲ್ಲಿ ಒಂದು ವಿಚಿತ್ರವಾದ ಘಟನೆ ನಡೆಯುತ್ತದೆ. ಎಂದೂ ಯಾರಿಗೂ ಕಾಣಸಿಗದ ವಿರಕ್ತಮೂರ್ತಿ ಶುಕಾಚಾರ್ಯರು ಅಲ್ಲಿಗೆ ಆಗಮಿಸುತ್ತಾರೆ.

ತತ್ರಾಭವದ್ ಭಗವಾನ್ ವ್ಯಾಸಪುತ್ರೋ ಯದೃಚ್ಛಯಾ ಗಾಮಟಮಾನೋಽನಪೇಕ್ಷಃ ।
ಅಲಕ್ಷ್ಯಲಿಂಗೋ ನಿಜಲಾಭತುಷ್ಟೋ ವೃತಶ್ಚ ಬಾಲೈರವಧೂತವೇಷಃ ॥೧॥

ಶುಕಾಚಾರ್ಯರು ಎಂದೂ ಎಲ್ಲೂ ಕಾಣಸಿಗುವವರಲ್ಲ. ಅಂತಹ ಶುಕಾಚಾರ್ಯರು ಇಂದು ರಾಜಧಾನಿಗೆ ಆಗಮಿಸಿದ್ದಾರೆ. ಇಲ್ಲಿ ಶುಕಾಚಾರ್ಯರನ್ನು 'ಭಗವಾನ್' ಎಂದು ಸಂಬೋಧಿಸಿದ್ದಾರೆ. ಋಷಿಗಳನ್ನು 'ಭಗವಂತನನ್ನು ಬಲ್ಲವರು' ಎನ್ನುವ ಅರ್ಥದಲ್ಲಿ 'ಭಗವಾನ್' ಎನ್ನುವ ವಿಶೇಷಣ ಬಳಸಿ ಸಂಬೋಧಿಸುತ್ತಾರೆ. **"ಉತ್ಪತ್ತಿಂ ಆಯತಿಂಚೈವ ಭೂತಾನಾಂ ಆಗತಿಂ ಗತಿಮ್ । ವೇತ್ತಿ ವಿದ್ಯಾಂ ಅವಿದ್ಯಾಂಚ ಸ ವಾಚ್ಯೋ ಭಗವಾನ್ ಇತಿ ।"** ಸಮಸ್ತ ಜೀವಜಾತ ಎಲ್ಲಿಂದ ಬರುತ್ತದೆ, ಎಲ್ಲಿಗೆ ಹೋಗುತ್ತದೆ, ಯಾವುದು ಯಥಾರ್ಥ, ಯಾವುದು ಅಯಥಾರ್ಥ, ಯಾವುದು ವಿದ್ಯೆ, ಯಾವುದು ಅವಿದ್ಯೆ, ಇವೆಲ್ಲವನ್ನೂ ಚೆನ್ನಾಗಿ ತಿಳಿದವರನ್ನು 'ಭಗವಾನ್' ಎಂದು ಕರೆಯುತ್ತಾರೆ.
ಇಲ್ಲಿ 'ಯದೃಚ್ಛಯಾ' ಎನ್ನುವ ಪದ ಬಳಕೆಯಾಗಿದೆ. ಯದೃಚ್ಛಯಾ ಅಂದರೆ 'ಆಕಸ್ಮಿಕ'. ಶುಕಾಚಾರ್ಯರು ಆಕಸ್ಮಿಕವಾಗಿ ಹಸ್ತಿನಪುರ ಪ್ರವೇಶಿಸಿದರು ಎನ್ನುವುದು ಈ ಶ್ಲೋಕದ ಮೇಲ್ನೋಟದ ಅರ್ಥ. ಆದರೆ ಭಗವಂತನ ವ್ಯವಸ್ಥೆಯಲ್ಲಿ ಯಾವುದೂ ಆಕಸ್ಮಿಕವಿಲ್ಲ. ಪ್ರತಿಯೊಂದು ಘಟನೆ ಹಿಂದೆ ಒಂದು ವ್ಯವಸ್ಥಿತವಾದ ಯೋಜನೆಯಿರುತ್ತದೆ. ಆ ಯೋಜನೆ ನಮಗೆ ತಿಳಿಯದೇ ಇರುವುದರಿಂದ ಅದು ನಮಗೆ ಆಕಸ್ಮಿಕವಾಗುತ್ತದೆ. ಇಲ್ಲಿ ಪರೀಕ್ಷಿತ ಏಳು ದಿನ ಭಾಗವತ ಶ್ರವಣ ಮಾಡಿ ಉದ್ಧಾರವಾಗಬೇಕು ಎನ್ನುವುದು ದೈವಸಂಕಲ್ಪವಾಗಿತ್ತು. ಅದಕ್ಕೆಂದೇ ಶುಕಾಚಾರ್ಯರ ಆಗಮನವಾಗುತ್ತದೆ.

ತಂ ದ್ವ್ಯಷ್ಟವರ್ಷಂ ಸುಕುಮಾರಪಾದ ಕರೋರುಬಾಹ್ವಂಸಕಪೋಲಗಾತ್ರಮ್ ।
ಚಾರ್ವಾರುಣಾಕ್ಷೋನ್ನಸತುಲ್ಯಕರ್ಣಂ ಸುಭ್ರ್ವಾನನಂ ಕಂಬುಸುಜಾತಕಂಠಮ್ ॥೨॥

ನಿಗೂಢಜತ್ರುಂ ಪೃಥುತುಂಗವಕ್ಷಸಮಾವರ್ತನಾಭಿಂ ವಲಿವಲ್ಗೂದರಂ ಚ ।
ದಿಗಂಬರಂ ವಕ್ತ್ರವಿಕೀರ್ಣಕೇಶಂ ಪ್ರಲಂಬಬಾಹುಂ ಸ್ವಮರೋತ್ತಮಾಭಮ್ ॥೩॥

ಶುಕಾಚಾರ್ಯರು ನಗರ ಪ್ರವೇಶಿಸಿದಾಗ ಅವರನ್ನು ನಗರದ ಜನರು ಗುರುತಿಸುವುದಿಲ್ಲ. ನಗರದಲ್ಲಿ ಬಾಲಕರು ಕೀಟಲೆ ಮಾಡಿಕೊಂಡು ಅವರ ಬೆನ್ನು ಹತ್ತುತ್ತಾರೆ. ಆದರೆ ದಿಗಂಬರನಾಗಿ(ನಿರ್ವಸ್ತ್ರನಾಗಿ) ಯಾವುದರ ಪರಿವೆಯೂ ಇಲ್ಲದೆ, ಸ್ವರೂಪಸುಖವನ್ನು ಅನುಭವಿಸುತ್ತಾ, ಹಸನ್ಮುಖಿ ಶುಖಾಚಾರ್ಯರು ಮುಂದೆ ಸಾಗುತ್ತಿದ್ದರು.

ಶುಕಾಚಾರ್ಯರು ನೋಡಲು ಹದಿನಾರು ವರ್ಷದ ಯುವಕನಂತೆ ಕಾಣುತ್ತಿದ್ದರು. ಅವರದು ಮುದ್ದಾದ ಮುಖ, ಧೀರ್ಘಬಾಹು. ಅತ್ಯಂತ ಸುಂದರ ವ್ಯಕ್ತಿತ್ವ. ಆದರೆ ಮೈಮೇಲೆ ಬಟ್ಟೆ ಇಲ್ಲ. ಯಾವುದೋ ದೇವಲೋಕದ ದೇವತೆ ಭೂಮಿಗಿಳಿದು ಬಂದಂತೆ ಕಾಣುವ ರೂಪ ಅವರದ್ದಾಗಿತ್ತು.

ಶ್ಯಾಮಂ ಸದಾSSಪೀಚ್ಯವಯೋSಙ್ಗಲಕ್ಷ್ಮ್ಯಾ ಸ್ತ್ರೀಣಾಂ ಮನೋಜ್ಞಂ ರುಚಿರಸ್ಮಿತೇನ ।
ಅಭ್ಯುತ್ಥಿತಾ ಮುನಯಶ್ಚಾಸನೇಭ್ಯಸ್ತಲ್ಲಕ್ಷಣಜ್ಞಾ ಅಪಿ ಗೂಢವರ್ಚಸಮ್ ॥೪॥

ಶ್ಯಾಮವರ್ಣದ(ಕಪ್ಪು ಮಿಶ್ರಿತ ಬಿಳಿ ಬಣ್ಣದ) ಶುಕಾಚಾರ್ಯರು ಈಗಷ್ಟೇ ಹದಿನಾರಕ್ಕೆ ಕಾಲಿಡುತ್ತಿರುವವರಂತೆ ಕಾಣುತ್ತಿದ್ದರು. ದಿಗಂಬರನಾದರೂ ಕೂಡಾ, ಅವರು ಅಸಹ್ಯವಾಗಿ ಕಾಣುತ್ತಿರಲಿಲ್ಲ. ನೋಡಿದರೆ ಮೈಮರೆತುಬಿಡುವ ವ್ಯಕ್ತಿತ್ವ ಅವರದಾಗಿತ್ತು. ಅವರ ಮಗುವಿನಂತಹ ನಗು ಸ್ತ್ರೀಯರನ್ನು ಹುಚ್ಚುಕಟ್ಟಿಸುವಂತಿತ್ತು. ಶುಕಾಚಾರ್ಯರು ತಮ್ಮ ಬ್ರಹ್ಮವರ್ಚಸ್ಸನ್ನು ತೋರ್ಪಡಿಸುತ್ತಿರಲಿಲ್ಲ. ಆದರೆ ಅವರು ಆಗಮಿಸಿದಾಗ ಅಲ್ಲಿ ನೆರೆದ ಜ್ಞಾನಿಗಳು ಅವರನ್ನು ಗುರುತಿಸಿ, ಎದ್ದು ನಿಂತು ಸ್ವಾಗತಿಸುತ್ತಾರೆ.
ಪರೀಕ್ಷಿತ ಶುಕಾಚಾರ್ಯರನ್ನು ಕಂಡು ಬಹಳ ಸಂತೋಷಪಡುತ್ತಾನೆ. "ಕರೆದರೂ ಬಾರದ, ಹುಡುಕಿದರೂ ಸಿಗದ ನೀವು, ಇಂತಹ ಕ್ಷಣದಲ್ಲಿ ಆಗಮಿಸಿರುವುದು ನನ್ನ ಪುಣ್ಯ. ಕೃಷ್ಣನ, ಪಾಂಡವರ ವಂಶದಲ್ಲಿ ಹುಟ್ಟಿದ ನನಗೆ ನನ್ನ ಹಿರಿಯರ ಆಶೀರ್ವಾದ ಪೂರ್ಣಪ್ರಮಾಣದಲ್ಲಿರುವುದರಿಂದ ಇದು ಸಾಧ್ಯವಾಯಿತು; ನಾನು ಭಾಗ್ಯಶಾಲಿ" ಎಂದು ಶುಕಾಚಾರ್ಯರನ್ನು ಸ್ವಾಗತಿಸುತ್ತಾನೆ ಪರೀಕ್ಷಿತ. "ನನ್ನಲ್ಲಿರುವುದು ಕೇವಲ ಏಳು ದಿನಗಳು. ಈ ಏಳು ದಿನಗಳಲ್ಲಿ ಒಬ್ಬ ಮನುಷ್ಯ ಖಚಿತವಾಗಿ ಏನನ್ನು ಕೇಳಬೇಕೋ, ಅದನ್ನು ನಾನು ಕೇಳಿ ಸಾಯಬೇಕು. ಹೇಳಲು ನೀವು ಸಿಕ್ಕಿರುವುದು ನನ್ನ ಪುಣ್ಯ" ಎನ್ನುತ್ತಾನೆ ಪರೀಕ್ಷಿತ.

ಯಚ್ಛ್ರೋತವ್ಯಮಥೋ ಜಪ್ಯಂ ಯತ್ ಕರ್ತವ್ಯಂ ನೃಭಿಃ ಸದಾ ।
ಸ್ಮರ್ತವ್ಯಂ ಭಜನೀಯಂ ವಾ ಬ್ರೂಹಿ ಯದ್ವಾ ವಿಪರ್ಯಯಮ್ ॥೧೪॥

ಪರೀಕ್ಷಿತ ಹೇಳುತ್ತಾನೆ: ನಾವು ಜೀವಮಾನದಲ್ಲಿ ಏನು ಮಾಡಿದ್ದೇವೆ ಎನ್ನುವುದಕ್ಕಿಂತ ಮುಖ್ಯವಾದುದು, ಅಂತ್ಯಕಾಲದಲ್ಲಿ ಏನು ಮಾಡುತ್ತೇವೆ ಎನ್ನುವುದು" ಎಂದು. ಇದೇ ಮಾತನ್ನು ಶ್ರೀಕೃಷ್ಣ ಗೀತೆಯಲ್ಲಿ ಹೀಗೆ ಹೇಳಿದ್ದಾನೆ: **ಯಂ ಯಂ ವಾSಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇಬರಮ್ । ತಂತಮೇವೈತಿ ಕೌಂತೇಯ ಸದಾ ತದ್ ಭಾವಭಾವಿತಃ ॥೮-೬॥** ಅಂದರೆ: ನಾವು ಕೊನೆಯಲ್ಲಿ ಯಾವಯಾವ ವಿಷಯವನ್ನು ನೆನೆಯುತ್ತಾ ದೇಹವನ್ನು ತೊರೆಯುತ್ತೇವೋ, ಅದರಲ್ಲೇ ಅನುಗಾಲ ಬೇರೂರಿದ ಸಂಸ್ಕಾರದಿಂದ ಅದನ್ನೇ ಪಡೆಯುತ್ತೇವೆ. ಇದೇ ಮಾತನ್ನು ಮಧ್ವಾಚಾರ್ಯರು ದ್ವಾದಶಸ್ತೋತ್ರದಲ್ಲಿ ಹೀಗೆ ಹೇಳಿದ್ದಾರೆ: "**ಸಂತತಂ ಚಿಂತಯೇSನಂತಂ ಅಂತಕಾಲೇ ವಿಶೇಷತಃ**". ಇದರರ್ಥ ಜೀವಮಾನವಿಡೀ ಯಾವ ಸಾಧನೆಯನ್ನೂ ಮಾಡುವ ಅಗತ್ಯವಿಲ್ಲ, ಕೇವಲ ಅಂತ್ಯಕಾಲದಲ್ಲಿ ಭಗವಂತನ ಸ್ಮರಣೆ ಮಾಡಿದರೆ ಸಾಕು ಎಂದಲ್ಲ. ಜೀವಮಾನದ ಸಾಧನೆ ಇಲ್ಲದೇ ಸಾಯುವ ಕ್ಷಣದಲ್ಲಿ ಭಗವಂತನ ನೆನಪು ಬರಲಾರದು.

ಅನೇಕ ಬಾರಿ ಜೀವನದಲ್ಲಿ ಕೇಳಬೇಕಾದುದನ್ನು ಕೇಳದೆಯೇ ಬದುಕು ಮುಗಿದು ಹೋಗುತ್ತದೆ. ಇದಕ್ಕೆ ಕಾರಣ- ಯಾವುದನ್ನು ಕೇಳಬೇಕು ಎನ್ನುವುದು ಗೊತ್ತಿಲ್ಲದೇ ಇರುವುದು ಮತ್ತು ಸರಿಯಾದುದನ್ನು ಹೇಳುವವರು ಸಿಗದೇ ಇರುವುದು. ಒಂದು ವೇಳೆ ತಿಳಿದವರೊಬ್ಬರು ಹೇಳಲು ಸಿಕ್ಕರೆ, ಆಗ ನಿರಾಯಾಸವಾಗಿ ಅದನ್ನು ಕೇಳಿ ತಿಳಿದುಕೊಳ್ಳಬಹುದು. ಒಬ್ಬ ವ್ಯಕ್ತಿ ಒಂದು ವಿಷಯವನ್ನು ತನ್ನ ಜೀವಮಾನವೆಲ್ಲಾ ಅಧ್ಯಯನ ಮಾಡಿ ಜೀರ್ಣಿಸಿಕೊಂಡಿರಬಹುದು. ಈ ರೀತಿ ಜೀರ್ಣಿಸಿಕೊಂಡ ವಿಷಯವನ್ನು ಆತನಿಂದ ಇನ್ನೊಬ್ಬರು ಕ್ಷಣಾರ್ಧದಲ್ಲಿ ಪಡೆಯಬಹುದು. ಹೀಗಾಗಿ ತಿಳಿದವರು ನಮ್ಮ ಜೀವನದಲ್ಲಿ ಮಾರ್ಗದರ್ಶಕರಾಗಿ ಸಿಗುವುದು ನಮ್ಮ ಭಾಗ್ಯ. ಇಲ್ಲಿ ಪರೀಕ್ಷಿತನಿಗೆ ಮಾರ್ಗದರ್ಶಕರಾಗಿ ಶುಕಾಚಾರ್ಯರು ಸಿಕ್ಕಿದ್ದಾರೆ. ಆದ್ದರಿಂದ ಆತ ಅವರಲ್ಲಿ ತನ್ನ ಕೊನೇ ದಿನಗಳ ಅಪೇಕ್ಷೆಯನ್ನು ಮುಂದಿಡುತ್ತಾನೆ.

"ನಾವು ಜೀವಮಾನದಲ್ಲಿ ಕೇಳಲೇಬೇಕಾದ ಸಂಗತಿ ಯಾವುದು? ಕೇವಲ ಕೇಳುವುದಷ್ಟೇ ಅಲ್ಲ, ಕೇಳಿ ನಿರಂತರ ಮನನ ಮಾಡಬೇಕಾದ ಸಂಗತಿ ಯಾವುದು? ಅದಕ್ಕೋಸ್ಕರ ಬದುಕಿನಲ್ಲಿ ನಾವು ಮಾಡಬೇಕಾದ ಕೆಲಸ ಯಾವುದು? ಯಾವುದನ್ನು ಕೇಳಬೇಕು? ಯಾವುದನ್ನು ಕೇಳಬಾರದು? ಯಾವುದನ್ನು ಮಾಡಬೇಕು? ಯಾವುದನ್ನು ಮಾಡಬಾರದು? ಈ ಎರಡು ಮುಖದಲ್ಲಿ ನನಗೆ ಮಾರ್ಗದರ್ಶನ ಮಾಡಿ. ಈ ಏಳು ದಿನಗಳ ಪ್ರತಿಕ್ಷಣವನ್ನೂ ವ್ಯರ್ಥಮಾಡದೇ ಸಾರ್ಥಕಗೊಳಿಸಿಕೊಳ್ಳಲು, ಅನ್ನ ನೀರು ತೊರೆದು ಕುಳಿತಿದ್ದೇನೆ. ತಿಳಿದ ನೀವು ಇವೆಲ್ಲವನ್ನೂ ನನಗೆ ಹೇಳಬೇಕು" ಎಂದು ಪ್ರಾರ್ಥಿಸುತ್ತಾನೆ ಪರೀಕ್ಷಿತ.

ನೂನಂ ಭಗವತೋ ಬ್ರಹ್ಮನ್ ಗೃಹೇಷು ಗೃಹಮೇಧಿನಾಮ್ ।
ನ ಲಕ್ಷ್ಯತೇ ಹ್ಯವಸ್ಥಾನಮಪಿ ಗೋದೋಹನಂ ಕ್ವಚಿತ್ ॥೧೫॥

ಇಲ್ಲಿ ಪರೀಕ್ಷಿತ ವಿಶೇಷವಾಗಿ ಶುಕಾಚಾರ್ಯರಲ್ಲೇ ತನ್ನ ಪ್ರಶ್ನೆಯನ್ನು ಮುಂದಿಡಲು ಕಾರಣವೇನೆಂದರೆ- ಶುಕಾಚಾರ್ಯರ ದರ್ಶನ ಸಿಕ್ಕಿರುವುದೇ ದೊಡ್ಡ ಸಂಗತಿ. ಬೇಕೂ ಅಂತ ಹುಡುಕಿಕೊಂಡು ಹೋದರೂ ಸಿಗುವವರಲ್ಲ ಅವರು. ಎಲ್ಲೋ ಒಮ್ಮೆ ಭಿಕ್ಷಾಟನೆಗಾಗಿ ಬಂದರೆ ಅವರು ಭಿಕ್ಷೆಗಾಗಿ ಕಾಯುತ್ತಿದ್ದುದು ಒಂದು ಹಸುವಿನ ಹಾಲು ಕರೆಯುವಷ್ಟು ಕಾಲ ಮಾತ್ರ. ಇಂದು ಇಲ್ಲಿಗೆ ತಾವಾಗಿ ಅವರು ಆಗಮಿಸಿರುವುದು ಅತ್ಯಂತ ಆಶ್ಚರ್ಯದಾಯಕ. ಹೀಗಾಗಿ ಪರೀಕ್ಷಿತ ಹೇಳುತ್ತಾನೆ: "ಹುಡುಕಿದರೂ ಸಿಗದ, ಕರೆದರೂ ಬಾರದ ನೀವು, ಇಂದು ನೀವಾಗಿಯೇ ಬಂದಿದ್ದೀರಿ. ನೀವು ನನಗೆ ಮಾರ್ಗದರ್ಶನ ಮಾಡಬೇಕು" ಎಂದು. ಹೀಗೆ ನೇರವಾಗಿ ಶುಕಾಚಾರ್ಯರಲ್ಲಿ ತನ್ನ ಪ್ರಶ್ನೆಯನ್ನು ಮಂಡಿಸಿ ತನಗೆ ಉಪದೇಶ ಮಾಡಬೇಕೆಂದು ಕೇಳಿಕೊಳ್ಳುತ್ತಾನೆ ಪರೀಕ್ಷಿತ.

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ವಿಂಶೋಽಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.

॥ ಸಮಾಪ್ತಶ್ಚ ಪ್ರಥಮಸ್ಕಂಧಃ ॥

ಈ ಘಟ್ಟಕ್ಕೆ ಭಾಗವತದ ಪ್ರಥಮ ಸ್ಕಂಧ ಮುಕ್ತಾಯವಾಯಿತು. ಪರೀಕ್ಷಿತನ ಪ್ರಶ್ನೆಗೆ ಉತ್ತರ ರೂಪವಾಗಿ ಶುಕಾಚಾರ್ಯರು ತಾನು ತನ್ನ ತಂದೆ ವೇದವ್ಯಾಸರಿಂದ ಅಧ್ಯಯನ ಮಾಡಿರತಕ್ಕಂತಹ ಅಧ್ಯಾತ್ಮ ಸಂದೇಶವನ್ನು ಉಪದೇಶಿಸುವುದು ಮುಂದಿನ ಭಾಗ. ಈ ಹಿಂದೆ ಹೇಳಿದಂತೆ- ಈ ಸ್ಕಂಧ ಭಾಗವತದ ಪೀಠಿಕೆ ರೂಪದಲ್ಲಿದೆ. ಭಾಗವತದಲ್ಲಿ ಭಗವಂತನ ಕಥೆ ಪ್ರಾರಂಭವಾಗುವುದು ಎರಡನೇ ಸ್ಕಂಧದಿಂದ.

*********

# ಪ್ರಥಮ ಸ್ಕಂಧ ಮೂಲ ಶ್ಲೋಕ

## ಅಥ ಪ್ರಥಮೋಽಧ್ಯಾಯಃ

॥ ಓಂ ನಮೋ ಭಗವತೇ ವಾಸುದೇವಾಯ ಓಂ ॥

ಹರಿಃ ಓಂ ॥

ಜನ್ಮಾದ್ಯಸ್ಯ ಯತೋಽನ್ವಯಾದಿತರತಶ್ಚಾರ್ಥೇಷ್ವಭಿಜ್ಞಃ ಸ್ವರಾಟ್
ತೇನೇ ಬ್ರಹ್ಮ ಹೃದಾ ಯ ಆದಿಕವಯೇ ಮುಹ್ಯಂತಿ ಯಂ ಸೂರಯಃ ।
ತೇಜೋವಾರಿಮೃದಾಂ ಯಥಾ ವಿನಿಮಯೋ ಯತ್ರ ತ್ರಿಸರ್ಗೋಽ ಮೃಷಾ
ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ ಸತ್ಯಂ ಪರಂ ಧೀಮಹಿ ॥೧॥

ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ ನಿರ್ಮತ್ಸರಾಣಾಂ ಸತಾಮ್
ವೇದ್ಯಂ ವಾಸ್ತವಮತ್ರ ವಸ್ತು ಶಿವದಂ ತಾಪತ್ರಯೋನ್ಮೂಲನಮ್ ।
ಶ್ರೀಮದ್ಭಾಗವತೇ ಮಹಾಮುನಿಕೃತೇ ಕಿಂ ವಾಽಪರೈರೀಶ್ವರಃ
ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ ಶುಶ್ರೂಷುಭಿಸ್ತತ್ ಕ್ಷಣಾತ್ ॥೨॥

ನಿಗಮಕಲ್ಪತರೋರ್ಗಳಿತಂ ಫಲಂ ಶುಕಮುಖಾದಮೃತದ್ರವಸಂಯುತಮ್ ।
ಪಿಬತ ಭಾಗವತಂ ರಸಮಾಲಯಂ ಮುಹುರಹೋ ರಸಿಕಾ ಭುವಿ ಭಾವುಕಾಃ ॥೩॥

ನೈಮಿಷೇಽನಿಮಿಷಕ್ಷೇತ್ರೇ ಋಷಯಃ ಶೌನಕಾದಯಃ ।
ಸತ್ರಂ ಸ್ವರ್ಗಾಯ ಲೋಕಾಯ ಸಹಸ್ರಸಮಮಾಸತ ॥೪॥

ತ ಏಕದಾ ತು ಮುನಯಃ ಪ್ರಾತರ್ಹುತಹುತಾಶನಾಃ ।
ಸತ್ಕೃತಂ ಸೂತಮಾಸೀನಂ ಪಪ್ರಚ್ಛುರಿದಮಾದೃತಾಃ ॥೫ ॥

ಋಷಯ ಊಚುಃ
ತ್ವಯಾ ಖಲು ಪುರಾಣಾನಿ ಸೇತಿಹಾಸಾನಿ ಚಾನಘ
ಆಖ್ಯಾತಾನ್ಯಪ್ಯಧೀತಾನಿ ಧರ್ಮಶಾಸ್ತ್ರಾಣಿ ತಾನ್ಯುತ ॥೬॥

ಯಾನಿ ವೇದವಿದಾಂ ಶ್ರೇಷ್ಠೋ ಭಗವಾನ್ ಬಾದರಾಯಣಃ

ಅನ್ಯೇ ಚ ಮುನಯಃ ಸೂತ ಪರಾವರವಿದೋ ವಿದುಃ ॥೭॥
ವೇತ್ಥ ತ್ವಂ ಸೌಮ್ಯ ತತ್ ಸರ್ವಂ ತತ್ತ್ವತಸ್ತದನುಗ್ರಹಾತ್
ಬ್ರೂಯುಃ ಸ್ನಿಗ್ಧಸ್ಯ ಶಿಷ್ಯಸ್ಯ ಗುರವೋ ಗುಹ್ಯಮಪ್ಯುತ ॥೮॥

ತತ್ರ ತತ್ರಾಂಜಸಾಽಽಯುಷ್ಮನ್ ಭವತಾ ಯದ್ ವಿನಿಶ್ಚಿತಮ್ ।
ಪುಂಸಾಮೇಕಾಂತತಃ ಶ್ರೇಯಸ್ತನ್ನಃ ಶಂಸಿತುಮರ್ಹಸಿ ॥೯॥

ಪ್ರಾಯೇಣಾಲ್ಪಾಯುಷೋ ಮರ್ತ್ಯಾಃ ಕಲಾವಸ್ಮಿನ್ ಯುಗೇ ಜನಾಃ
ಮಂದಾಃ ಸುಮಂದಮತಯೋ ಮಂದಭಾಗ್ಯಾ ಹ್ಯುಪದ್ರುತಾಃ ॥೧೦॥

ಭೂರೀಣಿ ಭೂರಿಕರ್ಮಾಣಿ ಶ್ರೋತವ್ಯಾನಿ ವಿಭಾಗಶಃ ।
ಅತಃ ಸಾಧೋಽತ್ರ ಯತ್ ಸಾರಂ ಸಮುದ್ಧೃತ್ಯ ಮನೀಷಯಾ ।
ಬ್ರೂಹಿ ಭದ್ರಾಯ ಭೂತಾನಾಂ ಯೇನಾತ್ಮಾಽಽಶು ಪ್ರಸೀದತಿ ॥೧೧॥

ಸೂತ ಜಾನಾಸಿ ಭದ್ರಂ ತೇ ಭಗವಾನ್ ಸಾತ್ವತಾಂ ಪತಿಃ ।
ದೇವಕ್ಯಾಂ ವಸುದೇವಸ್ಯ ಜಾತೋ ಯಸ್ಯ ಚಿಕೀರ್ಷಯಾ ॥೧೨॥

ತನ್ನಃ ಶುಶ್ರೂಷಮಾಣಾನಾಮರ್ಹಸ್ಯಂಗಾನುವರ್ಣಿತುಮ್
ಯಸ್ಯಾವತಾರೋ ಭೂತಾನಾಂ ಕ್ಷೇಮಾಯ ವಿಭವಾಯ ಚ ॥೧೩॥

ಆಪನ್ನಃ ಸಂಸೃತಿಂ ಘೋರಾಂ ಯನ್ನಾಮ ವಿವಶೋ ಗೃಣನ್
ತತಃ ಸದ್ಯೋ ವಿಮುಚ್ಯೇತ ಯಂ ಬಿಭೇತಿ ಸ್ವಯಂ ಭವಃ ॥೧೪॥

ಯತ್ಪಾದಸಂಶ್ರಯಾಃ ಸೂತ ಮುನಯಃ ಪ್ರಶಮಾಯನಾಃ
ಸದ್ಯಃ ಪುನಂತ್ಯುಪಸ್ಪೃಷ್ಟಾಃ ಸ್ವರ್ಧುನೀವಾನುಸೇವಯಾ ॥೧೫॥

ಕೋ ವಾ ಭಗವತಸ್ತಸ್ಯ ಪುಣ್ಯಶ್ಲೋಕೇಡ್ಯಕರ್ಮಣಃ
ಶುದ್ಧಿಕಾಮೋ ನ ಶೃಣುಯಾದ್ ಯಶಃ ಕಲಿಮಲಾಪಹಮ್ ॥೧೬॥

ತಸ್ಯ ಕರ್ಮಾಣ್ಯುದಾರಾಣಿ ಪರಿಗೀತಾನಿ ಸೂರಿಭಿಃ
ಬ್ರೂಹಿ ನಃ ಶ್ರದ್ದಧಾನಾನಾಂ ಲೀಲಯಾ ದಧತಃ ಕಲಾಃ ॥೧೭ ॥

ಅಥಾಖ್ಯಾಹಿ ಹರೇರ್ಧೀಮನ್ನವತಾರಕಥಾಃ ಶುಭಾಃ
ಲೀಲಾ ವಿದಧತಃ ಸ್ವೈರಮೀಶ್ವರಸ್ಯಾತ್ಮಮಾಯಯಾ ॥೧೮ ॥

ವಯಂ ತು ನ ವಿತೃಪ್ಯಾಮ ಉತ್ತಮಶ್ಲೋಕವಿಕ್ರಮೈಃ
ಯತ್ ಶೃಣ್ವತಾಂ ರಸಜ್ಞಾನಾಂ ಸ್ವಾದುಸ್ವಾದು ಪದೇಪದೇ ॥೧೯ ॥

ಕೃತವಾನ್ ಕಿಲ ವೀರ್ಯಾಣಿ ಸಹ ರಾಮೇಣ ಕೇಶವಃ
ಅತಿಮರ್ತ್ಯಾನಿ ಭಗವಾನ್ ಗೂಢಃ ಕಪಟಮಾನುಷಃ ॥೨೦ ॥

ಕಲಿಮಾಗತಮಾಜ್ಞಾಯ ಕ್ಷೇತ್ರೇಽಸ್ಮಿನ್ ವೈಷ್ಣವೇ ವಯಮ್
ಆಸೀನಾ ದೀರ್ಘಸತ್ರೇಣ ಕಥಾಯಾಂ ಸಕ್ಷಣಾ ಹರೇಃ ॥೨೧ ॥

ತ್ವಂ ನಃ ಸಂದರ್ಶಿತೋ ಧಾತ್ರಾ ದುಸ್ತರಂ ನಿಸ್ತಿತೀರ್ಷತಾಮ್
ಕಲಿಂ ಸತ್ತ್ವಹರಂ ಪುಂಸಾಂ ಕರ್ಣಧಾರ ಇವಾರ್ಣವಮ್ ॥೨೨ ॥

ಬ್ರೂಹಿ ಯೋಗೇಶ್ವರೇ ಕೃಷ್ಣೇ ಬ್ರಹ್ಮಣ್ಯೇ ಧರ್ಮಕರ್ಮಣಿ
ಸ್ವಾಂ ಕಾಷ್ಠಾಮಧುನೋಪೇತೇ ಧರ್ಮಃ ಕಂ ಶರಣಂ ಗತಃ ॥೨೩ ॥

॥ ಇತಿ ಶ್ರೀಮದ್ಭಾಗವತೇ ಮಹಾ ಪುರಾಣೇ ಪ್ರಥಮಸ್ಕಂಧೇ ಪ್ರಥಮೋಽಧ್ಯಾಯಃ॥
ಭಾಗವತ ಮಹಾ ಪುರಾಣದ ಮೊದಲ ಸ್ಕಂಧದ ಮೊದಲನೇ ಅಧ್ಯಾಯ ಮುಗಿಯಿತು.

*********

# ಅಥ ದ್ವಿತೀಯೋಧ್ಯಾಯಃ

ಇತಿ ಸಂಪ್ರಶ್ನಸಂಪೃಷ್ಟೋ ವಿಪ್ರಾಣಾಂ ರೌಮಹರ್ಷಣಿಃ ।
ಪ್ರತಿಪೂಜ್ಯ ವಚಸ್ತೇಷಾಂ ಪ್ರವಕ್ತುಮುಪಚಕ್ರಮೇ ॥೧॥

ಸೂತ ಉವಾಚ
ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ ದ್ವೈಪಾಯನೋ ವಿರಹಕಾತರ ಆಜುಹಾವ ।
ಪುತ್ರೇತಿ ತನ್ಮಯತಯಾ ತರವೋऽಭಿನೇದುಸ್ತಂ ಸರ್ವಭೂತಹೃದಯಂ ಮುನಿಮಾನತೋऽಸ್ಮಿ ॥೨॥

ಯಃ ಸ್ವಾನುಭಾವಮಖಿಲಶ್ರುತಿಸಾರಮೇಕಮಧ್ಯಾತ್ಮದೀಪಮತಿತೀರ್ಷತಾಂ ತಮೋऽನ್ಧಮ್ ।
ಸಂಸಾರಿಣಾಂ ಕರುಣಯಾऽऽಹ ಪುರಾಣಗುಹ್ಯಂ ತಂ ವ್ಯಾಸಸೂನುಮುಪಯಾಮಿ ಗುರುಂ ಮುನೀನಾಂ॥೩॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಗ್ರಂಥಮುದೀರಯೇ ॥೪॥

ಮುನಯಃ ಸಾಧು ಪೃಷ್ಟೋऽಹಂ ಭವದ್ಭಿರ್ಲೋಕಮಂಗಳಮ್ ।
ಯತ್ಕೃತಃ ಕೃಷ್ಣಸಂಪ್ರಶ್ನೋ ಯೇನಾತ್ಮಾऽऽಶು ಪ್ರಸೀದತಿ ॥೫॥

ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರಧೋಕ್ಷಜೇ ।
ಅಹೈತುಕ್ಯವ್ಯವಹಿತಾ ಯಯಾऽऽತ್ಮಾऽऽಶು ಪ್ರಸೀದತಿ ॥೬॥

ವಾಸುದೇವೇ ಭಗವತಿ ಭಕ್ತಿಯೋಗಃ ಪ್ರಯೋಜಿತಃ ।
ಜನಯತ್ಯಾಶು ವೈರಾಗ್ಯಂ ಜ್ಞಾನಂ ಚ ಯದಹೈತುಕಮ್ ॥೭॥

ಧರ್ಮಃ ಸ್ವನುಷ್ಠಿತಃ ಪುಂಸಾಂ ವಿಷ್ವಕ್ಸೇನಕಥಾಶ್ರಯಾಮ್ ।
ನೋತ್ಪಾದಯೇದ್ ಯದಿ ರತಿಂ ಶ್ರಮ ಏವ ಹಿ ಕೇವಲಮ್ ॥೮॥

ಧರ್ಮಸ್ಯ ಹ್ಯಾಪವರ್ಗ್ಯಸ್ಯ ನಾರ್ಥೋऽರ್ಥಾಯೇಹ ಕಲ್ಪತೇ ।
ನಾರ್ಥಸ್ಯ ಧರ್ಮೈಕಾಂತಸ್ಯ ಕಾಮೋ ಲಾಭಾಯ ಹಿ ಸ್ಮೃತಃ ॥೯॥

ಕಾಮಸ್ಯ ನೇಂದ್ರಿಯಪ್ರೀತಿರ್ಲಾಭೋ ಜೀವತಿ ಯಾವತಾ ।
ಜೀವಸ್ಯಾತತ್ತ್ವಜಿಜ್ಞಾಸೋಽಸೋರ್ನಾರ್ಥೋ ಯಶ್ಚೇಹ ಕರ್ಮಭಿಃ ॥೧೦॥

ವದಂತಿ ತತ್ ತತ್ತ್ವವಿದಸ್ತತ್ತ್ವಂ ಯಜ್ಜ್ಞಾನಮದ್ವಯಮ್ ।
ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥೧೧॥

ಸತ್ತಾಮಾತ್ರಂ ತು ಯತ್ಕಿಂಚಿತ್ ಸದಸಚ್ಚಾವಿಶೇಷಣಮ್
ಉಭಾಭ್ಯಾಂ ಭಾಷ್ಯತೇ ಸಾಕ್ಷಾದ್ ಭಗವಾನ್ ಕೇವಲಃ ಸ್ಮೃತಃ ॥೧೨॥

ತಚ್ಛ್ರದ್ದಧಾನಾ ಮುನಯೋ ಜ್ಞಾನವೈರಾಗ್ಯಯುಕ್ತಯಾ ।
ಪಶ್ಯಂತ್ಯಾತ್ಮನಿ ಚಾತ್ಮಾನಂ ಭಕ್ತ್ಯಾ ಶ್ರುತಿಗೃಹೀತಯಾ ॥೧೩॥

ಅತಃ ಪುಂಭಿರ್ದ್ವಿಜಶ್ರೇಷ್ಠಾ ವರ್ಣಾಶ್ರಮವಿಭಾಗಶಃ ।
ಸ್ವನಿಷ್ಠಿತಸ್ಯ ಧರ್ಮಸ್ಯ ಸಂಸಿದ್ಧಿರ್ಹರಿತೋಷಣಮ್ ॥೧೪॥

ತಸ್ಮಾದೇಕೇನ ಮನಸಾ ಭಗವಾನ್ ಸಾತ್ವತಾಂ ಪತಿಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಧ್ಯೇಯಃ ಪೂಜ್ಯಶ್ಚ ನಿತ್ಯದಾ ॥೧೫॥

ಯದನುಧ್ಯಾಯಿನೋ ಯುಕ್ತಾಃ ಕರ್ಮಗ್ರಂಥಿನಿಬಂಧನಮ್ ।
ಛಿಂದಂತಿ ಕೋವಿದಾಸ್ತಸ್ಯ ಕೋ ನ ಕುರ್ಯಾತ್ಕಥಾರತಿಮ್ ॥೧೬॥

ಶುಶ್ರೂಷೋಃ ಶ್ರದ್ದಧಾನಸ್ಯ ವಾಸುದೇವಕಥಾರತಿಃ ।
ಸ್ಯಾನ್ಮಹತ್ಸೇವಯಾ ವಿಪ್ರಾಃ ಪುಣ್ಯತೀರ್ಥನಿಷೇವಣಾತ್ ॥೧೭॥

ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ ।
ಹೃದ್ಯಂತಃಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ॥೧೮॥

ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಾಗವತಸೇವಯಾ ।
ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ॥೧೯॥

ತದಾ ರಜಸ್ತಮೋಭಾವಾಃ ಕಾಮಲೋಭಾದಯಶ್ಚ ಯೇ ।
ಚೇತ ಏತೈರನಾವಿದ್ಧಂ ಸ್ಥಿತಂ ಸತ್ತ್ವೇ ಪ್ರಸೀದತಿ ॥೨೦॥

ಏವಂ ಪ್ರಸನ್ನಮನಸೋ ಭಗವದ್ಭಕ್ತಿಯೋಗತಃ ।
ಭಗವತ್ತತ್ತ್ವವಿಜ್ಞಾನಂ ಮುಕ್ತಸಂಗಸ್ಯ ಜಾಯತೇ ॥೨೧॥

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ॥೨೨॥

ಅತೋ ವೈ ಕವಯೋ ನಿತ್ಯಂ ಭಕ್ತಿಂ ಪರಮಯಾ ಮುದಾ ।
ವಾಸುದೇವೇ ಭಗವತಿ ಕುರ್ವಂತ್ಯಾತ್ಮಪ್ರಸಾದನೀಮ್ ॥೨೩॥

ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಸ್ತೈರ್ಯುಕ್ತಃ ಪರಃ ಪುರುಷ ಏಕ ಇಹಾಸ್ಯ ಧತ್ತೇ ।
ಸ್ಥಿತ್ಯಾದಯೇ ಹರಿವಿರಿಂಚಿಹರೇತಿ ಸಂಜ್ಞಾಃ ಶ್ರೇಯಾಂಸಿ ತತ್ರ ಖಲು ಸತ್ತ್ವತನೌ ನೃಣಾಂ ಸ್ಯುಃ ॥೨೪॥

ಪಾರ್ಥಿವಾದ್ ದಾರುಣೋ ಧೂಮಸ್ತಸ್ಮಾದಗ್ನಿಸ್ತ್ರಯೀಮಯಃ ।
ತಮಸಸ್ತು ರಜಸ್ತಸ್ಮಾತ್ ಸತ್ತ್ವಂ ಯದ್ ಬ್ರಹ್ಮದರ್ಶನಮ್ ॥೨೫॥

ಭೇಜಿರೇ ಮುನಯೋಽಥಾಗ್ರೇ ಭಗವಂತಮಧೋಕ್ಷಜಮ್ ।
ಸತ್ತ್ವಂ ವಿಶುದ್ಧಂ ಕ್ಷೇಮಾಯ ಕಲ್ಪತೇ ನೇತರಾವಿಹ ॥೨೬॥

ಮುಮುಕ್ಷವೋ ಘೋರರೂಪಾನ್ ಹಿತ್ವಾ ಭೂತಪತೀನಥ ।
ವಾಸುದೇವಕಲಾಃ ಶಾಂತಾ ಭಜಂತಿ ಹ್ಯನಸೂಯವಃ ॥೨೭॥

ರಜಸ್ತಮಃಪ್ರಕೃತಯಃ ಸಮಶೀಲಾನ್ ಭಜಂತಿ ವೈ ।
ಪಿತೃಭೂತಪ್ರಜೇಶಾದೀನ್ ಶ್ರಿಯೈಶ್ವರ್ಯಪ್ರಜೇಪ್ಸವಃ ॥೨೮॥

ವಾಸುದೇವಪರಾ ವೇದಾ ವಾಸುದೇವಪರಾ ಮಖಾಃ ।
ವಾಸುದೇವಪರಾ ಯೋಗಾ ವಾಸುದೇವಪರಾಃ ಕ್ರಿಯಾಃ ॥೨೯॥

ವಾಸುದೇವಪರಂ ಜ್ಞಾನಂ ವಾಸುದೇವಪರಂ ತಪಃ ।
ವಾಸುದೇವಪರೋ ಧರ್ಮೋ ವಾಸುದೇವಪರಾ ಗತಿಃ ॥೩೦॥

ಸ ಏವೇದಂ ಸಸರ್ಜಾಗ್ರೇ ಭಗವಾನಾತ್ಮಮಾಯಯಾ ।
ಸದಸದ್ರೂಪಯಾ ಚಾಸೌ ಗುಣಮಯ್ಯಾಽಗುಣೋ ವಿಭುಃ ॥೩೦॥

ತಯಾ ವಿಲಸಿತೇಷ್ವೇಷು ಗುಣೇಷು ಗುಣವಾನಿವ ।
ಅಂತಃಪ್ರವಿಷ್ಟ ಆಭಾತಿ ವಿಜ್ಞಾನೇನ ವಿಜೃಂಭಿತಃ ॥೩೨॥

ಯಥಾ ವ್ಯವಹಿತೋ ವಹ್ನಿರ್ದಾರುಷ್ವೇಕಃ ಸ್ವಯೋನಿಷು ।
ನಾನೇವ ಭಾತಿ ವಿಶ್ವಾತ್ಮಾ ಭೂತೇಷು ಚ ತಥಾ ಪುಮಾನ್ ॥೩೨॥

ಅಸೌ ಗುಣಮಯೈರ್ಭಾವೈರ್ಭೂತಸೂಕ್ಷ್ಮೇಂದ್ರಿಯಾತ್ಮಭಿಃ ।
ಸ್ವನಿರ್ಮಿತೇಷು ನಿರ್ವಿಷ್ಟೋ ಭುಂಕ್ತೇ ಭೂತೇಷು ತದ್ಗುಣಾನ್ ॥೩೪॥

ಭಾವಯನ್ನೇಷ ಸತ್ತ್ವೇನ ಲೋಕಾನ್ ವೈ ಲೋಕಭಾವನಃ ।
ಲೀಲಾವತಾರಾನು ಗತಸ್ತಿರ್ಯಙ್ನರಸುರಾದಿಷು ॥೩೫॥

॥ ಇತಿ ಶ್ರೀಮದ್ಭಾಗವತೇ ಮಹಾ ಪುರಾಣೇ ಪ್ರಥಮಸ್ಕಂಧೇ ದ್ವಿತಿಯೋಧ್ಯಾಯಃ॥
ಭಾಗವತ ಮಹಾ ಪುರಾಣದ ಮೊದಲ ಸ್ಕಂಧದ ಎರಡನೇ ಅಧ್ಯಾಯ ಮುಗಿಯಿತು.

*********

# ಅಥ ತೃತೀಯೋಽಧ್ಯಾಯಃ

ಸೂತ ಉವಾಚ:

ಜಗೃಹೇ ಪೌರುಷಂ ರೂಪಂ ಭಗವಾನ್ಮಹದಾದಿಭಿಃ ।
ಸಂಭೂತಂ ಷೋಡಶಕಲಮಾದೌ ಲೋಕಸಿಸೃಕ್ಷಯಾ ॥೧॥

ಯಸ್ಯಾಂಭಸಿ ಶಯಾನಸ್ಯ ಯೋಗನಿದ್ರಾಂ ವಿತನ್ವತಃ ।
ನಾಭಿಹ್ರದಾಂಬುಜಾದಾಸೀದ್ಬ್ರಹ್ಮಾ ವಿಶ್ವಸೃಜಾಂ ಪತಿಃ ॥೨॥

ಯಸ್ಯಾವಯವಸಂಸ್ಥಾನೈಃ ಕಲ್ಪಿತೋ ಲೋಕವಿಸ್ತರಃ ।
ತದ್ವೈ ಭಗವತೋ ರೂಪಂ ವಿಶುದ್ಧಂ ಸತ್ತ್ವಮೂರ್ಜಿತಮ್ ॥೩॥

ಪಶ್ಯಂತ್ಯದೋ ರೂಪಮದಭ್ರಚಕ್ಷುಷಃ ಸಹಸ್ರಪಾದೋರುಭುಜಾನನಾದ್ಭುತಮ್ ।
ಸಹಸ್ರಮೂರ್ಧಶ್ರವಣಾಕ್ಷಿನಾಸಿಕಂ ಸಹಸ್ರಮೌಳ್ಯಂಬರಕುಂಡಲೋಲ್ಲಸತ್ ॥೪॥

ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಮ್ ।
ಯಸ್ಯಾಂಶಾಂಶೇನ ಸೃಜ್ಯಂತೇ ದೇವತಿರ್ಯಙ್ನರಾದಯಃ ॥೫॥

ಸ ಏವ ಪ್ರಥಮಂ ದೇವಃ ಕೌಮಾರಂ ಸರ್ಗಮಾಸ್ಥಿತಃ ।
ಚಚಾರ ದುಶ್ಚರಂ ಬ್ರಹ್ಮಾ ಬ್ರಹ್ಮಚರ್ಯಮಖಂಡಿತಮ್ ॥೬॥

ದ್ವಿತೀಯಂ ತು ಭವಾಯಾಸ್ಯ ರಸಾತಳಗತಾಂ ಮಹೀಮ್ ।
ಉದ್ಧರಿಷ್ಯನ್ನುಪಾದತ್ತ ಯಜ್ಞೇಶಃ ಸೌಕರಂ ವಪುಃ ॥೭॥

ತೃತೀಯಮೃಷಿಸರ್ಗಂ ವೈ ದೇವರ್ಷಿತ್ವಮುಪೇತ್ಯ ಸಃ ।
ತಂತ್ರಂ ಸಾತ್ವತಮಾಚಷ್ಟ ನೈಷ್ಕರ್ಮ್ಯಂ ಕರ್ಮಣಾಂ ಯತಃ ॥೮॥

ತುರ್ಯೇ ಧರ್ಮಕಲಾಸರ್ಗೇ ನರನಾರಾಯಣಾವೃಷೀ ।
ಭೂತ್ವಾಽಽತ್ಮೋಪಶಮೋಪೇತಮಕರೋದ್ದುಶ್ಚರಂ ತಪಃ ॥೯॥

ಪಂಚಮಃ ಕಪಿಲೋ ನಾಮ ಸಿದ್ಧೇಶಃ ಕಾಲವಿಪ್ಲುತಮ್ ।
ಪ್ರೋವಾಚಾಸುರಯೇ ಸಾಂಖ್ಯಂ ತತ್ತ್ವಗ್ರಾಮವಿನಿರ್ಣಯಮ್ ॥೧೦॥

ಷಷ್ಠಮತ್ರೇರಪತ್ಯತ್ವಂ ವೃತಃ ಪ್ರಾಪ್ತೋಽನಸೂಯಯಾ ।
ಆನ್ವೀಕ್ಷಿಕೀಮಳರ್ಕಾಯ ಪ್ರಹ್ಲಾದಾದಿಭ್ಯ ಊಚಿವಾನ್ ॥೧೧॥

ತತಃ ಸಪ್ತಮ ಆಕೂತ್ಯಾಂ ರುಚೇರ್ಯಜ್ಞೋಽಭ್ಯಜಾಯತ ।
ಸ ಯಾಮಾದ್ಯೈಃ ಸುರಗಣೈರಪಾತ್ ಸ್ವಾಯಂಭುವಾಂತರಮ್ ॥೧೨॥

ಅಷ್ಟಮೋ ಮೇರುದೇವ್ಯಾಂ ತು ನಾಭೇರ್ಜಾತ ಉರುಕ್ರಮಃ ।
ದರ್ಶಯನ್ ವರ್ತ್ಮ ಧೀರಾಣಾಂ ಸರ್ವಾಶ್ರಮನಮಸ್ಕೃತಮ್ ॥೧೩॥

ಋಷಿಭಿರ್ಯಾಚಿತೋ ಭೇಜೇ ನವಮಂ ಪಾರ್ಥಿವಂ ವಪುಃ ।
ದುಗ್ಧೇಮಾನೋಷಧೀರ್ವಿಪ್ರಾಸ್ತೇನಾಯಂ ಚ ಉಶತ್ತಮಃ ॥೧೪॥

ರೂಪಂ ಸ ಜಗೃಹೇ ಮಾತ್ಸ್ಯಂ ಚಾಕ್ಷುಷಾಂತರಸಂಪ್ಲವೇ ।
ನಾವ್ಯಾರೋಪ್ಯ ಮಹೀಮಯ್ಯಾಮಪಾದ್ ವೈವಸ್ವತಂ ಮನುಮ್ ॥೧೫॥

ಸುರಾಸುರಾಣಾಮುದಧಿಂ ಮಥ್ನತಾಂ ಮಂದರಾಚಲಮ್ ।
ದಧ್ರೇ ಕಮಠರೂಪೇಣ ಪೃಷ್ಠ ಏಕಾದಶಂ ವಿಭುಃ ॥೧೬॥

ಧಾನ್ವಂತರಂ ದ್ವಾದಶಮಂ ತ್ರಯೋದಶಮಮೇವ ಚ ।
ಅಪಾಯಯತ್ ಸುಧಾಮನ್ಯಾನ್ ಮೋಹಿನ್ಯಾ ಮೋಹಯನ್ ಸ್ತ್ರೀಯಾ ॥೧೭॥

ಚತುರ್ದಶಂ ನಾರಸಿಂಹಂ ಬಿಭ್ರದ್ ದೈತ್ಯೇಂದ್ರಮೂರ್ಜಿತಮ್ ।
ದದಾರ ಕರಜೈರೂರಾವೇರಕಾನ್ ಕಟಕೃದ್ ಯಥಾ ॥೧೮॥

ಪಂಚದಶಂ ವಾಮನಕಂ ಕೃತ್ವಾಽಗಾದಧ್ವರಂ ಬಲೇಃ ।
ಪದತ್ರಯಂ ಯಾಚಮಾನಃ ಪ್ರತ್ಯಾದಿತ್ಸುಸ್ತ್ರಿಪಿಷ್ಟಪಮ್ ॥೧೯॥

ಅವತಾರೇ ಷೋಡಶಮೇ ಯಚ್ಛನ್ ಬ್ರಹ್ಮದ್ರುಹೋ ನೃಪಾನ್ ।
ತ್ರಿಃಸಪ್ತಕೃತ್ವಃ ಕುಪಿತೋ ನಿಃಕ್ಷತ್ರಾಮಕರೋನ್ಮಹೀಮ್ ॥೨೦॥

ತತಃ ಸಪ್ತದಶೇ ಜಾತಃ ಸತ್ಯವತ್ಯಾಂ ಪರಾಶರಾತ್ ।
ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ ॥೨೧॥

ನರದೇವತ್ವಮಾಪನ್ನಃ ಸುರಕಾರ್ಯಚಿಕೀರ್ಷಯಾ ।
ಸಮುದ್ರನಿಗ್ರಹಾದೀನಿ ಚಕ್ರೇ ವೀರ್ಯಾಣ್ಯತಃ ಪರಮ್ ॥೨೨॥

ಏಕೋನವಿಂಶೇ ವಿಂಶತಿಮೇ ವೃಷ್ಣಿಷು ಪ್ರಾಪ್ಯ ಜನ್ಮನೀ ।
ರಾಮಕೃಷ್ಣಾವಿತಿ ಭುವೋ ಭಗವಾನಹರದ್ ಭರಮ್ ॥೨೩॥

ತತಃ ಕಲೌ ಸಂಪ್ರವೃತ್ತೇ ಸಮ್ಮೋಹಾಯ ಸುರದ್ವಿಷಾಮ್ ।
ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ ॥೨೪॥

ಅಥಾಸೌ ಯುಗಸಂಧ್ಯಾಯಾಂ ದಸ್ಯುಪ್ರಾಯೇಷು ರಾಜಸು ।
ಜನಿತಾ ವಿಷ್ಣುಯಶಸೋ ನಾಮ್ನಾ ಕಲ್ಕೀ ಜಗತ್ಪತಿಃ ॥೨೫॥

ಅವತಾರಾ ಹ್ಯಸಂಖ್ಯೇಯಾ ಹರೇಃ ಸತ್ತ್ವನಿಧೇರ್ದ್ವಿಜಾಃ ।
ಯಥಾ ವಿದಾಸಿನಃ ಕುಲ್ಯಾಃ ಸರಸಃ ಸ್ಯುಃ ಸಹಸ್ರಶಃ ॥೨೬॥

ಋಷಯೋ ಮನವೋ ದೇವಾ ಮನುಪುತ್ರಾ ಮಹೌಜಸಃ ।
ಕಲಾಃ ಸರ್ವೇ ಹರೇರೇವ ಸಪ್ರಜಾಪತಯಃ ಸ್ಮೃತಾಃ ॥೨೭॥

ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ ।
ಇಂದ್ರಾರಿವ್ಯಾಕುಲಂ ಲೋಕಂ ಮೃಡಯಂತಿ ಯುಗೇ ಯುಗೇ ॥೨೮॥

ಜನ್ಮ ಗುಹ್ಯಂ ಭಗವತೋ ಯ ಏವಂ ಪ್ರಯತೋ ನರಃ ।
ಸಾಯಂ ಪ್ರಾತರ್ಗೃಣನ್ ಭಕ್ತ್ಯಾ ದುಃಖಗ್ರಾಮಾದ್ ವಿಮುಚ್ಯತೇ ॥೨೯॥

ಏತದ್ರೂಪಂ ಭಗವತೋ ಹ್ಯರೂಪಸ್ಯ ಚಿದಾತ್ಮನಃ ।
ಮಾಯಾಗುಣೈರ್ವಿರಚಿತಂ ಮಹದಾದಿಭಿರಾತ್ಮನಿ ॥೩೦॥

ಯಥಾ ನಭಸಿ ಮೇಘೌಘೋ ರೇಣುರ್ವಾ ಪಾರ್ಥಿವೋಽನಿಲೇ ।
ಏವಂ ದ್ರಷ್ಟರಿ ದೃಶ್ಯತ್ವಮಾರೋಪಿತಮಬುದ್ಧಿಭಿಃ ॥೩೧॥

ಅತಃ ಪರಂ ಯದವ್ಯಕ್ತಮವ್ಯೂಢಗುಣಬೃಂಹಿತಮ್ ।
ಅದೃಷ್ಟಾಶ್ರುತವಸ್ತುತ್ವಾತ್ ಸ ಜೀವೋ ಯಃ ಪುನರ್ಭವಃ ॥೩೨॥

ಯತ್ರೇಮೇ ಸದಸದ್ರೂಪೇ ಪ್ರತಿಷಿದ್ಧೇ ಸ್ವಸಂವಿದಾ ।
ಅವಿದ್ಯಯಾऽऽತ್ಮನಿ ಕೃತೇ ಇತಿ ತದ್ ಬ್ರಹ್ಮದರ್ಶನಮ್ ॥೩೩॥

ಯದ್ಯೇಷೋಪರತಾ ದೇವೀ ಮಾಯಾ ವೈಶಾರದೀ ಮತಿಃ ।
ಸಂಪನ್ನ ಏವೇತಿ ವಿದುರ್ಮಹಿಮ್ನಿ ಸ್ವೇ ಮಹೀಯತೇ ॥೩೪॥

ಏವಂ ಚ ಜನ್ಮಾನಿ ಕರ್ಮಾಣಿ ಹ್ಯಕರ್ತುರಜನಸ್ಯ ಚ ।
ವರ್ಣಯಂತಿ ಸ್ಮ ಕವಯೋ ವೇದಗುಹ್ಯಾನಿ ಹೃತ್ಪತೇಃ ॥೩೫॥

ಸ ವಾ ಇದಂ ವಿಶ್ವಮಮೋಘಲೀಲಃ ಸೃಜತ್ಯವತ್ಯತ್ತಿ ನ ಸಜ್ಜತೇऽಸ್ಮಿನ್ ।
ಭೂತೇಷು ಚಾಂತರ್ಹಿತ ಆತ್ಮತಂತ್ರಃ ಷಾಡ್ವರ್ಗಿಕಂ ಜಿಘ್ರತಿ ಷಡ್ಗುಣೇಶಃ ॥೩೬॥

ನ ಚಾಸ್ಯ ಕಶ್ಚಿನ್ನಿಪುಣಂ ವಿಧಾತುರವೈತಿ ಜಂತುಃ ಕುಮನೀಷ ಊತಿಮ್ ।
ನಾಮಾನಿ ರೂಪಾಣಿ ಮನೋವಚೋಭಿಃ ಸಂತನ್ವತೋ ನಟಚರ್ಯಾಮಿವಾಜ್ಞಃ ॥೩೭॥

ಸ ವೇದ ಧಾತುಃ ಪದವೀಂ ಪರಸ್ಯ ದುರಂತವೀರ್ಯಸ್ಯ ರಥಾಂಗಪಾಣೇಃ ।
ಯೋऽಮಾಯಯಾ ಸಂತತಯಾऽನುವೃತ್ತ್ಯಾ ಭಜೇತ ತತ್ಪಾದಸರೋಜಗಂಧಮ್ ॥೩೮॥

ಅಥೇಹ ಧನ್ಯಾ ಭಗವಂತ ಇತ್ಥಂ ಯದ್ವಾಸುದೇವೇऽಖಿಲಲೋಕನಾಥೇ ।
ಕುರ್ವಂತಿ ಸರ್ವಾತ್ಮಕಮಾತ್ಮಭಾವಂ ನ ಯತ್ರ ಭೂಯಃ ಪರಿವರ್ತ ಉಗ್ರಃ ॥೩೯॥

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।
ಉತ್ತಮಶ್ಲೋಕಚರಿತಂ ಚಕಾರ ಭಗವಾನೃಷಿಃ ॥೪೦॥

ನಿಃಶ್ರೇಯಸಾಯ ಲೋಕಸ್ಯ ಧನ್ಯಂ ಸ್ವಸ್ತ್ಯಯನಂ ಮಹತ್ ।
ತದಿದಂ ಗ್ರಾಹಯಾಮಾಸ ಸುತಮಾತ್ಮವತಾಂ ವರಮ್ ॥೪೧॥

ಸರ್ವವೇದೇತಿಹಾಸಾನಾಂ ಸಾರಂಸಾರಂ ಸಮುದ್ಧೃತಮ್ ।
ಸ ತು ಸಂಶ್ರಾವಯಾಮಾಸಮಹಾರಾಜಂ ಪರೀಕ್ಷಿತಮ್ ॥೪೨॥

ಪ್ರಾಯೋಪವಿಷ್ಟಂ ಗಂಗಾಯಾಂ ಪರೀತಂ ಪರಮರ್ಷಿಭಿಃ ।
ತಸ್ಯ ಕೀರ್ತಯತೋ ವಿಪ್ರಾ ರಾಜರ್ಷೇರ್ಭೂರಿತೇಜಸಃ ॥೪೩॥

ಅಹಂ ಚಾಧ್ಯಗಮಂ ತತ್ರ ನಿವಿಷ್ಟಸ್ತದನುಗ್ರಹಾತ್ ।
ಸೋಽಹಂ ವಃ ಶ್ರಾವಯಿಷ್ಯಾಮಿ ಯಥಾಧೀತಂ ಯಥಾಮತಿ ॥೪೪॥

ಕೃಷ್ಣೇ ಸ್ವಧಾಮೋಪಗತೇ ಧರ್ಮಜ್ಞಾನಾದಿಭಿಃ ಸಹ ।
ಕಲೌ ನಷ್ಟದೃಶಾಂ ಪುಂಸಾಂ ಪುರಾಣಾರ್ಕೋಽಮುನೋದಿತಃ ॥೪೫॥

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ತೃತೀಯೋಽಧ್ಯಾಯಃ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಮೂರನೇ ಅಧ್ಯಾಯ ಮುಗಿಯಿತು.

*********

# ಅಥ ಚತುರ್ಥೋಽಧ್ಯಾಯಃ

ವ್ಯಾಸ ಉವಾಚ
ಇತಿ ಬ್ರುವಾಣಂ ಸಂಸ್ತೂಯ ಮುನೀನಾಂ ದೀರ್ಘಸತ್ರಿಣಾಮ್ ।
ವೃದ್ಧಃ ಕುಲಪತಿಃ ಸೂತಂ ಬಹ್ವೃಚಃ ಶೌನಕೋಽಬ್ರವೀತ್ ॥೧॥

ಶೌನಕ ಉವಾಚ
ಸೂತ ಸೂತ ಮಹಾಭಾಗ ವದ ನೋ ವದತಾಂ ವರ ।
ಕಥಾಂ ಭಾಗವತೀಂ ಪುಣ್ಯಾಂ ಯಾಮಾಹ ಭಗವಾನ್ ಶುಕಃ ॥೨॥

ಕಸ್ಮಿನ್ ಯುಗೇ ಪ್ರವೃತ್ತೇಯಂ ಸ್ಥಾನೇ ವಾ ಕೇನ ಹೇತುನಾ ।
ಕುತಃ ಸಂಚೋದಿತಃ ಕೃಷ್ಣಃ ಕೃತವಾನ್ ಸಂಹಿತಾಂ ಮುನಿಃ ॥೩॥

ತಸ್ಯ ಪುತ್ರೋ ಮಹಾಯೋಗೀ ಸಮದೃಙ್ ನಿರ್ವಿಕಲ್ಪಕಃ ।
ಏಕಾಂತಗತಿರುನ್ನಿದ್ರೋ ಗೂಢೋ ಮೂಢ ಇವೇಯತೇ ॥೪॥

ಕಥಮಾಲಕ್ಷಿತಃ ಪೌರೈಃ ಸಂಪ್ರಾಪ್ತಃ ಕುರುಜಾಂಗಲಮ್ ।
ಉನ್ಮತ್ತಮೂಕಜಡವದ್ ವಿಚರನ್ ಗಜಸಾಹ್ವಯೇ ॥೫॥

ಕಥಂ ವಾ ಪಾಂಡವೇಯಸ್ಯ ರಾಜರ್ಷೇರ್ಮುನಿನಾ ಸಹ ।
ಸಂವಾದಃ ಸಮಭೂತ್ ತಾತ ಯತ್ರೈಷಾ ಸಾತ್ವತೀ ಶ್ರುತಿಃ ॥೬॥

ಸ ಗೋದೋಹನಮಾತ್ರಂ ಹಿ ಗೃಹೇಷು ಗೃಹಮೇಧಿನಾಮ್ ।
ಅವೇಕ್ಷತೇ ಮಹಾಭಾಗಸ್ತೀರ್ಥೀಕುರ್ವಂಸ್ತದಾಶ್ರಮಮ್ ॥೭॥

ಅಭಿಮನ್ಯುಸುತಂ ಸೂತ ಪ್ರಾಹುರ್ಭಾಗವತೋತ್ತಮಮ್ ।
ತಸ್ಯ ಜನ್ಮ ಮಹಾಶ್ಚರ್ಯಂ ಕರ್ಮಾಣಿ ಚ ಗೃಣೀಹಿ ನಃ ॥೮॥

ಸ ಸಮ್ರಾಟ್ ಕಸ್ಯ ವಾ ಹೇತೋಃ ಪಾಂಡೂನಾಂ ಮಾನವರ್ಧನಃ ।
ಪ್ರಾಯೋಪವಿಷ್ಟೋ ಗಂಗಾಯಾಮನಾದೃತ್ಯಾಧಿರಾಟ್ ಶ್ರಿಯಮ್ ॥೯॥

ನಮಂತಿ ಯತ್ಪಾದನಿಕೇತಮಾತ್ಮನಃ ಶಿವಾಯ ಚಾನೀಯ ಧನಾನಿ ಶತ್ರವಃ ।
ಕಥಂ ಸ ಧೀರಃ ಶ್ರಿಯಮಂಗ ದುಸ್ತ್ಯಜಾಮಿಯೇಷ ಚೋತ್ ಸ್ರಷ್ಟುಮಹೋ ಸಹಾಸುಭಿಃ ॥೧೦॥

ಶಿವಾಯ ಲೋಕಸ್ಯ ಭವಾಯ ಭೂತಯೇ ಯ ಉತ್ತಮಶ್ಲೋಕಪರಾಯಣಾ ಜನಾಃ ।
ಜೀವಂತಿ ನಾತ್ಮಾರ್ಥಮಸೌ ಪರಾಂ ಶ್ರಿಯಂ ಮುಮೋಚ ನಿರ್ವಿದ್ಯ ಕುತಃ ಕಳೇಬರಮ್ ॥೧೧॥

ತತ್ಸರ್ವಂ ನಃ ಸಮಾಚಕ್ಷ್ವ ಪೃಷ್ಟೋ ಯದಿಹ ಕಿಂಚನ ।
ಮನ್ಯೇ ತ್ವಾಂ ವಿಷಯೇ ವಾಚಾಂ ಸ್ನಾತಮನ್ಯತ್ರ ಛಾಂದಸಾತ್ ॥೧೨॥

ಸೂತ ಉವಾಚ
ದ್ವಾಪರೇ ಸಮನುಪ್ರಾಪ್ತೇ ತೃತೀಯೇ ಯುಗಪರ್ಯಯೇ ।
ಜಾತಃ ಪರಾಶರಾದ್ ಯೋಗೀ ವಾಸವ್ಯಾಂ ಕಲಯಾ ಹರೇಃ ॥೧೩॥

ಸ ಕದಾಚಿತ್ ಸರಸ್ವತ್ಯಾ ಉಪಸ್ಪೃಶ್ಯ ಜಲಂ ಶುಚಿಃ ।
ವಿವಿಕ್ತ ಏಕ ಆಸೀನ ಉದಿತೇ ರವಿಮಂಡಲೇ ॥೧೪॥

ಪರಾವರಜ್ಞಃ ಸ ಋಷಿಃ ಕಾಲೇನಾವ್ಯಕ್ತರಂಹಸಾ ।
ಯುಗಧರ್ಮವ್ಯತಿಕರಂ ಪ್ರಾಪ್ತಂ ಭುವಿ ಯುಗೇ ಯುಗೇ ॥೧೫॥

ಭೌತಿಕಾನಾಂ ಚ ಭಾವಾನಾಂ ಶಕ್ತಿಹ್ರಾಸಂ ಚ ತತ್ಕೃತಮ್ ।
ಅಶ್ರದ್ದಧಾನಾನ್ ನಿಃಸತ್ತ್ವಾನ್ ದುರ್ಮೇಧಾನ್ ಹ್ರಸಿತಾಯುಷಃ ॥೧೬॥

ದುರ್ಭಗಾಂಶ್ಚ ಜನಾನ್ ವೀಕ್ಷ್ಯ ಮುನಿರ್ದಿವ್ಯೇನ ಚಕ್ಷುಷಾ ।
ಸರ್ವವರ್ಣಾಶ್ರಮಾಣಾಂ ಯದ್ದಧ್ಯೌ ಹಿತಮಮೋಘದೃಕ್ ॥೧೭॥

ಚಾತುರ್ಹೋತ್ರಂ ಕರ್ಮ ಶುದ್ಧಂ ಪ್ರಜಾನಾಂ ವೀಕ್ಷ್ಯ ವೈದಿಕಮ್ ।
ವ್ಯದಧಾದ್ ಯಜ್ಞಸಂತತ್ಯೈ ವೇದಮೇಕಂ ಚತುರ್ವಿಧಮ್ ॥೧೮॥

ಋಗ್ಯಜುಃಸಾಮಾಥರ್ವಾಖ್ಯಾ ವೇದಾಶ್ಚತ್ವಾರ ಉದ್ಧೃತಾಃ ।
ಇತಿಹಾಸಪುರಾಣಂ ಚ ಪಂಚಮೋ ವೇದ ಉಚ್ಯತೇ ॥೧೯॥

ತತ್ರರ್ಗ್ವೇದಧರಃ ಪೈಲಃ ಸಾಮಗೋ ಜೈಮಿನಿಃ ಕವಿಃ ।
ವೈಶಂಪಾಯನ ಏವೈಕೋ ನಿಷ್ಣಾತೋ ಯಜುಷಾಂ ತತಃ ॥೨೦॥

ಅಥರ್ವಾಂಗಿರಸಾಮಾಸೀತ್ ಸುಮಂತುರ್ದಾರುಣೋ ಮುನಿಃ ।
ಇತಿಹಾಸಪುರಾಣಾನಾಂ ಪಿತಾ ಮೇ ರೋಮಹರ್ಷಣಃ ॥೨೧॥

ತ ಏವ ಋಷಯೋ ವೇದಂ ಸ್ವಂಸ್ವಂ ವ್ಯಸ್ಯನ್ನನೇಕಧಾ ।
ಶಿಷ್ಯೈಃ ಪ್ರಶಿಷ್ಯೈಸ್ತಚ್ಛಿಷ್ಯೈರ್ವೇದಾಸ್ತೇ ಶಾಖಿನೋಽಭವನ್ ॥೨೨॥

ತ ಏವ ವೇದಾ ದುರ್ಮೇಧೈರ್ಧಾರ್ಯಂತೇ ಪುರುಷೈರ್ಯಥಾ ।
ಏವಂ ಚಕಾರ ಭಗವಾನ್ ವ್ಯಾಸಃ ಕೃಪಣವತ್ಸಲಃ ॥೨೩॥

ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥೨೪॥

ಏವಂ ಪ್ರವೃತ್ತಸ್ಯ ಸದಾ ಭೂತಾನಾಂ ಶ್ರೇಯಸಿ ದ್ವಿಜಾಃ ।
ಸರ್ವಾತ್ಮಕೇನಾಪಿ ಯದಾ ನಾತುಷ್ಯದ್ ಹೃದಯಂ ತತಃ ॥೨೫॥

ನಾತಿಪ್ರಸನ್ನ ಹೃದಯಃ ಸರಸ್ವತ್ಯಾಸ್ತಟೇ ಶುಚೌ ।
ವಿತರ್ಕಯನ್ ವಿವಿಕ್ತಸ್ಥ ಇದಂ ಚೋವಾಚ ಧರ್ಮವಿತ್ ॥೨೬॥

ಧೃತವ್ರತೇನ ಹಿ ಮಯಾ ಛಂದಾಂಸಿ ಗುರವೋಽಗ್ನಯಃ ।
ಮಾನಿತಾ ನಿರ್ವ್ಯಳೀಕೇನ ಗೃಹೀತಂ ಚಾನುಶಾಸನಮ್ ॥೨೭॥

ಭಾರತವ್ಯಪದೇಶೇನ ಹ್ಯಾಮ್ನಾಯಾರ್ಥಃ ಪ್ರದರ್ಶಿತಃ ।
ದೃಶ್ಯತೇ ಯತ್ರ ಧರ್ಮೋ ಹಿ ಸ್ತ್ರೀಶೂದ್ರಾದಿಭಿರಪ್ಯುತ ॥೨೮॥

ಅಥಾಪಿ ಬತ ಮೇ ದೈಹ್ಯೋ ಹ್ಯಾತ್ಮಾ ಚೈವಾತ್ಮನಾ ವಿಭುಃ ।
ಅಸಂಪನ್ನ ಇವಾಭಾತಿ ಬ್ರಹ್ಮವರ್ಚಸ್ವಿಸತ್ತಮಃ ॥೨೯॥

ಕಿಂ ವಾ ಭಾಗವತಾ ಧರ್ಮಾ ನ ಪ್ರಾಯೇಣ ನಿರೂಪಿತಾಃ ।
ಪ್ರಿಯಾಃ ಪರಮಹಂಸಾನಾಂ ತ ಏವ ಹ್ಯಚ್ಯುತಪ್ರಿಯಾಃ ॥೩೦॥

ತಸ್ಯೈವಂ ಖಿಲಮಾತ್ಮಾನಂ ಮನ್ಯಮಾನಸ್ಯ ಖಿದ್ಯತಃ ।
ಕೃಷ್ಣಸ್ಯ ನಾರದೋಽಭ್ಯಾಗಾದಾಶ್ರಮಂ ಪ್ರಾಗುದಾಹೃತಮ್ ॥೩೧॥

ತಮಭಿಜ್ಞಾಯ ಸಹಸಾ ಪ್ರತ್ಯುತ್ಥಾಯಾಗತಂ ಮುನಿಮ್ ।
ಪೂಜಯಾಮಾಸ ವಿಧಿವನ್ನಾರದಂ ಸುರಪೂಜಿತಮ್ ॥೩೨॥

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಚತುರ್ಥೋಽಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ನಾಲ್ಕನೇ ಅಧ್ಯಾಯ ಮುಗಿಯಿತು.

*********

# ಅಥ ಪಂಚಮೋಽಧ್ಯಾಯಃ

ಸೂತ ಉವಾಚ-
ಅಥ ತಂ ಸುಖಮಾಸೀನ ಉಪಾಸೀನಂ ಬೃಹಚ್ಛ್ರವಾಃ ।
ದೇವರ್ಷಿಃ ಪ್ರಾಹ ವಿಪ್ರರ್ಷಿಂ ವೀಣಾಪಾಣಿಃ ಸ್ಮಯನ್ನಿವ ॥೧॥

ಶ್ರೀನಾರದ ಉವಾಚ-
ಪಾರಾಶರ್ಯ ಮಹಾಭಾಗ ಭವತಃ ಕಚ್ಚಿದಾತ್ಮನಾ ।
ಪರಿತುಷ್ಯತಿ ಶಾರೀರ ಆತ್ಮಾ ಮಾನಸ ಏವ ವಾ ॥೨॥

ಜಿಜ್ಞಾಸಿತಂ ಸುಸಂಪನ್ನಮಪಿ ತೇ ಮಹದದ್ಭುತಮ್ ।
ಕೃತವಾನ್ ಭಾರತಂ ಯಸ್ತ್ವಂ ಸರ್ವಾರ್ಥಪರಿಬೃಂಹಿತಮ್ ॥೩॥

ಜಿಜ್ಞಾಸಿತಮಧೀತಂ ಚ ಬ್ರಹ್ಮ ಯತ್ತತ್ ಸನಾತನಮ್ ।
ತಥಾಪಿ ಶೋಚಸ್ಯಾತ್ಮಾನಮಕೃತಾರ್ಥ ಇವ ಪ್ರಭೋ ॥೪॥

ಶ್ರೀವ್ಯಾಸ ಉವಾಚ-
ಅಸ್ತ್ಯೇವ ಮೇ ಸರ್ವಮಿದಂ ತ್ವಯೋಕ್ತಂ ತಥಾಪಿ ನಾತ್ಮಾ ಪರಿತುಷ್ಯತೇ ಮೇ ।
ತನ್ಮೂಲಮವ್ಯಕ್ತಮಗಾಧಬೋಧಂ ಪೃಚ್ಛಾಮಹೇ ತ್ವಾಽಽತ್ಮಭವಾತ್ಮಭೂತಮ್ ॥೫॥

ಸ ವೈ ಭವಾನ್ ವೇದ ಸಮಸ್ತಗುಹ್ಯಮುಪಾಸಿತೋ ಯತ್ ಪುರುಷಃ ಪುರಾಣಃ ।
ಪರಾವರೇಶೋ ಮನಸೈವ ವಿಶ್ವಂ ಸೃಜತ್ಯವತ್ಯತ್ತಿ ಗುಣೈರಸಂಗಃ ॥೬॥

ತ್ವಂ ಪರ್ಯಟನ್ನರ್ಕ ಇವ ತ್ರಿಲೋಕೀಮಂತಶ್ಚರೋ ವಾಯುರಿವಾತ್ಮಸಾಕ್ಷೀ ।
ಪರಾವರೇ ಬ್ರಹ್ಮಣಿ ಧರ್ಮತೋ ವ್ರತೈಃ ಸ್ನಾತಸ್ಯ ಮೇ ನ್ಯೂನಮಲಂ ವಿಚಕ್ಷ್ವ ॥೭॥

ಶ್ರೀನಾರದ ಉವಾಚ-
ಭವತಾಽನುದಿತಪ್ರಾಯಂ ಯಶೋ ಭಗವತೋಽಮಲಮ್ ।
ಯೇನೈವಾಸೌ ನ ತುಷ್ಯೇತ ಮನ್ಯೇ ತದ್ ದರ್ಶನಂ ಖಿಲಮ್ ॥೮॥

ಯಥಾ ಧರ್ಮಾದಯೋ ಹ್ಯರ್ಥಾ ಮುನಿವರ್ಯಾನುವರ್ಣಿತಾಃ ।
ನ ತಥಾ ವಾಸುದೇವಸ್ಯ ಮಹಿಮಾ ಹ್ಯನುವರ್ಣಿತಃ ॥೯॥

ನ ತದ್ವಚಶ್ಚಿತ್ರಪದಂ ಹರೇರ್ಯಶೋ ಜಗತ್ಪವಿತ್ರಂ ನ ಗೃಣೀತ ಕರ್ಹಿಚಿತ್ ।
ತದ್ ವಾಯಸಂ ತೀರ್ಥಮುಶಂತಿ ಮಾನಸಾ ನ ಯತ್ರ ಹಂಸಾ ನ್ಯಪತನ್ ಮಿಮಂಕ್ಷಯಾ ॥೧೦॥

ಸ ವಾಗ್ವಿಸರ್ಗೋ ಜನತಾಘವಿಪ್ಲವೋ ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ ।
ನಾಮಾನ್ಯನಂತಸ್ಯ ಯಶೋಽಙ್ಕಿತಾನಿ ಯತ್ ಶೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥೧೧॥

ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ ನ ಶೋಭತೇ ಜ್ಞಾನಮಲಂ ನಿರಂಜನಮ್ ।
ಕುತಃ ಪುನಃ ಶಶ್ವದಭದ್ರಮೀಶ್ವರೇ ನ ಚಾರ್ಪಿತಂ ಕರ್ಮ ಯದಪ್ಯಕಾರಣಮ್ ॥೧೨॥

ಅತೋ  ಮಹಾಭಾಗ ಭವಾನಮೋಘದೃಕ್ ಶುಚಿಶ್ರವಾಃ ಸತ್ಯರತೋ ಧೃತವ್ರತಃ ।
ಉರುಕ್ರಮಸ್ಯಾಖಿಲಬಂಧಮುಕ್ತಯೇ ಸಮಾಧಿನಾಽನುಸ್ಮರ ಯದ್ ವಿಚೇಷ್ಟಿತಮ್ ॥೧೩॥

ಅತೋಽನ್ಯಥಾ ಕಿಂಚನ ಯದ್ ವಿವಕ್ಷಿತಂ ಪೃಥಗ್ ದೃಶಸ್ತತ್ಕೃತರೂಪನಾಮಭಿಃ ।
ನ ಕರ್ಹಿಚಿತ್ ಕ್ವಾಪಿ ಚ ದುಃಸ್ಥಿತಾ ಮತಿರ್ಲಭೇತ ವಾತಾಹತನೌರಿವಾಸ್ಪದಮ್ ॥೧೪॥

ಜುಗುಪ್ಸಿತಂ ಧರ್ಮಕೃತೇಽನುಶಾಸನಂ ಸ್ವಭಾವರಕ್ತಸ್ಯ ಮಹಾನ್ ವ್ಯತಿಕ್ರಮಃ ।
ಯದ್ವಾಕ್ಯತೋ ಧರ್ಮ ಇತೀತರಃ ಸ್ಥಿತೋ ನ ಮನ್ಯತೇ ತಸ್ಯ ನಿವಾರಣಂ ಜನಃ ॥೧೫॥

ವಿಚಕ್ಷಣೋಽಸ್ಯಾರ್ಹತಿ ವೇದಿತುಂ ವಿಭೋರನಂತಪಾರಸ್ಯ ನಿವೃತ್ತಿತಃ ಸುಖಮ್ ।
ಪ್ರವರ್ತಮಾನಸ್ಯ ಗುಣೈರನಾತ್ಮನಸ್ತತೋ ಭವಾನ್ ದರ್ಶಯ ಚೇಷ್ಟಿತಂ ವಿಭೋಃ ॥೧೬॥

ತ್ಯಕ್ತ್ವಾ  ಸ್ವಧರ್ಮಂ ಚರಣಾಂಬುಜಂ ಹರೇರ್ಭಜನ್ನಪಕ್ವೋಽಥ ಪತೇತ್ ತತೋ ಯದಿ ।
ಯತ್ರ ಕ್ವ ವಾ ಭದ್ರಮಭೂದಮುಷ್ಯ  ಕೋ ವಾಽರ್ಥ ಆಪ್ತೋ ಭಜತಾಂ ಸ್ವಧರ್ಮತಃ  ॥೧೭॥

ತಸ್ಯೈವ ಹೇತೋಃ ಪ್ರಯತೇತ ಕೋವಿದೋ ನ ಲಭ್ಯತೇ ಯದ್ ಭ್ರಮತಾಮುಪರ್ಯಧಃ ।
ತಲ್ಲಭ್ಯತೇ ದುಃಖವದನ್ಯತಃ ಸುಖಂ ಕಾಲೇನ ಸರ್ವತ್ರ ಗಭೀರರಂಹಸಾ ॥೧೮॥

ನ ವೈ ಜನೋ ಜಾತು ಕಥಂಚನಾವ್ರಜೇನ್ಮುಕುಂದಸೇವ್ಯನ್ಯವದಂಗ ಸಂಸೃತಿಮ್ ।
ಸ್ಮರನ್ ಮುಕುಂದಾಂಘ್ರ್ಯುಪಗೂಹನಂ ಪುನರ್ವಿಹಾತುಮಿಚ್ಛೇನ್ನ ರಸಗ್ರಹೀ ಜನಃ ॥೧೯॥

ಇದಂ ಹಿ ವಿಶ್ವಂ ಭಗವಾನಿವೇತರೋ ಯತೋ ಜಗತ್ ಸ್ಥಾನನಿರೋಧಸಂಭವಃ ।
ತದ್ಧಿ ಸ್ವಯಂ ವೇದ ಭವಾಂಸ್ತಥಾಪಿ ಪ್ರಾದೇಶಮಾತ್ರಂ ಭವತಃ ಪ್ರದರ್ಶಿತಮ್ ॥೨೦॥

ತ್ವಮಾತ್ಮನಾಽಽತ್ಮಾನಮವೈಹ್ಯಮೋಘದೃಕ್ ಪರಸ್ಯ ಪುಂಸಃ ಪರಮಾತ್ಮನಃ ಕಲಾಮ್ ।
ಅಜಂ ಪ್ರಜಾತಂ ಜಗತಃ ಶಿವಾಯ ತನ್ಮಹಾನುಭಾವಾಭ್ಯುದಯೋಽಪಿ ಗಣ್ಯತಾಮ್ ॥೨೧॥

ಇದಂ ಹಿ ಪುಂಸಸ್ತಪಸಃ ಶ್ರುತಸ್ಯ ವಾ ಸ್ವಿಷ್ಟಸ್ಯ ಸೂಕ್ತಸ್ಯ ಚ ಬುದ್ಧಿದತ್ತಯೋಃ ।
ಅವಿಪ್ಲುತೋಽರ್ಥಃ ಕವಿಭಿರ್ನಿರೂಪಿತೋ ಯದುತ್ತಮಶ್ಲೋಕಗುಣಾನುವರ್ಣನಮ್ ॥೨೨॥

ಅಹಂ ಪುರಾಽತೀತಭವೇಽಭವಂ ಮುನೇ ದಾಸ್ಯಾಸ್ತು ಕಸ್ಯಾಶ್ಚನ ವೇದವಾದಿನಾಮ್ ।
ನಿರೂಪಿತೋ ಬಾಲಕ ಏವ ಯೋಗಿನಾಂ ಶುಶ್ರೂಷಣೇ ಪ್ರಾವೃಷಿ ನಿರ್ವಿವಿಕ್ಷತಾಮ್ ॥೨೩॥

ತೇ ಮಯ್ಯುಪೇತಾಖಿಲಚಾಪಲೇಽರ್ಭಕೇ ದಾಂತೇ ಯತಕ್ರೀಡನಕೇಽನುವರ್ತಿನಿ ।
ಚಕ್ರುಃ ಕೃಪಾಂ ಯದ್ಯಪಿ ತುಲ್ಯದರ್ಶನಾಃ ಶುಶ್ರೂಷಮಾಣೇ ಮುನಯೋಽಲ್ಪಭಾಷಿಣಿ ॥೨೪॥

ಉಚ್ಛಿಷ್ಟಲೇಪಾನನುಮೋದಿತೋ ದ್ವಿಜೈಃ ಸಕೃಚ್ಚ ಭುಂಜೇ ತದಪಾಸ್ತಕಿಲ್ಬಿಷಃ ।
ಏವಂ ಪ್ರವೃತ್ತಸ್ಯ ವಿಶುದ್ಧಚೇತಸಸ್ತದ್ಧರ್ಮ ಏವಾಭಿರುಚಿಃ ಪ್ರಜಾಯತೇ ॥೨೫॥

ತತ್ರಾನ್ವಹಂ ಕೃಷ್ಣಕಥಾಃ ಪ್ರಗಾಯತಾಮನುಗ್ರಹೇಣಾಶೃಣವಂ ಮನೋಹರಾಃ ।
ತಾಃ ಶ್ರದ್ಧಯಾ ಮೇಽನುಸವಂ ವಿಶೃಣ್ವತಃ ಪ್ರಿಯಶ್ರವಸ್ಯಂಗ ತದಾಽಭವನ್ಮತಿಃ ॥೨೬॥

ತಸ್ಮಿಂಸ್ತದಾ ಲಬ್ಧರುಚೇರ್ಮಹಾಮತೇ ಪ್ರಿಯಶ್ರವಸ್ಯಸ್ಖಲಿತಾಮತಿರ್ಮಮ ।
ಯಯಾಽಹಮೇತತ್ ಸದಸತ್ ಸ್ವಮಾಯಯಾ ಪಶ್ಯೇ ಮಯಿ ಬ್ರಹ್ಮಣಿ ಕಲ್ಪಿತಂ ಪರೇ ॥೨೭॥

ಇತ್ಥಂ ಶರತ್ಪ್ರಾವೃಷಿಕಾವೃತೂ ಹರೇರ್ವಿಶೃಣ್ವತೋ ಮೇಽನುಸವಂ ಯಶೋಽಮಲಮ್ ।
ಸಂಕೀರ್ತ್ಯಮಾನಂ ಮುನಿಭಿರ್ಮಹಾತ್ಮಭಿರ್ಭಕ್ತಿಃ ಪ್ರವೃತ್ತಾಽಽತ್ಮರಜಸ್ತಮೋಪಹಾ ॥೨೮॥

ತಸ್ಯೈವಂ ಮೇಽನುರಕ್ತಸ್ಯ ಪ್ರಶ್ರಿತಸ್ಯ ಹತೈನಸಃ ।
ಶ್ರದ್ದಧಾನಸ್ಯ ಬಾಲಸ್ಯ ದಾಂತಸ್ಯಾನುಚರಸ್ಯ ಚ ॥೨೯॥

ಜ್ಞಾನಂ ಗುಹ್ಯತಮಂ ಯತ್ತತ್ ಸಾಕ್ಷಾದ್ಭಗವತೋದಿತಮ್ ।
ಅನ್ವವೋಚನ್ ಗಮಿಷ್ಯಂತಃ ಕೃಪಯಾ ದೀನವತ್ಸಲಾಃ ॥೩೦॥

ಯೇನೈವಾಹಂ ಭಗವತೋ ವಾಸುದೇವಸ್ಯ ವೇಧಸಃ ।
ಮಾಯಾನುಭಾವಮವಿದಂ ಯೇನ ಗಚ್ಛಂತಿ ತತ್ಪದಮ್ ॥೩೧॥

ಏತತ್ ಸಂಸೂಚಿತಂ ಬ್ರಹ್ಮನ್ ತಾಪತ್ರಯಚಿಕಿತ್ಸಿತಮ್ ।
ಯದೀಶ್ವರೇ ಭಗವತಿ ಕರ್ಮ ಬ್ರಹ್ಮಣಿ ಭಾವಿತಮ್ ॥೩೨॥

ಆಮಯೋಽಯಂ ಚ ಭೂತಾನಾಂ ಜಾಯತೇ ಯೇನ ಸುವ್ರತ ।
ತದೇವ ಹ್ಯಾಮಯದ್ರವ್ಯಂ ತತ್  ಪುನಾತಿ ಚಿಕಿತ್ಸಿತಮ್ ॥೩೩॥

ಏವಂ ನೃಣಾಂ ಕ್ರಿಯಾಯೋಗಾಃ ಸರ್ವೇ ಸಂಸೃತಿಹೇತವಃ ।
ತ ಏವಾತ್ಮವಿನಾಶಾಯ ಕಲ್ಪಂತೇ ಕಲ್ಪಿತಾಃ ಪರೇ ॥೩೪॥

ಯದತ್ರ ಕ್ರಿಯತೇ ಕರ್ಮ ಭಗವತ್ಪರಿತೋಷಣಮ್ ।
ಜ್ಞಾನಂ ಯತ್ ತದಧೀನಂ ಹಿ ಭಕ್ತಿಯೋಗಸಮನ್ವಿತಮ್ ॥೩೫॥

ಕುರ್ವಾಣಾ ಯತ್ರ ಕರ್ಮಾಣಿ ಭಗವಚ್ಛಿಕ್ಷಯಾಽಸಕೃತ್ ।
ಗೃಣಂತಿ ಗುಣನಾಮಾನಿ ಕೃಷ್ಣಸ್ಯಾನುಸ್ಮರಂತಿ ಚ ॥೩೬॥

ಓಂ ನಮೋ ಭಗವತೇ ತುಭ್ಯಂ ವಾಸುದೇವಾಯ ಧೀಮಹಿ ।
ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ ॥೩೭॥

ಇತಿ ಮೂರ್ತ್ಯಭಿಧಾನೇನ ಮಂತ್ರಮೂರ್ತಿಮಮೂರ್ತಿಕಮ್ ।
ಯಜತೇ ಯಜ್ಞಪುರುಷಂ ಸ ಸಮ್ಯಗ್ದರ್ಶನಃ ಪುಮಾನ್ ॥೩೮॥

ಇಮಂ ಸ್ವಧರ್ಮನಿಯಮಮವೇತ್ಯ ಮದನುಷ್ಠಿತಮ್ ।
ಅದಾನ್ಮೇ ಜ್ಞಾನಮೈಶ್ವರ್ಯಂ ಸ್ವಸ್ಮಿನ್ ಭಾವಂ ಚ ಕೇಶವಃ ॥೩೯॥

ತ್ವಮಪ್ಯದಭ್ರಶ್ರುತ ವಿಶ್ರುತಂ ವಿಭೋಃ ಸಮಾಪ್ಯತೇ ಯೇನ ವಿದಾಂ ಬುಭುತ್ಸಿತಮ್ ।
ಪ್ರಾಖ್ಯಾಹಿ ದುಃಖೈರ್ಮುಹುರರ್ದಿತಾತ್ಮನಾಂ ಸಂಕ್ಲೇಶನಿರ್ವಾಣಮುಶಂತಿ ನಾನ್ಯಥಾ ॥೪೦॥

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಪಂಚಮೋಽಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಐದನೇ  ಅಧ್ಯಾಯ ಮುಗಿಯಿತು.

# ಅಥ ಷಷ್ಠೋಽಧ್ಯಾಯಃ

ಸೂತ ಉವಾಚ-
ಏವಂ ನಿಶಮ್ಯ ಭಗವಾನ್ ದೇವರ್ಷೇರ್ಜನ್ಮ ಕರ್ಮ ಚ ।
ಭೂಯಃ ಪಪ್ರಚ್ಛ ತಂ ಬ್ರಹ್ಮನ್ ವ್ಯಾಸಃ ಸತ್ಯವತೀಸುತಃ ॥೧॥

ಶ್ರೀವ್ಯಾಸ ಉವಾಚ-
ಭಿಕ್ಷುಭಿರ್ವಿಪ್ರವಸಿತೇ ವಿಜ್ಞಾನಾದೇಷ್ಟೃಭಿಸ್ತವ ।
ವರ್ತಮಾನೋ ವಯಸ್ಯಾದ್ಯೇ ತತಃ ಕಿಮಕರೋದ್ ಭವಾನ್ ॥೨॥

ಸ್ವಾಯಂಭುವ ಕಯಾ ವೃತ್ತ್ಯಾ ವರ್ತಿತಂ ತೇ ಪರಂ ವಯಃ ।
ಕಥಂ ವೇದಮುದಸ್ರಾಕ್ಷೀಃ ಕಾಲೇ ಪ್ರಾಪ್ತೇ ಕಳೇಬರಮ್ ॥೩॥

ಪ್ರಾಕ್ಕಲ್ಪವಿಷಯಾಮೇತಾಂ ಸ್ಮೃತಿಂ ತೇ ಸುರಸತ್ತಮ ।
ನ ಹ್ಯೇವ ವ್ಯವಧಾತ್ ಕಾಲ ಏಷ ಸರ್ವನಿರಾಕೃತಿಃ ॥೪॥

ಶ್ರೀನಾರದ ಉವಾಚ-
ಭಿಕ್ಷುಭಿರ್ವಿಪ್ರವಸಿತೇ ವಿಜ್ಞಾನಾದೇಷ್ಟೃಭಿರ್ಮಮ ।
ವರ್ತಮಾನೋ ವಯಸ್ಯಾದ್ಯೇ ತತ ಏತದಕಾರ್ಷಮ್ ॥೫॥

ಏಕಾತ್ಮಜಾ ಮೇ ಜನನೀ ಯೋಷಿನ್ಮೂಢಾ ಚ ಕಿಂಕರೀ ।
ಮಯ್ಯಾತ್ಮಜೇಽನನ್ಯಗತೌ ಚಕ್ರೇ ಸ್ನೇಹಾನುಬಂಧನಮ್ ॥೬॥

ಸಾಽಸ್ವತಂತ್ರಾ ನ ಕಲ್ಪಾಽಽಸೀದ್ ಯೋಗಕ್ಷೇಮಂ ಮಮೇಚ್ಛತೀ ।
ಈಶಸ್ಯ ಹಿ ವಶೇ ಲೋಕೋ ಯೋಷಾ ದಾರುಮಯೀ ಯಥಾ ॥೭॥

ಅಹಂ ಚ ತದ್ಬ್ರಹ್ಮಕುಲ ಊಷಿವಾಂಸ್ತದಪೇಕ್ಷಯಾ ।
ದಿಗ್ದೇಶಕಾಲಾವ್ಯುತ್ಪನ್ನೋ ಬಾಲಕಃ ಪಂಚಹಾಯನಃ ॥೮॥

ಏಕದಾ ನಿರ್ಗತಾಂ ಗೇಹಾದ್ ದುಹಂತೀಂ ನಿಶಿ ಗಾಂ ಪಥಿ ।
ಸರ್ಪೋಽದಶತ್ ಪದಾ ಸ್ಪೃಷ್ಟಃ ಕೃಪಣಾಂ ಕಾಲಚೋದಿತಃ ॥೯॥

ತದಾ ತದಹಮೀಶಸ್ಯ ಭಕ್ತಾನಾಂ ಸಮಭೀಪ್ಸಿತಮ್ ।
ಅನುಗ್ರಹಂ ಮನ್ಯಮಾನಃ ಪ್ರಾತಿಷ್ಠಂ ದಿಶಮುತ್ತರಾಮ್ ॥೧೦॥

ಸ್ಫೀತಾನ್ ಜನಪದಾಂಸ್ತತ್ರ ಪುರಗ್ರಾಮವ್ರಜಾಕರಾನ್ ।
ಖೇಟಾನ್ ಪಟ್ಟನವಾಟೀಶ್ಚ ವನಾನ್ಯುಪವನಾನಿ ಚ ॥೧೧॥

ವಿಚಿತ್ರಧಾತುವಿಚಿತ್ರಾದ್ರೀನಿಭಭಗ್ನಭುಜದ್ರುಮಾನ್ ।
ಜಲಾಶಯಾಂಶ್ಶಿವಜಲಾನ್ ನಳಿನೀಃ ಸುರಸೇವಿತಾಃ ॥೧೨॥

ಚಿತ್ರಸ್ವನೈಃ ಪತ್ರರಥೈರ್ವಿಭ್ರಮದ್ಭ್ರಮರಶ್ರಿಯಃ ।
ನಳವೇಣುಶರಸ್ತಂಬಕುಶಕೀಚಕಗಹ್ವರಮ್ ॥೧೩॥

ಏಕ ಏವಾತಿಯಾತೋಽಹಮದ್ರಾಕ್ಷಂ ವಿಪಿನಂ ಮಹತ್ ।
ಘೋರಂ ಪ್ರತಿಭಯಾಕಾರಂ ವ್ಯಾಳೋಲೂಕಶಿವಾಜಿರಮ್ ॥೧೪॥

ಪರಿಶ್ರಾಂತೇಂದ್ರಿಯಾತ್ಮಾಽಹಂ ತೃಟ್ಪರೀತೋ ಬುಭುಕ್ಷಿತಃ ।
ಸ್ನಾತ್ವಾ ಪೀತ್ವಾ ಹ್ರದೇ ನದ್ಯಾ ಉಪಸ್ಪೃಷ್ಟೋ ಗತಶ್ರಮಃ ॥೧೫॥

ತಸ್ಮಿನ್ ನಿರ್ಮನುಜೇಽರಣ್ಯೇ ಪಿಪ್ಪಲೋಪಸ್ಥ ಆಶ್ರಿತಃ ।
ಆತ್ಮನಾಽಽತ್ಮಾನಮಾತ್ಮಸ್ಥಂ ಯಥಾಶ್ರುತಮಚಿಂತಯಮ್ ॥೧೬॥

ಸ್ವಪ್ನೋ ಮಾಯಾಗ್ರಹಃ ಶಯ್ಯಾಜಾಗ್ರದಾಭಾಸ ಆತ್ಮನಃ ।
ನಾಮರೂಪಕ್ರಿಯಾವೃತ್ತಿಃ ಸಂವಿಚ್ಛಾಸ್ತ್ರಂ ಪರಂ ಪದಮ್ ॥೧೭॥

ನೇಂದ್ರಿಯಾರ್ಥಂ ನ ಚ ಸ್ವಪ್ನಂ ನ ಸುಪ್ತಂ ನ ಮನೋರಥಮ್ ।
ನ ನಿರೋಧಂ ಚಾನುಗಚ್ಛೇಚ್ಚಿತ್ರಂ ತದ್ ಭಗವತ್ಪದಮ್ ॥೧೮॥

ಸ ಏಕೋ ಭಗವಾನಗ್ರೇ ಕ್ರೀಡಿಷ್ಯನ್ನಿದಮಾತ್ಮನಃ ।
ಸೃಷ್ಟ್ವಾ ವಿಹೃತ್ಯ ತಜ್ಜಗ್ಧ್ವಾ ಉದಾಸ್ತೇ ಕೇವಲಃ ಪುನಃ ॥೧೯॥

ಧ್ಯಾಯತಶ್ಚರಣಾಂಭೋಜಂ ಭಾವನಿರ್ವೃತಚೇತಸಃ ।
ಉತ್ಕಂಠಾಶ್ರುಕಳಾಕ್ಷಸ್ಯ ಹೃದ್ಯಾಸೀನ್ಮೇ ಶನೈರ್ಹರಿಃ ॥೨೦॥

ಪ್ರೇಮಾತಿಭರನಿರ್ಭಿನ್ನ ಪುಲಕಾಂಗೋಽತಿನಿರ್ವೃತಃ ।
ಆನಂದಸಂಪ್ಲವೇ ಲೀನೋ ನಾಪಶ್ಯಮುಭಯಂ ಮುನೇ ॥೧೧॥

ರೂಪಂ ಭಗವತೋ ಯತ್ತನ್ಮನಃಕಾಂತಂ ಸುಖಾವಹಮ್ ।
ಅಪಶ್ಯನ್ ಸಹಸೋತ್ತಸ್ಥೌ ವೈಕ್ಲವ್ಯಾದ್ ದುರ್ಮನಾ ಇವ ॥೧೨॥

ದಿದೃಕ್ಷುಸ್ತದಹಂ ಭೂಯಃ ಪ್ರಣಿಧಾಯ ಮನೋ ಹೃದಿ ।
ವೀಕ್ಷಮಾಣೋಽಪಿ ನಾಪಶ್ಯಮವಿತೃಪ್ತ ಇವಾತುರಃ ॥೧೩॥
ಏವಂ ಯತಂತಂ ವಿಜನೇ ಮಾಮಾಹಾಗೋಚರೋ ಗಿರಾಮ್ ।
ಗಂಭೀರಶ್ಲಕ್ಷ್ಣಯಾ ವಾಚಾ ಶುಚಃ ಪ್ರಶಮಯನ್ನಿವ ॥೧೪॥

ಹಂತಾಸ್ಮಿನ್ ಜನ್ಮನಿ ಭವಾನ್ ನ ಮಾಂ ದ್ರಷ್ಟುಮಿಹಾರ್ಹತಿ ।
ಅವಿಪಕ್ವಕಷಾಯಾಣಾಂ ದುರ್ದರ್ಶೋಽಹಂ ಕುಯೋಗಿನಾಮ್ ॥೧೫॥

ಸಕೃದ್ ಯದ್ದರ್ಶಿತಂ ರೂಪಮೇತತ್ ಕಾಮಾಯ ತೇಽನಘ ।
ಮತ್ಕಾಮಃ ಶನಕೈಃ ಸಾಧು ಸರ್ವಾನ್ ಮುಂಚತಿ ಹೃಚ್ಛಯಾನ್ ॥೧೬॥

ಸತ್ಸೇವಯಾ ದೀರ್ಘಯಾ ವೈ ಜಾತಾ ಮಯಿ ದೃಢಾ ಮತಿಃ ।
ಹಿತ್ವಾಽವದ್ಯಮಿಮಂ ಲೋಕಂ ಗಂತಾ ಮಜ್ಜನತಾಮಸಿ ॥೧೭॥

ಮತಿರ್ಮಯಿ ನಿಬದ್ಧೇಯಂ ನ ವಿಪದ್ಯೇತ ಕರ್ಹಿಚಿತ್ ।
ಪ್ರಜಾಸರ್ಗನಿರೋಧೇಽಪಿ ಸ್ಮೃತಿಶ್ಚ ಮದನುಗ್ರಹಾತ್ ॥೧೮॥

ಏತಾವದುಕ್ತ್ವೋಪರರಾಮ ತನ್ಮಹದ್ಭೂತಂ ನಭೋಲಿಂಗಮಲಿಂಗಮೀಶ್ವರಮ್ ।
ಅಹಂ ಚ ತಸ್ಮೈ ಮಹತಾಂ ಮಹೀಯಸೇ ಶೀರ್ಷ್ಣಾಽವನಾಮಂ ವಿದಧೇಽನುಕಂಪಿತಃ ॥೧೯॥

ನಾಮಾನ್ಯನಂತಸ್ಯ ಗತತ್ರಪಃ ಪಠನ್ ಗುಹ್ಯಾನಿ ಭದ್ರಾಣಿ ಕೃತಾನಿ ಚ ಸ್ಮರನ್ ।
ಗಾಂ ಪರ್ಯಟಂಸ್ತುಷ್ಟಮನಾ ಗತಸ್ಪೃಹಃ ಕಾಲಂ ಪ್ರತೀಕ್ಷನ್ನಪಟೋ ವಿಮತ್ಸರಃ ॥೨೦॥

ಏವಂ ಕೃಷ್ಣಮತೇರ್ಬ್ರಹ್ಮನ್ನಸಕ್ತಸ್ಯಾಮಲಾತ್ಮನಃ ।
ಕಾಲಃ ಪ್ರಾದುರಭೂತ್ ಕಾಲೇ ತಟಿತ್ ಸೌದಾಮಿನೀ ಯಥಾ ॥೨೧॥

ಏವಂ ಮಯಿ ಪ್ರಯುಂಜಾನೇ ಶುದ್ಧಾಂ ಭಾಗವತೀಂ ತನುಮ್ ।
ಪ್ರಾರಬ್ಧಕರ್ಮನಿರ್ವಾಣೋ ನ್ಯಪತತ್ ಪಾಂಚಭೌತಿಕಃ ॥೩೨॥

ಕಲ್ಪಾಂತ ಇದಮಾದಾಯ ಶಯಾನೇಽಮ್ಭಸ್ಯುದನ್ವತಃ ।
ಶಿಶಯಿಷೋರನುಪ್ರಾಣಂ ವಿವೇಶಾಂತರಹಂ ವಿಭೋಃ ॥೩೩॥

ಸಹಸ್ರಯುಗಪರ್ಯಂತ ಉತ್ಥಾಯೇದಂ ಸಿಸೃಕ್ಷತಃ ।
ಮರೀಚಿಮಿಶ್ರಾ ಋಷಯಃ ಪ್ರಾಣೇಭ್ಯೋಽಹಂ ಚ ಜಜ್ಞಿರೇ ॥೩೪॥

ಅಂತರ್ಬಹಿಶ್ಚ ಲೋಕಾಂಸ್ತ್ರೀನ್ ಪರ್ಯೇಮ್ಯಸ್ಕಂದಿತವ್ರತಃ ।
ಅನುಗ್ರಹಾನ್ಮಹಾವಿಷ್ಣೋರವಿಘಾತಗತಿಃ ಕ್ವಚಿತ್ ॥೩೫॥

ದೇವದತ್ತಾಮಿಮಾಂ ವೀಣಾಂ ಸ್ವರಬ್ರಹ್ಮವಿಭೂಷಿತಾಮ್ ।
ಮೂರ್ಛಯಿತ್ವಾ ಹರಿಕಥಾಂ ಗಾಯಮಾನಶ್ಚರಾಮ್ಯಹಮ್ ॥೩೬॥

ಪ್ರಗಾಯತಶ್ಚ ವೀರ್ಯಾಣಿ ತೀರ್ಥಪಾದಃ ಪ್ರಿಯಶ್ರವಾಃ ।
ಆಹೂತ ಇವ ಮೇ ಶೀಘ್ರಂ ದರ್ಶನಂ ಯಾತಿ ಚೇತಸಿ ॥೩೭॥

ಏತದ್ಧ್ಯಾತುರಚಿತ್ತಾನಾಂ ಮಾತ್ರಾಸ್ಪರ್ಶೇಚ್ಛಯಾ ಮುಹುಃ ।
ಭವಸಿಂಧುಪ್ಲವೋ ದೃಷ್ಟೋ ಹರಿಚರ್ಯಾನುವರ್ಣನಮ್ ॥೩೮॥

ಯಮಾದಿಭಿರ್ಯೋಗಪಥೈಃ ಕಾಮಲೋಭಹತೋ ಮುಹುಃ ।
ಮುಕುಂದಸೇವಯಾ ಯದ್ವತ್ ತಥಾತ್ಮಾಽದ್ಧಾ ನ ಶಾಮ್ಯತಿ ॥೩೯॥

ಸರ್ವಂ ತದಿದಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾಽನಘ ।
ಜನ್ಮಕರ್ಮರಹಸ್ಯಂ ಮೇ ಭವತಶ್ಚಾತ್ಮತೋಷಣಮ್ ॥೪೦॥

ಸೂತ ಉವಾಚ-
ಏವಂ ಸಂಭಾಷ್ಯ ಭಗವಾನ್ ನಾರದೋ ವಾಸವೀಸುತಮ್ ।
ಆಮಂತ್ರ್ಯ ವೀಣಾಂ ರಣಯನ್ ಯಯೌ ಯಾದೃಚ್ಛಿಕೋ ಮುನಿಃ ॥೪೧॥

ಅಹೋ ದೇವರ್ಷಿರ್ಧನ್ಯೋಽಯಂ ಯಃ ಕೀರ್ತಿಂ ಶಾರ್ಂಗಧನ್ವನಃ ।
ಗಾಯನ್ ಮಾಧ್ವಾ ಗಿರಾ ತಂತ್ರ್ಯಾ ರಮಯತ್ಯಾತುರಂ ಜಗತ್ ॥೪೨॥

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಷಷ್ಠೋಽಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಆರನೇ ಅಧ್ಯಾಯ ಮುಗಿಯಿತು.

*********

# ಅಥ ಸಪ್ತಮೋಽಧ್ಯಾಯಃ

ಶೌನಕ ಉವಾಚ-
ನಿರ್ಗತೇ ನಾರದೇ ಸೂತ ಭಗವಾನ್ ಬಾದರಾಯಣಃ ।
ಶ್ರುತವಾಂಸ್ತದಭಿಪ್ರೇತಂ ತತಃ ಕಿಮಕರೋದ್ ವಿಭುಃ ॥೧॥

ಸೂತ ಉವಾಚ-
ಬ್ರಹ್ಮನದ್ಯಾಂ ಸರಸ್ವತ್ಯಾ ಆಶ್ರಮಃ ಪಶ್ಚಿಮೇ ತಟೇ ।
ಶಮ್ಯಾಪ್ರಾಸ ಇತಿ ಪ್ರೋಕ್ತ ಋಷೀಣಾಂ ಸತ್ರವರ್ಧನಃ ॥೨॥

ತಸ್ಮಿನ್ ಋಷ್ಯಾಶ್ರಮೇ ವ್ಯಾಸೋ ಬದರೀಷಂಡಮಂಡಿತೇ ।
ಆಸೀನೋಽಪ ಉಪಸ್ಪೃಶ್ಯ ಪ್ರಣಿದಧ್ಯೌ ಮನಶ್ಚಿರಮ್ ॥೩॥

ಭಕ್ತಿಯೋಗೇನ ಮನಸಿ ಸಮ್ಯಕ್ ಪ್ರಣಿಹಿತೇಽಮಲೇ ।
ಅಪಶ್ಯತ್ ಪುರುಷಂ ಪೂರ್ಣಂ ಮಾಯಾಂ ಚ ತದಪಾಶ್ರಯಾಮ್ ॥೪॥

ಯಯಾ ಸಮ್ಮೋಹಿತೋ ಜೀವ ಆತ್ಮಾನಂ ತ್ರಿಗುಣಾತ್ಮಕಮ್ ।
ಪರೋಽಪಿ ಮನುತೇಽನರ್ಥಂ ತತ್ಕೃತಂ ಚಾಭಿಪದ್ಯತೇ ॥೫॥

ಅನರ್ಥೋಪಶಮಂ ಸಾಕ್ಷಾದ್ ಭಕ್ತಿಯೋಗಮಧೋಕ್ಷಜೇ ।
ಲೋಕಸ್ಯಾಜಾನತೋ ವಿದ್ವಾಂಶ್ಚಕ್ರೇ ಸಾತ್ವತಸಂಹಿತಾಮ್ ॥೬॥

ಯಸ್ಯಾಂ ವೈ ಶ್ರೂಯಮಾಣಾಯಾಂ ಕೃಷ್ಣೇ ಪರಮಪೂರುಷೇ ।
ಭಕ್ತಿರುತ್ಪದ್ಯತೇ ಪುಂಸಾಂ ಶೋಕಮೋಹಭಯಾಪಹಾ ॥೭॥

ಸ ಸಂಹಿತಾಂ ಭಾಗವತೀಂ ಕೃತ್ವಾಽನುಕ್ರಮ್ಯ ಚಾತ್ಮಜಮ್ ।
ಶುಕಮಧ್ಯಾಪಯಾಮಾಸ ನಿವೃತ್ತಿನಿರತಂ ಮುನಿಮ್ ॥೮॥

ಶೌನಕ ಉವಾಚ-
ಸ ವೈ ನಿವೃತ್ತಿನಿರತಃ ಸರ್ವತ್ರೋಪೇಕ್ಷಕೋ ಮುನಿಃ ।
ಕಸ್ಯ ವಾ ಬೃಹತೀಮೇತಾಮಾತ್ಮಾರಾಮಃ ಸಮಭ್ಯಸತ್ ॥೯॥

ಆತ್ಮಾರಾಮಾಶ್ಚ ಮುನಯೋ ನಿರ್ಗ್ರಂಥ್ಯಾ ಅಪ್ಯುರುಕ್ರಮೇ ।
ಕುರ್ವಂತ್ಯಹೈತುಕೀಂ ಭಕ್ತಿಮಿತ್ಥಂಭೂತಗುಣೋ ಹರಿಃ ॥೧೦॥

ಹರೇರ್ಗುಣಾಕ್ಷಿಪ್ತಮತಿರ್ಭಗವಾನ್ ಬಾದರಾಯಣಿಃ ।
ಅಧ್ಯಗಾನ್ಮಹದಾಖ್ಯಾನಂ ನಿತ್ಯಂ ವಿಷ್ಣುಜನಪ್ರಿಯಮ್ ॥೧೧॥

ಪರೀಕ್ಷಿತೋಽಥ ರಾಜರ್ಷೇರ್ಜನ್ಮಕರ್ಮವಿಲಾಪನಮ್ ।
ಸಂಸ್ಥಾಂ ಚ ಪಾಂಡುಪುತ್ರಾಣಾಂ ವಕ್ಷ್ಯೇ ಕೃಷ್ಣಕಥೋದಯಾಮ್ ॥೧೨॥

ಯದಾ ಮೃಧೇ ಕೌರವಸೃಂಜಯಾನಾಂ ವೀರೇಷ್ವಥೋ ವೀರಗತಿಂ ಗತೇಷು ।
ವೃಕೋದರಾವಿದ್ಧಗದಾಭಿಮರ್ಶ ಭಗ್ನೋರುದಂಡೇ ಧೃತರಾಷ್ಟ್ರಪುತ್ರೇ ॥೧೩॥

ಭರ್ತುಃ ಪ್ರಿಯಂ ದ್ರೌಣಿರಿತಿ ಸ್ಮ ಪಶ್ಯನ್ ಕೃಷ್ಣಾಸುತಾನಾಂ ಸ್ವಪತಾಂ ಶಿರಾಂಸಿ ।
ಅಪಾಹರದ್ ವಿಪ್ರಿಯಮೇತದಸ್ಯ ಜುಗುಪ್ಸಿತಂ ಕರ್ಮ ವಿಗರ್ಹಯಂತೀ ॥೧೪॥

ಮಾತಾ ಶಿಶೂನಾಂ ನಿಧನಂ ಸುತಾನಾಂ ನಿಶಮ್ಯ ಘೋರಂ ಪರಿತಪ್ಯಮಾನಾ ।
ತದಾಽರುದದ್ ಬಾಷ್ಪಕಲಾಕುಲಾಕ್ಷೀ ತಾಂ ಸಾಂತ್ವಯನ್ನಾಹ ಕಿರೀಟಮಾಲೀ ॥೧೫॥

ತನ್ಮಾ ಶುಚಸ್ತೇ ಪ್ರಮೃಜಾಶ್ರು ಭದ್ರೇ ಯದ್ ಬ್ರಹ್ಮಬಂಧೋಃ ಶಿರ ಆತತಾಯಿನಃ ।
ಗಾಂಡೀವಮುಕ್ತೈರ್ವಿಶಿಖೈರುಪಾಹರೇ ತ್ವಾಕ್ರಮ್ಯ ತತ್ ಸ್ನಾಸ್ಯಸಿ ನೇತ್ರಜೈರ್ಜಲೈಃ ॥೧೬॥

ಇತಿ ಪ್ರಿಯಾಂ ವಲ್ಗುವಿಚಿತ್ರಜಲ್ಪೈಃ ಸ ಸಾಂತ್ವಯಿತ್ವಾಽಚ್ಯುತಮಿತ್ರಸೂತಃ ।
ಅಭ್ಯದ್ರವದ್ ದಂಸಿತ ಉಗ್ರಧನ್ವಾ ಕಪಿಧ್ವಜೋ ಗುರುಪುತ್ರಂ ರಥೇನ ॥೧೭॥

ತಮಾಪತಂತಂ ಸ ವಿಲೋಕ್ಯ ದೂರಾತ್ ಕುಮಾರಹೋದ್ವಿಗ್ನಮನಾ ರಥೇನ ।
ಪರಾದ್ರವತ್ ಪ್ರಾಣಪರೀಪ್ಸುರುರ್ವ್ಯಾಂ ಯಾವದ್ಗಮಂ ರುದ್ರಭಯಾದ್ ಯಥಾ ಕಃ ॥೧೮॥

ಯದಾಽಶರಣಮಾತ್ಮಾನಮೈಕ್ಷತ ಶ್ರಾಂತವಾಹನಃ ।
ಅಸ್ತ್ರಂ ಬ್ರಹ್ಮಶಿರೋ ಮೇನ ಆತ್ಮತ್ರಾಣಂ ದ್ವಿಜಾತ್ಮಜಃ ॥೧೯॥

ಅಥೋಪಸ್ಪೃಶ್ಯ ಸಲಿಲಂ ಸಂದಧೇ ತತ್ ಸಮಾಹಿತಃ ।
ಅಜಾನನ್ನಪಿ ಸಂಹಾರಂ ಪ್ರಾಣಕೃಚ್ಛ್ರ ಉಪಸ್ಥಿತೇ ॥೨೦॥

ತತಃ ಪ್ರಾದುಷ್ಕೃತಂ ತೇಜಃ ಪ್ರಚಂಡಂ ಸರ್ವತೋದಿಶಮ್ ।
ಪ್ರಾಪತತ್ ತದಭಿಪ್ರೇಕ್ಷ್ಯ ವಿಷ್ಣುಂ ಜಿಷ್ಣುರುವಾಚ ಹ ॥೨೦॥

ಅರ್ಜುನ ಉವಾಚ
ಕೃಷ್ಣ ಕೃಷ್ಣ ಮಹಾಬಾಹೋ ಭಕ್ತಾನಾಮಭಯಂಕರ ।
ತ್ವಮೇಕೋ ದಹ್ಯಮಾನಾನಾಮಪವರ್ಗೋಽಸಿ ಸಂಸೃತೇಃ ॥೨೨॥

ತ್ವಮಾದ್ಯಃ ಪುರುಷಃ ಸಾಕ್ಷಾದೀಶ್ವರಃ ಪ್ರಕೃತೇಃ ಪರಃ ।
ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ॥೨೩॥

ಸ ಏವ ಜೀವಲೋಕಸ್ಯ ಮಾಯಾಮೋಹಿತಚೇತಸಃ ।
ವಿಧಿತ್ಸುಃ ಸ್ವೇನ ವೀರ್ಯೇಣ ಶ್ರೇಯೋ ಧರ್ಮಾದಿಲಕ್ಷಣಮ್ ॥೨೪॥

ತಥಾಽಯಂ ಚಾವತಾರಸ್ತೇ ಭುವೋ ಭಾರಜಿಹೀರ್ಷಯಾ ।
ಸ್ವಾನಾಮನನ್ಯಭಾವಾನಾಮನುಧ್ಯಾನಾಯ ಚಾಸಕೃತ್ ॥೨೫॥

ಕಿಮಿದಂ ಸ್ವಿತ್ ಕುತೋ ವೇತಿ ದೇವದೇವ ನ ವೇದ್ಮ್ಯಹಮ್ ।
ಸರ್ವತೋಮುಖಮಾಯಾತಿ ತೇಜಃ ಪರಮದಾರುಣಮ್ ॥೨೬॥

ಶ್ರೀಭಗವಾನುವಾಚ-
ವೇತ್ಥೇದಂ ದ್ರೋಣಪುತ್ರಸ್ಯ ಬ್ರಾಹ್ಮಮಸ್ತ್ರಂ ಪ್ರದರ್ಶಿತಮ್ ।
ನೈವಾಸೌ ವೇದ ಸಂಹಾರಂ ಪ್ರಾಣಬಾಧ ಉಪಸ್ಥಿತೇ ॥೨೭॥

ನ ಹ್ಯಸ್ಯಾನ್ಯತಮಂ ಕಿಂಚಿದಸ್ತ್ರಂ ಪ್ರತ್ಯವಕರ್ಷಣಮ್ ।
ಜಹ್ಯಸ್ತ್ರತೇಜ ಉನ್ನದ್ಧಮಸ್ತ್ರಜ್ಞೋ ಹ್ಯಸ್ತ್ರತೇಜಸಾ ॥೨೮॥

ತ ಉವಾಚ-
ಶ್ರುತ್ವಾ ಭಗವತಾ ಪ್ರೋಕ್ತಂ ಫಾಲ್ಗುನಃ ಪರವೀರಹಾ ।
ಸ್ಪೃಷ್ಟ್ವಾಽಽಪಸ್ತಂ ಪರಿಕ್ರಮ್ಯ ಬ್ರಾಹ್ಮಂ ಬ್ರಾಹ್ಮಾಯ ಸಂದಧೇ ॥೨೯॥

ಸಂಹತ್ಯಾನ್ಯೋನ್ಯಮುಭಯೋಸ್ತೇಜಸೀ ಶರಸಂವೃತೇ ।
ಆವೃತ್ಯ ರೋದಸೀ ಖಂ ಚ ವವೃಧಾತೇಽರ್ಕವಹ್ನಿವತ್ ॥೩೦॥

ದೃಷ್ಟ್ವಾಽಸ್ತ್ರತೇಜಸ್ತು ತಯೋಸ್ತ್ರೀಂಲ್ಲೋಕಾನ್ ಪ್ರದಹನ್ಮಹತ್ ।
ದಹ್ಯಮಾನಾಃ ಪ್ರಜಾಃ ಸರ್ವಾಃ ಸಾಂವರ್ತಕಮಮಂಸತ ॥೩೧॥

ಪ್ರಜೋಪದ್ರವಮಾಲಕ್ಷ್ಯ ಲೋಕವ್ಯತಿಕರಂ ಚ ತಮ್ ।
ಮತಂ ಚ ವಾಸುದೇವಸ್ಯ ಸಂಜಹಾರಾರ್ಜುನೋ ದ್ವಯಮ್ ॥೩೨॥

ತತ ಆಸಾದ್ಯ ತರಸಾ ದಾರುಣಂ ಗೌತಮೀಸುತಮ್ ।
ಬಬಂಧಾಮರ್ಷತಾಮ್ರಾಕ್ಷಃ ಪಶುಂ ರಶನಯಾ ಯಥಾ ॥೩೩॥

ಶಿಬಿರಾಯ ನಿನೀಷಂತಂ ರಜ್ಜ್ವಾ ಬದ್ಧ್ವಾ ರಿಪುಂ ಬಲಾತ್ ।
ಪ್ರಾಹಾರ್ಜುನಂ ಪ್ರಕುಪಿತೋ ಭಗವಾನಂಬುಜೇಕ್ಷಣಃ ॥೩೪॥

ಮೈನಂ ಪಾರ್ಥಾರ್ಹಸಿ ತ್ರಾತುಂ ಬ್ರಹ್ಮಬಂಧುಮಿಮಂ ಜಹಿ ।
ಯೋಽಸಾವನಾಗಸಃ ಸುಪ್ತಾನವಧೀನ್ನಿಶಿ ಬಾಲಕಾನ್ ॥೩೫॥

ಮತ್ತಂ ಪ್ರಮತ್ತಮುನ್ಮತ್ತಂ ಸುಪ್ತಂ ಬಾಲಂ ಸ್ತ್ರಿಯಂ ಜಡಮ್ ।
ಪ್ರಪನ್ನಂ ವಿರಥಂ ಭೀತಂ ನ ರಿಪುಂ ಹಂತಿ ಧರ್ಮವಿತ್ ॥೩೬॥

ಸ್ವಪ್ರಾಣಾನ್ ಯಃ ಪರಪ್ರಾಣೈಃ ಪ್ರಪುಷ್ಣಾತ್ಯಘೃಣಃ ಖಲಃ ।
ತದ್ವಧಸ್ತಸ್ಯ ಹಿ ಶ್ರೇಯೋ ಯದ್ದೋಷಾದ್ ಯಾತ್ಯಧಃ ಪುಮಾನ್ ॥೩೭॥

ಪ್ರತಿಶ್ರುತಂ ಚ ಭವತಾ ಪಾಂಚಾಲ್ಯೈ ಶೃಣ್ವತೋ ಮಮ ।
ಆಹರಿಷ್ಯೇ ಶಿರಸ್ತಸ್ಯ ಯಸ್ತೇ ಮಾನಿನಿ ಪುತ್ರಹಾ ॥೩೮॥

ತದಸೌ ವಧ್ಯತಾಂ ಪಾಪ ಆತತಾಯ್ಯಾತ್ಮಬಂಧುಹಾ ।
ಭರ್ತುಶ್ಚ ವಿಪ್ರಿಯಂ ವೀರ ಕೃತವಾನ್ ಕುಲಪಾಂಸನಃ ॥೩೯॥

ಏವಂ ಪರೀಕ್ಷತಾ ಧರ್ಮಂ ಪಾರ್ಥಃ ಕೃಷ್ಣೇನ ಚೋದಿತಃ ।
ನೈಚ್ಛದ್ ಹಂತುಂ ಗುರುಸುತಂ ಯದ್ಯಪ್ಯಾತ್ಮಹನಂ ಮಹಾನ್ ॥೪೦॥

ಅಥೋಪೇತ್ಯ ಸ್ವಶಿಬಿರಂ ಗೋವಿಂದಪ್ರಿಯಸಾರಥಿಃ ।
ನ್ಯವೇದಯತ್ತಂ ಪ್ರಿಯಾಯೈ ಶೋಚಂತ್ಯಾ ಆತ್ಮಜಾನ್ ಹತಾನ್ ॥೪೧॥

ತಥಾऽऽಹೃತಂ ಪಶುವತ್ ಪಾಶಬದ್ಧಮವಾಙ್ಮುಖಂ ಕರ್ಮಜುಗುಪ್ಸಿತೇನ ।
ನಿರೀಕ್ಷ್ಯ ಕೃಷ್ಣಾऽಪಕೃತಂ ಗುರೋಃ ಸುತಂ ವಾಮಸ್ವಭಾವಾ ಕೃಪಯಾ ನನಾಮ ॥೪೨॥

ಉವಾಚಾಸಹಂತ್ಯಸ್ಯ ಬಂಧನಾನಯನಂ ಸತೀ ।
ಮುಚ್ಯತಾಂಮುಚ್ಯತಾಮೇಷ ಬ್ರಾಹ್ಮಣೋ ನಿತರಾಂ ಗುರುಃ ॥೪೩॥

ಸರಹಸ್ಯೋ ಧನುರ್ವೇದಃ ಸವಿಸರ್ಗೋಪಸಂಯಮಃ ।
ಅಸ್ತ್ರಗ್ರಾಮಂ ಚ ಭವತಾ ಶಿಕ್ಷಿತೋ ಯದನುಗ್ರಹಾತ್ ॥೪೪॥

ಸ ಏಷ ಭಗವಾನ್ ದ್ರೋಣಃ ಪ್ರಜಾರೂಪೇಣ ವರ್ತತೇ ।
ತಸ್ಯಾತ್ಮನೋऽರ್ಧಂ ಪತ್ನ್ಯಾಸ್ತೇ ನಾನ್ವಗಾದ್ ವೀರಸೂಃ ಕೃಪೀ ॥೪೫॥

ತದ್ಧರ್ಮಜ್ಞ ಮಹಾಭಾಗ ಭವದ್ಭಿಃ ಕೌರವಂ ಕುಲಮ್ ।
ವೃಜಿನಂ ನಾರ್ಹತಿ ಪ್ರಾಪ್ತುಂ ಪೂಜ್ಯಂ ವಂದ್ಯಮಭೀಕ್ಷ್ಣಶಃ ॥೪೬॥

ಮಾ ರೋದೀದಸ್ಯ ಜನನೀ ಗೌತಮೀ ಪತಿದೇವತಾ ।
ಯಥಾऽಹಂ ಮೃತವತ್ಸಾऽऽರ್ತಾ ರೋದಿಮ್ಯಶ್ರುಮುಖೀ ಮುಹುಃ ॥೪೭॥

ಯೈಃ ಕೋಪಿತಂ ಬ್ರಹ್ಮಕುಲಂ ರಾಜನ್ಯೈರಕೃತಾತ್ಮಭಿಃ ।
ತತ್ಕುಲಂ ಪ್ರದಹತ್ಯಾಶು ಸಾನುಬಂಧಂ ಶುಚಾರ್ಪಿತಮ್ ॥೪೮॥

ಸೂತ ಉವಾಚ-
ಧರ್ಮ್ಯಂ ನ್ಯಾಯ್ಯಂ ಸಕರುಣಂ ನಿರ್ವ್ಯಳೀಕಂ ಸಮಂ ಮಹತ್ ।
ರಾಜಾ ಧರ್ಮಸುತೋ ರಾಜ್ಞ್ಯಾಃಪ್ರತ್ಯನಂದದ್ ವಚೋ ದ್ವಿಜಾಃ ॥೪೯॥

ನಕುಲಃ ಸಹದೇವಶ್ಚ ಯುಯುಧಾನೋ ಧನಂಜಯಃ ।
ಭಗವಾನ್ ದೇವಕೀಪುತ್ರೋ ಯೇ ಚಾನ್ಯೇ ಯಾಶ್ಚ ಯೋಷಿತಃ ॥೫೦॥

ತತ್ರಾಹಾಮರ್ಷಿತೋ ಭೀಮಸ್ತಸ್ಯ ಶ್ರೇಯಾನ್ ವಧಃ ಸ್ಮೃತಃ ।
ನ ಭರ್ತುರ್ನಾತ್ಮನಶ್ಚಾರ್ಥೇ ಯೋऽಹನ್ ಸುಪ್ತಾನ್ ಶಿಶೂನ್ ವೃಥಾ ॥೫೧॥

ನಿಶಮ್ಯ ಭೀಮಗದಿತಂ ದ್ರೌಪದ್ಯಾಶ್ಚ ಚತುರ್ಭುಜಃ ।
ಆಲೋಕ್ಯ ವದನಂ ಸಖ್ಯುರಿದಮಾಹ ಹಸನ್ನಿವ ॥೫೧॥

ಶ್ರೀಭಗವಾನುವಾಚ-
ಬ್ರಹ್ಮಬಂಧುರ್ನ ಹಂತವ್ಯ ಆತತಾಯೀ ವಧಾರ್ಹಣಃ ।
ಮಯ್ಯೈವೋಭಯಮಾಮ್ನಾತಂ ಪರಿಪಾಹ್ಯನುಶಾಸನಮ್ ॥೫೨॥

ಕುರು ಪ್ರತಿಶ್ರುತಂ ಸತ್ಯಂ ಯತ್ತತ್ ಸಾಂತ್ವಯತಾ ಪ್ರಿಯಾಮ್ ।
ಮತಂ ಚ ಭೀಮಸೇನಸ್ಯ ಪಾಂಚಾಲ್ಯೈ ಮಹ್ಯಮೇವ ಚ ॥೫೪॥

ಸೂತ ಉವಾಚ-
ಅರ್ಜುನಃ ಸಹಸಾऽऽಜ್ಞಾಯ ಹರೇರ್ಹಾರ್ದಮಥಾಸಿನಾ ।
ಮಣಿಂ ಜಹಾರ ಮೂರ್ಧನ್ಯಂ ದ್ವಿಜಸ್ಯ ಸಹಮೂರ್ಧಜಮ್ ॥೫೫॥

ವಿಮುಚ್ಯ ರಶನಾಬದ್ಧಂ ಬಾಲಹತ್ಯಾಹತಪ್ರಭಮ್ ।
ತೇಜಸಾ ಮಣಿನಾ ಹೀನಂ ಶಿಬಿರಾನ್ನಿರಯಾಪಯತ್ ॥೫೬॥

ಬಂಧನಂ ದ್ರವಿಣಾದಾನಂ ಸ್ಥಾನಾನ್ನಿರ್ಯಾಪಣಂ ತಥಾ ।
ಏಷ ಹಿ ಬ್ರಹ್ಮಬಂಧೂನಾಂ ವಧೋ ನಾನ್ಯೋऽಸ್ತಿ ದೈಹಿಕಃ ॥೫೭॥

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಸಪ್ತಮೋऽಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಏಳನೇ ಅಧ್ಯಾಯ ಮುಗಿಯಿತು.

# ಅಥ ಅಷ್ಟಮೋಧ್ಯಾಯಃ

ಸೂತ ಉವಾಚ-
ಪುತ್ರಶೋಕಾತುರಾಃ ಸರ್ವೇ ಪಾಂಡವಾಃ ಸಹ ಕೃಷ್ಣಯಾ ।
ಸ್ವಾನಾಂ ಮೃತಾನಾಂ ಯತ್ ಕೃತ್ಯಂ ಚಕ್ರುರ್ನಿರ್ಹರಣಾದಿಕಮ್ ॥೧॥

ಅಥೋ ನಿಶಾಮಯಾಮಾಸ ಕೃಷ್ಣಾಯೈ ಭಗವಾನ್ ಪುರಾ ।
ಪತಿತಾಯಾಃ ಪಾದಮೂಲೇ ರುದಂತ್ಯಾ ಯತ್ ಪ್ರತಿಶ್ರುತಮ್ ॥೨॥

ಪಶ್ಯ ರಾಜ್ಞ್ಯ ರಿದಾರಾಂಸ್ತೇ ರುದತೋ ಮುಕ್ತಮೂರ್ಧಜಾನ್ ।
ಆಲಿಂಗ್ಯ ಸ್ವಪತೀನ್ ಭೀಮಗದಾಭಗ್ನೋರುವಕ್ಷಸಃ ॥೩॥

ಅಥ ತೇ ಸಂಪರೇತಾನಾಂ ಸ್ವಾನಾಮುದಕಮಿಚ್ಛತಾಂ ।
ದಾತುಂ ಸಕೃಷ್ಣಾ ಗಂಗಾಯಾಂ ಪುರಸ್ಕೃತ್ಯ ಯಯುಃ ಸ್ತ್ರಿಯಃ ॥೪॥

ತೇ ನಿನೀಯೋದಕಂ ಸರ್ವೇ ವಿಲಪ್ಯ ಚ ಭೃಶಂ ಪುನಃ ।
ಆಪ್ಲುತಾ ಹರಿಪಾದಾಬ್ಜರಜಃಪೂತಸರಿಜ್ಜಲೇ ॥೫॥

ತತ್ರಾಸೀನಂ ಕುರುಪತಿಂ ಧೃತರಾಷ್ಟ್ರಂ ಸಹಾನುಜಮ್ ।
ಗಾಂಧಾರೀಂ ಪುತ್ರಶೋಕಾರ್ತಾಂ ಪೃಥಾಂ ಕೃಷ್ಣಾಂ ಚ ಕೇಶವಃ ॥೬॥

ಸಾಂತ್ವಯಾಮಾಸ ಮುನಿಭಿರ್ಹತಪುತ್ರಾಂಛುಚಾರ್ಪಿತಾನ್ ।
ಭೂತೇಷು ಕಾಲಸ್ಯ ಗತಿಂ ದರ್ಶಯನ್ನ ಪ್ರತಿಕ್ರಿಯಾಮ್ ॥೭॥

ಘಾತಯಿತ್ವಾಽಸತೋ ರಾಜ್ಞಾಃ ಕಚಸ್ಪರ್ಶಹತಾಯುಷಃ ।
ಸಾಧಯಿತ್ವಾಽಜಾತಶತ್ರೋಃ ಸ್ವಾರಾಜ್ಯಂ ಕಿತವೈರ್ಹೃತಮ್ ॥೮॥

ಯಾಜಯಿತ್ವಾಽಶ್ವಮೇಧೈಸ್ತಂ ತ್ರಿಭಿರುತ್ತಮಕಲ್ಪಕೈಃ ।
ತದ್ಯಶಃ ಪಾವನಂ ದಿಕ್ಷು ಶತಮನ್ಯೋರಿವಾತನೋತ್ ॥೯॥

ಆಮಂತ್ರ್ಯ ಪಾಂಡುಪುತ್ರಾಂಶ್ಚ ಶೈನೇಯೋದ್ಧವಸಂಯುತಃ ।
ದ್ವೈಪಾಯನಾದಿಭಿರ್ವಿಪ್ರೈಃ ಪೂಜಿತೈಃ ಪ್ರತಿಪೂಜಿತಃ ॥೧೦॥

ಗಂತುಂ ಕೃತಮತಿರ್ಬ್ರಹ್ಮನ್ ದ್ವಾರಕಾಂ ರಥಮಾಸ್ಥಿತಃ ।
ಉಪಲೇಭೇಽಭಿಧಾವಂತೀಮುತ್ತರಾಂ ಭಯವಿಹ್ವಲಾಮ್ ॥೧೧॥

ಉತ್ತರೋವಾಚ-
ಪಾಹಿಪಾಹಿ ಮಹಾಬಾಹೋ ದೇವದೇವ ಜಗತ್ಪತೇ ।
ನಾನ್ಯಂ ತ್ವದಭಯಂ ಪಶ್ಯೇ ಯತ್ರ ಮೃತ್ಯುಃ ಪರಸ್ಪರಮ್ ॥೧೨॥

ಅಭಿದ್ರವತಿ ಮಾಮೀಶ ಶರಸ್ತಪ್ತಾಯಸೋ ವಿಭೋ ।
ಕಾಮಂ ದಹತು ಮಾಂ ನಾಥ ಮಾ ಮೇ ಗರ್ಭೋ ನಿಪಾತ್ಯತಾಮ್ ॥೧೩॥

ಸೂತ ಉವಾಚ-
ಉಪಧಾರ್ಯ ವಚಸ್ತಸ್ಯಾ ಭಗವಾನ್ ಭಕ್ತವತ್ಸಲಃ ।
ಅಪಾಂಡವಮಿದಂ ಕರ್ತುಂ ದ್ರೌಣೇರಸ್ತ್ರಮಬುಧ್ಯತ ॥೧೪॥

ತರ್ಹ್ಯೇವಾಥ ಭೃಗುಶ್ರೇಷ್ಠ ಪಾಂಡವಾಃ ಪಂಚ ಸಾಯಕಾನ್ ।
ಆತ್ಮನೋಽಭಿಮುಖಾನ್ ದೀಪ್ತಾನಾಲಕ್ಷ್ಯಾಸ್ತ್ರಾಣ್ಯುಪಾದದುಃ ॥೧೫॥

ವ್ಯಸನಂ ವೀಕ್ಷ್ಯ ತತ್ ತೇಷಾಮನನ್ಯವಿಷಯಾತ್ಮನಾಮ್ ।
ಸುದರ್ಶನೇನ ಸ್ವಾಸ್ತ್ರೇಣ ಸ್ವಾನಾಂ ರಕ್ಷಾಂ ವ್ಯಧಾದ್ ವಿಭುಃ ॥೧೬॥

ಅಂತಃಸ್ಥಃ ಸರ್ವಭೂತಾನಾಮಾತ್ಮಾ ಯೋಗೇಶ್ವರೋ ಹರಿಃ ।
ಸ್ವಮಾಯಯಾಽಽವೃಣೋದ್ ಗರ್ಭಂ ವೈರಾಟ್ಯಾಃ ಕುರುತಂತವೇ ॥೧೭॥

ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಮ್ ।
ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ ಭೃಗೂದ್ವಹ ॥೧೮॥

ಮಾ ಮಂಸ್ಥಾ ಹ್ಯೇತದಾಶ್ಚರ್ಯಂ ಸರ್ವಾಶ್ಚರ್ಯಮಯೇಽಚ್ಯುತೇ ।
ಯ ಇದಂ ಮಾಯಯಾ ದೇವ್ಯಾ ಸೃಜತ್ಯವತಿ ಹಂತ್ಯಜಃ ॥೧೯॥

ಬ್ರಹ್ಮತೇಜೋವಿನಿರ್ಮುಕ್ತೈರಾತ್ಮಜೈಃ ಸಹ ಕೃಷ್ಣಯಾ ।
ಪ್ರಯಾಣಾಭಿಮುಖಂ ಕೃಷ್ಣಮಿದಮಾಹ ಪೃಥಾ ಸತೀ ॥೨೦॥
ಪೃಥೋವಾಚ-

ನಮಸ್ಯೇ ಪುರುಷಂ ತ್ವಾದ್ಯಮೀಶ್ವರಂ ಪ್ರಕೃತೇಃ ಪರಮ್ ।
ಅಲಕ್ಷ್ಯಂ ಸರ್ವಭೂತಾನಾಮಂತರ್ಬಹಿರಪಿ ಧ್ರುವಮ್ ॥೧೧॥

ಮಾಯಾಯವನಿಕಾಚ್ಛನ್ನೋ ಮಾಯಾಽಧೋಕ್ಷಜ ಮರ್ತ್ಯಯಾ ।
ನ ಲಕ್ಷ್ಯಸೇ ಮೂಢದೃಶಾ ನಟೋ ನಾಟ್ಯಚರೋ ಯಥಾ ॥೧೨॥

ತಥಾ ಪರಮಹಂಸಾನಾಂ ಮುನೀನಾಮಮಲಾತ್ಮನಾಮ್ ।
ಭಕ್ತಿಯೋಗವಿಧಾನಾರ್ಥಂ ಕಥಂ ಪಶ್ಯೇಮ ಹಿ ಸ್ತ್ರಿಯಃ ॥೧೩॥

ಕೃಷ್ಣಾಯ ವಾಸುದೇವಾಯ ದೇವಕೀನಂದನಾಯ ಚ ।
ನಂದಗೋಪಕುಮಾರಾಯ ಗೋವಿಂದಾಯ ನಮೋ ನಮಃ ॥೧೪॥

ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ ।
ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥೧೫॥

ಯಥಾ ಹೃಷೀಕೇಶ ಖಲೇನ ದೇವಕೀ ಕಂಸೇನ ರುದ್ಧಾಽತಿಚಿರಂ ಶುಚಾರ್ಪಿತಾ ।
ವಿಮೋಚಿತಾಽಹಂ ಚ ಸಹಾತ್ಮಜಾ ವಿಭೋ ತ್ವಯೈವ ನಾಥೇನ ಮುಹುರ್ವಿಪದ್ಗಣಾತ್ ॥೧೬॥

ವಿಷಾನ್ಮಹಾಗ್ನೇಃ ಪುರುಷಾದದಂಶನಾದಸತ್ಸಭಾಯಾ ವನವಾಸಕೃಚ್ಛ್ರತಃ ।
ಮೃಧೇ ಮೃಧೇಽನೇಕಮಹಾರಥಾಸ್ತ್ರತೋ ದ್ರೌಣ್ಯಸ್ತ್ರತಶ್ಚಾಸ್ಮ ಹರೇಽಭಿರಕ್ಷಿತಾಃ ॥೧೭॥

ವಿಪದಃ ಸಂತು ನಃ ಶಶ್ವತ್ ತತ್ರತತ್ರ ಜಗತ್ಪತೇ ।
ಭವತೋ ದರ್ಶನಂ ಯತ್ ಸ್ಯಾದಪುನರ್ಭವದರ್ಶನಮ್ ॥೧೮॥

ಜನ್ಮೈಶ್ವರ್ಯಶ್ರುತಶ್ರೀಭಿರೇಧಮಾನಮದಃ ಪುಮಾನ್ ।
ನಾರ್ಹ ಇತ್ಯಭಿಧಾತುಂ ವೈ ತ್ವಾಮಕಿಂಚನಗೋಚರಮ್ ॥೧೯॥

ನಮೋಽಕಿಂಚನವಿತ್ತಾಯ ನಿವೃತ್ತಗುಣವೃತ್ತಯೇ ।
ಆತ್ಮಾರಾಮಾಯ ಶಾಂತಾಯ ಕೈವಲ್ಯಪತಯೇ ನಮಃ ॥೨೦॥

ಮನ್ಯೇ ತ್ವಾಂ ಕಾಲಮೀಶಾನಮನಾದಿನಿಧನಂ ಪರಮ್ ।
ಸಮಂ ಚರಂತಂ ಸರ್ವತ್ರ ಭೂತಾನಾಂ ಯನ್ಮಿಥಃ ಕಲಿಃ ॥೨೧॥

ನ ವೇದ ಕಶ್ಚಿದ್ ಭಗವಂಶ್ಚಿಕೀರ್ಷಿತಂ ತವೇಹಮಾನಸ್ಯ ನೃಣಾಂ ವಿಡಂಬನಮ್ ।
ನ ಯಸ್ಯ ಕಶ್ಚಿದ್ ದಯಿತೋಽಸ್ತಿ ಕರ್ಹಿಚಿತ್ ದ್ವೇಷ್ಯಶ್ಚ ಯಸ್ಮಿನ್ ವಿಷಮಾ ಮತಿರ್ನೃಣಾಮ್ ॥೨೯॥

ಜನ್ಮ ಕರ್ಮ ಚ ವಿಶ್ವಾತ್ಮನ್ನಜಸ್ಯಾಕರ್ತುರಾತ್ಮನಃ ।
ತಿರ್ಯಙ್ ನೃಷಯಾದಸ್ಸು ತದತ್ಯಂತವಿಡಂಬನಮ್ ॥೩೦॥

ಗೋಪ್ಯಾದದೇ ತ್ವಯಿ ಕೃತಾಗಸಿ ದಾಮ ತಾವದ್ ಯಾ ತೇ ದಶಾಽಶ್ರುಕಲಿಲಾಂಜನಸಂಭ್ರಮಾಕ್ಷಮ್ ।
ವಕ್ತ್ರಂ ವಿನಮ್ಯ ಭಯಭಾವನಯಾ ಸ್ಥಿತಸ್ಯ ಸಾ ಮಾಂ ವಿಮೋಹಯತಿ ಭೀರಪಿ ಯಂ ಬಿಭೇತಿ ॥೩೧॥

ಕೇಚಿದಾಹುರಜಂ ಜಾತಂ ಪುಣ್ಯಶ್ಲೋಕಸ್ಯ ಕೀರ್ತಯೇ ।
ಯದೋಃ ಪ್ರಿಯಸ್ಯಾನ್ವವಾಯೇ ಮಲಯಸ್ಯೇವ ಚಂದನಮ್ ॥೩೨॥

ಅಪರೇ ವಸುದೇವಸ್ಯ ದೇವಕ್ಯಾಂ ಯಾಚಿತೋಽಭ್ಯಗಾತ್ ।
ಅಜಸ್ತ್ವಮಸ್ಯ ಕ್ಷೇಮಾಯ ವಧಾಯ ಚ ಸುರದ್ವಿಷಾಮ್ ॥೩೩॥

ಭಾರಾವತರಣಾಯಾನ್ಯೇ ಭುವೋ ನಾವ ಇವೋದಧೌ ।
ಸೀದಂತ್ಯಾ ಭೂರಿಭಾರೇಣ ಜಾತೋ ಹ್ಯಾತ್ಮಭುವಾಽರ್ಥಿತಃ ॥೩೪॥

ಭವೇಽಸ್ಮಿನ್ ಕ್ಲಿಶ್ಯಮಾನಾನಾಮವಿದ್ಯಾಕಾಮಕರ್ಮಭಿಃ ।
ಶ್ರವಣಸ್ಮರಣಾರ್ಹಾಣಿ ಕರಿಷ್ಯನ್ನಿತಿ ಕೇಚನ ॥೩೫॥

ಶೃಣ್ವಂತಿ ಗಾಯಂತಿ ಗೃಣಂತ್ಯಭೀಕ್ಷ್ಣಶಃ ಸ್ಮರಂತಿ ನಂದಂತಿ ತವೇಹಿತಂ ಜನಾಃ ।
ತ ಏವ ಪಶ್ಯಂತ್ಯಚಿರೇಣ ತಾವಕಂ ಭವಪ್ರವಾಹೋಪರಮಂ ಪದಾಂಬುಜಮ್ ॥೩೬॥

ಅಪ್ಯದ್ಯ ನಸ್ತ್ವಂ ಸ್ವಕೃತೇಹಿತಃ ಪ್ರಭೋ ಜಿಹಾಸಸಿ ಸ್ವಿತ್ ಸುಹೃದೋಽನುಜೀವಿನಃ ।
ಯೇಷಾಂ ನ ಚಾನ್ಯದ್ ಭವತಃ ಪದಾಂಬುಜಾತ್ ಪರಾಯಣಂ ರಾಜಸು ಯೋಜಿತಾಂಹಸಾಮ್ ॥೩೭॥

ತೇ ವಯಂ ನಾಮರೂಪಾಭ್ಯಾಂ ಯದುಭಿಃ ಸಹ ಪಾಂಡವಾಃ ।
ಭವತೋ ದರ್ಶನಂ ಯರ್ಹಿ ಹೃಷೀಕಾಣಾಮಿವೇಶಿತುಃ ॥೩೮॥

ನೇಯಂ ಶೋಭಿಷ್ಯತೇ ತತ್ರ ಯಥೇದಾನೀಂ ಗದಾಧರ ।
ತ್ವತ್ಪದೈರಂಕಿತಾ ಭಾತಿ ಸ್ವಲಕ್ಷಣವಿಲಕ್ಷಿತೈಃ ॥೩೯॥

ಇಮೇ ಜನಪದಾಃ ಸ್ವೃದ್ಧಾಃ ಸುಪಕ್ವೌಷಧಿವೀರುಧಃ ।
ವನಾದ್ರಿನದ್ಯುದನ್ವಂತೋ ಹ್ಯೇಧಂತೇ ತವ ವೀಕ್ಷಿತಾಃ ॥೪೩॥

ಅಥ ವಿಶ್ವೇಶ ವಿಶ್ವಾತ್ಮನ್ ವಿಶ್ವಮೂರ್ತೇ ಸ್ವಕೇಷು ಮೇ ।
ಸ್ನೇಹಪಾಶಮಿಮಂ ಛಿಂಧಿ ದೃಢಂ ಪಾಂಡುಷು ವೃಷ್ಣಿಷು ॥೪೪॥

ತ್ವಯಿ ಮೇಽನನ್ಯವಿಷಯಾ ಮತಿರ್ಮಧುಪತೇಽಸಕೃತ್ ।
ರತಿಮುದ್ವಹತಾದದ್ಧಾ ಗಂಗೇವೌಘಮುದನ್ವತಿ ॥೪೫॥

ಶ್ರೀಕೃಷ್ಣ ಕೃಷ್ಣಸಖ ವೃಷ್ಣಿವೃಷಾವನಿಧ್ರುಗ್ರಾಜನ್ಯವಂಶದಹಮರವಂದ್ಯವೀರ್ಯ ।
ಗೋವಿಂದ ಗೋದ್ವಿಜಸುರಾರ್ತಿಹರಾವತಾರ ಯೋಗೇಶ್ವರಾಖಿಲಗುರೋ ಭಗವನ್ನಮಸ್ತೇ ॥೪೬॥

ಸೂತ ಉವಾಚ-
ಪೃಥಯೇತ್ಥಂ ಕಳಪದೈಃ ಪರಿಗೀತಾಖಿಲೋದಯಃ ।
ಮಂದಂ ಜಹಾಸ ವೈಕುಂಠೋ ಮೋಹಯನ್ ಯೋಗಮಾಯಯಾ ॥೪೭॥

ತಾಂ ಬಾಢಮಿತ್ಯುಪಾಮಂತ್ರ್ಯ ಪ್ರವಿಶ್ಯ ಗಜಸಾಹ್ವಯಮ್ ।
ಸ್ತ್ರಿಯಶ್ಚ ಸ್ವಪುರಂ ಯಾಸ್ಯನ್ ಪ್ರೇಮ್ಣಾ ರಾಜ್ಞಾ ನಿವಾರಿತಃ ॥೪೮॥

॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಅಷ್ಟಮೋಽಧ್ಯಾಯಃ ॥
ಭಾಗವತ ಮಹಾಪುರಾಣದ ಮೊದಲ ಸ್ಕಂಧದ ಎಂಟನೇ ಅಧ್ಯಾಯ ಮುಗಿಯಿತು.

*********

# ಅಥ ನವಮೋಽಧ್ಯಾಯಃ

ಸೂತ ಉವಾಚ-

ವ್ಯಾಸಾದ್ಯೈರೀಶ್ವರೇಹಾಜ್ಞೈಃ ಕೃಷ್ಣೇನಾದ್ಭುತಕರ್ಮಣಾ ।
ಪ್ರಬೋಧಿತೋಽಪೀತಿಹಾಸೈಃ ನಾಬುಧ್ಯತ ಶುಚಾರ್ಪಿತಃ ॥೧॥

ಆಹ ರಾಜಾ ಧರ್ಮಸುತಃ ಚಿಂತಯನ್ ಸುಹೃದಾಂ ವಧಮ್ ।
ಪ್ರಾಕೃತೇನಾತ್ಮನಾ ವಿಪ್ರಾಃ ಸ್ನೇಹಮೋಹವಶಂ ಗತಃ ॥೨॥

ಅಹೋ ಮೇ ಪಶ್ಯತಾಜ್ಞಾನಂ ಹೃದಿ ರೂಢಂ ದುರಾತ್ಮನಃ ।
ಪಾರಕ್ಯಸ್ಯೈವ ದೇಹಸ್ಯ ಬಹ್ವ್ಯೋ ಮೇಽಕ್ಷೌಹಿಣೀರ್ಹತಾಃ ॥೩॥

ಬಾಲದ್ವಿಜಸುಹೃನ್ಮಿತ್ರ ಪಿತೃಭ್ರಾತೃಗುರುದ್ರುಹಃ ।
ನ ಮೇ ಸ್ಯಾನ್ನಿರಯಾನ್ಮೋಕ್ಷೋ ಹ್ಯಪಿ ವರ್ಷಾಯುತಾಯುತೈಃ ॥೪॥

ನೈನೋ ರಾಜ್ಞಃ ಪ್ರಜಾಭರ್ತುಃ ಧರ್ಮ್ಯೇ ಯುದ್ಧೇ ವಧೋ ದ್ವಿಷಾಮ್ ।
ಇತಿ ಮೇ ನ ತು ಬೋಧಾಯ ಕಲ್ಪತೇ ಶಾಶ್ವತಂ ವಚಃ ॥೫॥

ಸ್ತ್ರೀಣಾಂ ಮದ್ಧತಬಂಧೂನಾಂ ದ್ರೋಹೋ ಯೋಽಸಾವಿಹಾನ್ವಿತಃ ।
ಕರ್ಮಭಿರ್ಗೃಹಮೇಧೀಯೈರ್ನಾಹಂ ಕಲ್ಪೋ ವ್ಯಪೋಹಿತುಮ್ ॥೬॥

ಯಥಾ ಪಂಕೇನ ಪಂಕಾಂಭಃ ಸುರಯಾ ವಾ ಸುರಾಕೃತಮ್ ।
ಭೂತಹತ್ಯಾಂ ತಥೈವೈನಾಂ ನ ಯಜ್ಞೋ ಮಾರ್ಷ್ಟುಮರ್ಹತಿ ॥೭॥

ಸೂತ ಉವಾಚ-

ಇತಿ ಭೀತಃ ಪ್ರಜಾದ್ರೋಹಾತ್ ಸರ್ವಧರ್ಮವಿವಿತ್ಸಯಾ ।
ತತೋ ವಿಶಸನಂ ಪ್ರಾಯಾದ್ ಯತ್ರ ದೇವವ್ರತೋಽಪತತ್ ॥೮॥

ತದಾ ತದ್ ಭ್ರಾತರಃ ಸರ್ವೇ ಸದಶ್ವೈಃ ಸ್ವರ್ಣಭೂಷಿತೈಃ ।
ಅನ್ವಗಚ್ಛನ್ ರಥೈರ್ವಿಪ್ರಾ ವ್ಯಾಸಧೌಮ್ಯಾದಯಸ್ತಥಾ ॥೯॥

ಭಗವಾನಪಿ ವಿಪ್ರರ್ಷೇ ರಥೇನ ಸಧನಂಜಯಃ ।
ಸ ತೈರ್ವ್ಯರೋಚತ ನೃಪಃ ಕುಬೇರ ಇವ ಗುಹ್ಯಕೈಃ ॥೧೦॥

ದೃಷ್ಟ್ವಾ ನಿಪತಿತಂ ಭೂಮೌ ದಿವಶ್ಚ್ಯುತಮಿವಾಮರಮ್ ।
ಪ್ರಣೇಮುಃ ಪಾಂಡವಾ ಭೀಷ್ಮಂ ಸಾನುಗಾಃ ಸಹ ಚಕ್ರಿಣಃ ॥೧೧॥

ತತ್ರ ಬ್ರಹ್ಮರ್ಷಯಃ ಸರ್ವೇ ದೇವರ್ಷಯಶ್ಚ ಸತ್ತಮ ।
ರಾಜರ್ಷಯಶ್ಚ ತತ್ರಾಸನ್ ದ್ರಷ್ಟುಂ ಭರತಪುಂಗವಮ್ ॥೧೨॥

ಪರ್ವತೋ ನಾರದೋ ಧೌಮ್ಯಃ ಭಗವಾನ್ ಬಾದರಾಯಣಃ ।
ಬೃಹದಶ್ವೋ ಭರದ್ವಾಜಃ ಸಶಿಷ್ಯೋ ರೇಣುಕಾಸುತಃ ॥೧೩॥

ವಸಿಷ್ಠ ಇಂದ್ರಪ್ರಮತಿ ಸ್ತ್ರಿತೋ ಗೃತ್ಸಮದೋಽಸಿತಃ ।
ಕಕ್ಷೀವಾನ್ ಗೌತಮೋಽತ್ರಿಶ್ಚ ಕೌಶಿಕೋಽಥ ಸುದರ್ಶನಃ ॥೧೪॥

ಅನ್ಯೇ ಚ ಮುನಯೋ ಬ್ರಹ್ಮನ್ ಬ್ರಹ್ಮರಾತಾದಯೋಽಮಲಾಃ ।
ಶಿಷ್ಯೈರುಪೇತಾ ಆಜಗ್ಮುಃ ಕಶ್ಯಪಾಂಗಿರಸಾದಯಃ ॥೧೫॥

ತಾನ್ ಸಮೇತಾನ್ ಮಹಾಭಾಗ ಉಪಲಭ್ಯ ವಸೂತ್ತಮಃ ।
ಪೂಜಯಾಮಾಸ ಧರ್ಮಜ್ಞೋ ದೇಶಕಾಲವಿಭಾಗವಿತ್ ॥೧೬॥

ಕೃಷ್ಣಂ ಚ ತತ್ಪ್ರಭಾವಜ್ಞ ಆಸೀನಂ ಜಗದೀಶ್ವರಮ್ ।
ಹೃದಿಸ್ಥಂ ಪೂಜಯಾಮಾಸ ಮಾಯಯೋಪಾತ್ತವಿಗ್ರಹಮ್ ॥೧೭॥

ಪಾಂಡುಪುತ್ರಾನುಪಾಸೀನಾನ್ ಪ್ರಶ್ರಯಪ್ರೇಮಸನ್ನತಾನ್ ।
ಅಭ್ಯಾಚಷ್ಟಾನುರಾಗಾಸ್ರೈರಂಧೀಭೂತೇನ ಚಕ್ಷುಷಾ ॥೧೮॥

ಭೀಷ್ಮ ಉವಾಚ-
ಅಹೋ ಕಷ್ಟಮಹೋಽನ್ಯಾಯ್ಯಂ ಯದ್ ಯೂಯಂ ಧರ್ಮನಂದನ ।
ಜೀವಿತುಂ ನಾರ್ಹಥ ಕ್ಲಿಷ್ಟಂ ವಿಪ್ರಧರ್ಮಾಚ್ಯುತಾಶ್ರಯಾಃ ॥೧೯॥

